ರಾಷ್ಟ್ರೀಯ ಜೀವನ ಚರಿತ್ರೆ ಮಾಲೆ

# ರಮಣ ಮಹರ್ಷಿ

ಕೆ. ಸ್ವಾಮಿನಾಥನ್

ಅನುವಾದ

ಎನ್. ಬಾಲಸುಬ್ರಹ್ಮಣ್ಯ



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

# ನಿವೇದನೆ

ರಮಣಾಶ್ರಮದ ಅಧಿಕಾರಿಗಳು ಆಶ್ರಮದ ಪ್ರಕಟಣೆಗಳಿಂದ ಕೆಲವು ಭಾಗಗಳನ್ನು ಈ ಪುಸ್ತಕದಲ್ಲಿ ಉಲ್ಲೇಖಿಸಲು ನೀಡಿರುವ ಅನುಮತಿಗೆ ಲೇಖಕನ ಧನ್ಯವಾದಗಳು.

1935ರ ಆಗಸ್ಟ್‌ನಲ್ಲಿ ಮಹರ್ಷಿಗಳನ್ನು ಸಂದರ್ಶಿಸಿದ ವಿಷಯವಾಗಿ ಶ್ರೀ ಮೊರಾರ್ಜಿ ದೇಸಾಯಿ ಅವರು ತಮ್ಮ ''ನನ್ನ ಬದುಕಿನ ಕಥೆ'' (ಸಂಪುಟ-1)ಯಲ್ಲಿ ಹೀಗೆ ಹೇಳಿದ್ದಾರೆ:

> ''ರಮಣ ಮಹರ್ಷಿಗಳನ್ನು ಅವರು ಸಾಮಾನ್ಯವಾಗಿ ಕುಳಿತಿರುತ್ತಿದ್ದ ದೊಡ್ಡ ಹಜಾರದಲ್ಲಿ ನೋಡುವ ಸದವಕಾಶ ನನಗೆ ಒದಗಿತು... ಶಾಂತಿ ಮತ್ತು ಸಂತೋಷಗಳಿಂದ ಬೆಳಗುತ್ತಿದ್ದ ಅವರ ಮುಖದ ಮೇಲೆ ನಾನು ಒಂದು ದಿವ್ಯ ಪ್ರಭೆಯನ್ನು ಕಂಡೆ... ಒಂದು ಗಂಟೆಗೂ ಮೀರಿ ನಾನು ಕುಳಿತು ಸುಮ್ಮನೆ ಅವರ ಮುಖವನ್ನು ನೋಡುತ್ತಿದ್ದೆ. ಬೇರೆ ಯಾರದೇ ಮುಖದ ಮೇಲೆ ಆ ಪ್ರಭೆ, ಆ ಸಂತೋಷ ಅಥವಾ ಆ ಶಾಂತಿಯನ್ನು ಇಂದಿನವರೆಗೆ ನಾನು ಕಂಡಿಲ್ಲ... ನಾನು ಸಂಪೂರ್ಣವಾಗಿ ಪ್ರಶಾಂತನಾಗಿದ್ದೆ. ರಮಣ ಮಹರ್ಷಿ ಭಗವಂತನನ್ನು ಅಥವಾ ಸತ್ಯವನ್ನು ಸಾಕ್ಷಾತ್ಕಾರ ಮಾಡಿಕೊಂಡಿದ್ದರು ಎಂಬುದನ್ನು ನನಗೆ ದೃಢಪಡಿಸಿದ್ದು ಈ ಅನುಭವವೇ.''

# ವಿಷಯ ಸೂಚಿ

## ಭಾಗ 1- ವ್ಯಕ್ತಿ



## ಭಾಗ 2- ಗುರು

# ಭಾಗ I- ವ್ಯಕ್ತಿ

## ಅಧ್ಯಾಯ 1

## ಹಿನ್ನಲೆ: ಇತಿಹಾಸ ಮತ್ತು ಐತಿಹ್ಯ

ಉಪದೇಶ ಮತ್ತು ಮೇಲ್ಪಂಕ್ತಿಗಳ ಮೂಲಕ ಜ್ಞಾನಮಾರ್ಗವನ್ನು ಬೋಧಿಸಿದ ಉಪನಿಷತ್ತಿನ ಗುರುಗಳಿಂದ ಹಿಡಿದು ಬುದ್ಧ ಮತ್ತು ಶಂಕರರನ್ನು ಒಳಗೊಂಡ ಜ್ಞಾನಿಗಳ ಪರಂಪರೆಗೆ ರಮಣಮಹರ್ಷಿ ಸೇರಿದ್ದಾರೆ. ಶಂಕರರ (ಕ್ರಿ.ಶ. 788-820) ತರುವಾಯ ಮಹರ್ಷಿಗಳು ಈ ಮಾರ್ಗದ ಅತ್ಯಂತ ಪ್ರಮುಖ ಪ್ರತಿನಿಧಿ. ಪ್ರೊಫೆಸರ್ ಡಿ.ಎಸ್. ಶರ್ಮರ ಮಾತುಗಳಲ್ಲಿ: ''ಚಾರಿತ್ರಿಕವಾಗಿ ಶಂಕರರಿಂದ ಈಚೆಗೆ ಜ್ಞಾನಕ್ಕೆ ಇಷ್ಟು ಮಹತ್ವ ಸಿಕ್ಕಿರಲಿಲ್ಲವೆಂದು ನಾವು ಹೇಳಬಹುದು. ಶಂಕರರು ಅದ್ವೈತವನ್ನು ಸ್ಥಾಪಿಸಿದ ಅನಂತರದಲ್ಲಿ ವಿವಿಧ ಭಕ್ತಿ ಪಂಥಗಳು ಜ್ಞಾನಯೋಗವನ್ನು ಮುಳುಗಿಸಿಬಿಟ್ಟಿದ್ದವು. ಮೊದಲಿಗೆ ರಾಮಾನುಜರ ಮತ್ತು ಮಧ್ವರ ದೇವತಾವಾದಗಳು ಮತ್ತು ಶೈವಸಿದ್ಧಾಂತ ಇದ್ದವು. ಅನಂತರ ಹದಿನೈದು ಮತ್ತು ಹದಿನಾರನೆಯ ಶತಮಾನಗಳಲ್ಲಿನ ಉತ್ತರ ಭಾರತದ ಭಕ್ತಿ ಪಂಥಗಳು ಇಸ್ಲಾಮಿನ ದೇವತಾವಾದ ಮತ್ತು ಪ್ರಚಾರಗಳ ನೆರೆಯಲ್ಲಿ ಒಂದು ದೃಢವಾದ ನೆಲೆಯನ್ನು ಹಿಡಿಯಬೇಕಾಯಿತು. ಹತ್ತೊಂಬತ್ತನೆಯ ಶತಮಾನದ ಸಮಾಜ ಚಳುವಳಿಗಳೂ ಕ್ರೈಸ್ತ ದೇವತಾವಾದಕ್ಕೆ ಎದುರಾಗಿ ಸಂಪೂರ್ಣವಾಗಿ ದೇವತಾವಾದಿಗಳೇ ಆಗಿದ್ದವು. ತರುವಾಯ ಹಿಂದೂಮತವು ಅದರ ಎಲ್ಲ ಅಂಶಗಳಲ್ಲಿ ಪುನರುಜ್ಜೀವಿತವಾದಾಗಲೂ, ಆಧುನಿಕ ಪ್ರಪಂಚಕ್ಕೆ ಭಕ್ತಿಯೇ ಅತ್ಯಂತ ಸುಲಭವಾದ ಮಾರ್ಗವೆಂದು ಶ್ರೀರಾಮಕೃಷ್ಣರು ಹೇಳಿದರು. ಹನ್ನೊಂದು ಶತಮಾನಗಳ ಕಾಲ ನಿರರ್ಗಳವಾಗಿ ಹರಿಯುತ್ತಿದ್ದ ಭಕ್ತಿಯ ಈ ವ್ಯಾಪಕ ಮುಖ್ಯ ಪ್ರವಾಹಕ್ಕೆ ಎದುರಾಗಿ ಶ್ರೀರಮಣಮಹರ್ಷಿಗಳ ನಗ್ನ ಮೌನ ಮೂರ್ತಿ ಒಂದು ಬಂಡೆಯಂತೆ ನಿಂತಿದೆ. ಮಾನವನ ಆಧ್ಯಾತ್ಮಿಕ ವ್ಯವಸ್ಥೆಯಲ್ಲಿ ಭಕ್ತಿಯ ಸ್ಥಾನವನ್ನು ಅವರು ಅರಿತಿರಲಿಲ್ಲವೆಂದಲ್ಲ. ತದ್ವಿರುದ್ಧವಾಗಿ, ಭಾವಪೂರ್ಣವಾದ ಅನೇಕ ಸ್ತೋತ್ರಗಳನ್ನು ರಚಿಸಿದ ಶಂಕರರಂತೆ, ಅವರು ಅರುಣಾಚಲ ಶಿವನನ್ನು ಹೊಗಳುವ ಐದು ಸ್ತೋತ್ರಗಳನ್ನು ಬರೆದರು. ನಮಗೆ ಆಶ್ಚರ್ಯ ತರುವಂತೆ, ಇವುಗಳಲ್ಲಿ ಒಂದರಲ್ಲಿ ಅವರು ಶೃಂಗಾರಭಕ್ತಿಯ ಚಿರಪರಿಚಿತ ನಾಯಕನಾಯಕಿ ಪ್ರತಿಮೆಯನ್ನು ಬಳಸುತ್ತಾರೆ..... ಆದರೆ ಇಷ್ಟೆಲ್ಲ ಹೇಳಿ ಆದ ಮೇಲೂ, ಅವರು ನಿರಂತರವಾಗಿ ಪ್ರತಿಪಾದಿಸಿದ ವಿಚಾರಮಾರ್ಗವು ಜ್ಞಾನಯೋಗದ ಪುನರುಜ್ಜೀವನದ ಪರ ಪ್ರಬಲವಾದ ವಾದವಾಗಿತ್ತು. ಆದರೆ ತಾವು ಜೀವಿಸಿದ್ದ ಯುಗಧರ್ಮಕ್ಕೆ ಅನುಗುಣವಾಗಿ ಅವರು ಅದನ್ನು ಅದು ಹುಟ್ಟಿದ ವಿಶಿಷ್ಟ ಮತದಿಂದ ಹೊರತೆಗೆದು ಎಲ್ಲ ಮತಗಳ ಜನರಿಗೂ ಅದು ದೊರೆಯುವಂತೆ ಮಾಡಿದರು.''

ಜಿಮ್ಮರ್‌ನ 'ಭಾರತೀಯ ದರ್ಶನಗಳು' (Philosophies of India) ಎಂಬ ಗ್ರಂಥಕ್ಕೆ ಅನುಬಂಧವಾಗಿ ಕೊಟ್ಟಿರುವ ಕಾಲನಕ್ಷೆಯಲ್ಲಿ ಶ್ರೀರಾಮಕೃಷ್ಣರು (1836-1886) ಡಾರ್ವಿನ್‌ಗೂ, ಶ್ರೀರಮಣರು ಐನ್‌ಸ್ಟೈನ್‌ಗೂ ಸಂವಾದಿಯಾಗಿದ್ದಾರೆ. ಈ ಎರಡೂ ಜೋಡಿಗಳು ಕಾಲದಲ್ಲಿ ಮಾತ್ರವಲ್ಲದೆ ತಮ್ಮ ಸಾಧನೆ ಮತ್ತು ಐತಿಹಾಸಿಕ ಮಹತ್ವಗಳಲ್ಲೂ ಸಮನಾಗಿದ್ದಾರೆಂಬುದನ್ನು ಗಮನಿಸುವುದು ಸೂಕ್ತವಾಗಿದೆ. ಮಾನವನ ಆಧ್ಯಾತ್ಮಿಕತೆಯ ಇಡೀ ಜೈವಿಕ ವಿಕಾಸವನ್ನು ಪರಮಹಂಸರು ಸಂಗ್ರಹಿಸಿ ಪುನರಾವರ್ತನೆ ಮಾಡಿದಂತೆ ಮಹರ್ಷಿಗಳು ವೈಜ್ಞಾನಿಕ ಅನ್ವೇಷಕನಂತೆ ಸತ್ಯದ ಆಳವಾದ ಆಯಾಮಗಳನ್ನು ಹೊಸದಾಗಿ ತಾವೇ ಪರಿಶೋಧಿಸಿದರು ಮತ್ತು ತಾವು ನಡೆಸಿದ ಪ್ರಯೋಗವನ್ನು ಇತರರೂ ಮತ್ತೆ ನಡೆಸಿ ತಾವು ಕಂಡುಹಿಡಿದುದನ್ನು ನೇರ ಅನುಭವದ ಮೂಲಕ ತಾಳೆ ನೋಡಲು ಆತ್ಮಾನ್ವೇಷಣೆಯ ತಂತ್ರವಿಧಾನವೊಂದನ್ನು ಅವರು ನಮಗೆ ಪೂರ್ಣವಾಗಿ ಸಿದ್ಧಗೊಳಿಸಿದರು.

ಚೈತನ್ಯವಸ್ತುವು ತನಗಿಷ್ಟಬಂದಂತೆ ವರ್ತಿಸುತ್ತದೆ, ಆತ್ಮವು ತಾನು ವರಿಸಿದವನಿಗೆ ತನ್ನನ್ನು ಪ್ರಕಟಪಡಿಸಿಕೊಳ್ಳುತ್ತದೆ ಮತ್ತು ಜೀವನ್ಮುಕ್ತಿಗೆ ಕಾರಣವನ್ನು ವಿವರಿಸಲಾಗುವುದಿಲ್ಲ ಎನ್ನುವುದು ನಿಜ. ಆದರೂ ಕಮಲವನ್ನು ಸೃಷ್ಟಿಸುವಲ್ಲಿ ಸರ್ವಶಕ್ತನಾದ ಸೂರ್ಯನ ಜೊತೆಗೆ ಅದರ ಕಿರಿಯ ಸಹಕಾರಿಯಾಗಿ ಕೊಳಕ್ಕೂ ಸ್ವಲ್ಪ ಗೌರವ ಸಲ್ಲಬೇಕು. ಸಾಕ್ಷಾತ್ಕಾರದ ಬಗ್ಗೆ ಭವಿಷ್ಯ ನುಡಿಯಲಾಗುವುದಿಲ್ಲ; ಅದನ್ನು ಉಂಟುಮಾಡಲೂ ಆಗುವುದಿಲ್ಲ. ಆದರೆ ಅದು ಸಂಭವಿಸಿದ ತರುವಾಯ ಅದನ್ನು ವಿವರಿಸಬಹುದು. ಭಾವಪೂರ್ಣತೆಯಿಂದ ಕೂಡಿದ ಬಂಗಾಳಿ ಸಂಸ್ಕೃತಿಗೆ ಶ್ರೀರಾಮಕೃಷ್ಣರು ಆಗಿರುವಂತೆ ಮತ್ತು ಚುರುಕಾದ ವಸ್ತುನಿಷ್ಠ ವ್ಯಾವಹಾರಿಕತೆಯಿಂದ ಕೂಡಿದ ಗುಜರಾತಿ ಸಂಸ್ಕೃತಿಗೆ ಗಾಂಧೀಜಿ ಆಗಿರುವಂತೆ, ಶ್ರೀ ರಮಣರು ನಿಷ್ಠುರವಾದ ಬೌದ್ಧಿಕ ನಿಷ್ಪೃಷ್ಟತೆಯಿಂದ ಕೂಡಿದ ತಮಿಳು ಸಂಸ್ಕೃತಿಯ ಒಂದು ಪ್ರಾತಿನಿಧಿಕ ಹೂವು ಆಗಿದ್ದಾರೆ. ಆಶ್ಚರ್ಯವೆಂದರೆ ಈ ಆಧುನಿಕ ಯುಗದಲ್ಲಿಯೂ, ಮಾತೃದೇವತೆಯ ಪೂಜೆಯ ಶ್ರೀರಾಮಕೃಷ್ಣರನ್ನು ಶ್ರೀಮಂತವಾದ ಆಧ್ಯಾತ್ಮಿಕ ಅನುಭವಕ್ಕೆ ಒಯ್ದುದು, ರಾಮನ ನಿರಂತರ ಸ್ಮರಣೆಯು ಸಾರ್ವಜನಿಕ ಕ್ಷೇತ್ರದಲ್ಲಿ ಹಾಗೂ ಸ್ವಂತ ಜೀವನದಲ್ಲಿ ಧರ್ಮವನ್ನು ಪರಿಪಾಲಿಸಲು ಬೇಕಾದ ಶಕ್ತಿ ಮತ್ತು ಮಾರ್ಗದರ್ಶನವನ್ನು ಗಾಂಧೀಜಿಗೆ ನೀಡಿದ್ದು ಮತ್ತು ಶಿವನ ಸಹವಾಸವು ವಿದ್ಯಾರ್ಥಿಯಾದ ರಮಣರಿಗೆ ಸಾವಿನ ದರ್ಶನವನ್ನೂ ಆತ್ಮದ ಸಾಕ್ಷಾತ್ಕಾರವನ್ನೂ ತಂದುದು. ಪ್ರಾಚೀನರು ನಿರೂಪಿಸಿದ ನಾಲ್ಕು ಪ್ರಮುಖ ಮಾರ್ಗಗಳಾದ ಭಕ್ತಿ, ಕರ್ಮ, ಯೋಗ ಮತ್ತು ಜ್ಞಾನ ಇವನ್ನು ಈ ನಾಡಿನ ಇತ್ತೀಚಿನ ನಾಲ್ವರು ಆಧ್ಯಾತ್ಮಿಕ ಮಹಾಪುರುಷರು-ಶ್ರೀರಾಮಕೃಷ್ಣ, ಗಾಂಧೀಜಿ, ಶ್ರೀ ಅರವಿಂದ ಮತ್ತು ಶ್ರೀ ಮಹರ್ಷಿ-ಸುಸ್ಪಷ್ಟವಾಗಿ ಮತ್ತು ಪ್ರಭಾವಿಯಾಗಿ ಪ್ರತಿನಿಧಿಸಿದುದೂ ಆಶ್ಚರ್ಯದ ಸಂಗತಿಯೇ.

ಮಹರ್ಷಿಗಳ ಬದುಕಿಗೆ ಸಂಬಂಧಿಸಿದ ಸ್ಥಳಗಳು ಸ್ವತ: ಪವಿತ್ರ ಸ್ಮೃತಿಗಳಿಂದ ತುಂಬಿವೆ. ತಿರುಚುಳಿ ಶಿವನಿಗೆ ಪವಿತ್ರವಾಗಿತ್ತು. ಅನೇಕ ಶತಮಾನಗಳ ಹಿಂದೆಯೇ ಸಂತ ಸುಂದರಮೂರ್ತಿ ಮತ್ತು ಮಾಣಿಕ್ಯ ವಾಚಕರ್ ಅದನ್ನು ಹಾಡಿ ಹೊಗಳಿದ್ದಾರೆ. ಐವತ್ತರ ದಶಕದಲ್ಲಿ ತಮ್ಮ ಭೂದಾನ ಪಾದಯಾತ್ರೆಯ ಸಂದರ್ಭದಲ್ಲಿ ವಿನೋಬಾ ಭಾವೆಯವರು

ಮಹರ್ಷಿಗಳ ಹುಟ್ಟಿದ ಮನೆಯಲ್ಲಿ ಸ್ವಲ್ಪ ಕಾಲ ಮೌನವಾಗಿ ಕುಳಿತಿರಲು ತಾವು ಸಾಗಬೇಕಾಗಿದ್ದ ಹಾದಿಯನ್ನು ಬಿಟ್ಟು ಅನೇಕ ಮೈಲಿ ದೂರ ತುಳಿದಿದ್ದರು. ಆಧುನಿಕ ಪ್ರಪಂಚಕ್ಕೆ ಮಹರ್ಷಿಯೊಬ್ಬರನ್ನು ನೀಡಿದ್ದಕ್ಕಾಗಿ ಈ ಚಿಕ್ಕ ಊರಿನ ಸಜ್ಜನರನ್ನು ತಮ್ಮ ಪ್ರಾರ್ಥನಾಭಾಷಣದಲ್ಲಿ ಆಶೀರ್ವದಿಸಿದರು. ಯುವಕ ವೆಂಕಟರಾಮನ್ ಆತ್ಮವನ್ನು ಸಾಕ್ಷಾತ್ಕರಿಸಿಕೊಂಡ ಮಧುರೆ ಪ್ರಾಚೀನ ತಮಿಳು ಸಂಘಗಳ ಪುರಾಣಪ್ರಸಿದ್ಧ ಕೇಂದ್ರ ವಾಗಿದ್ದಿತು. ಅದು ಮೀನಾಕ್ಷಿ ಸುಂದರನಾದ ಶಿವನ ಲೀಲಾಸ್ಥಾನ. ಅಲ್ಲಿ ದೇವಿಯು ಶಕ್ತಿಪೀಠದಲ್ಲಿ ವಿರಾಜಿಸುತ್ತಿದ್ದಾಳೆ. ಭಗವಂತನೊಡನೆ ಭಕ್ತರ ತಾದಾತ್ಮ್ಯವನ್ನು ಕಾವ್ಯ ಮತ್ತು ಕರ್ಮಾಚರಣೆ ಹಾಡಿ ಹೊಗಳುವ ಸ್ಥಳ ಅದು. ಅಲ್ಲಿಯ ದೇವಸ್ಥಾನದಲ್ಲಿ ಅರವತ್ತ ಮೂರು ಸಂತರ ವಿಗ್ರಹಗಳನ್ನು ಯಾವ ಮಗು ಬೇಕಾದರೂ ನೋಡಬಹುದು. ತಮ್ಮ ತಾಯಿಯ ಮಡಿಲಲ್ಲಿ ರಮಣರು ಹಾಯಾಗಿದ್ದರು; ಆದರೆ ಅರುಣಾಚಲದ ಕರೆಯನ್ನು ಕೇಳಿದೊಡನೆ ಅವರು ತಂದೆಯ ತೋಳುಗಳಿಗೋ ಎಂಬಂತೆ ಓಡಿದರು.

ದೊಡ್ಡ ಸಂಸ್ಕೃತ ಕವಿಯಾದ ಗಣಪತಿಶಾಸ್ತ್ರಿ ಮತ್ತು ದೊಡ್ಡ ತಮಿಳು ಕವಿಯಾದ ಮುರುಗನಾರ್‌ರವರು ರಮಣಮಹರ್ಷಿಗಳನ್ನು ಸ್ಕಂದನೆಂದು ಹಾಡುತ್ತಾರೆ. ಛಾಂದೋಗ್ಯೋಪನಿಷತ್ತಿನಲ್ಲಿ ನಾರದರು ಸನತ್ಕುಮಾರರಿಂದ ಅಜ್ಞಾನದ ಕತ್ತಲೆಯ ಆಚೆಗಿರುವ ಬೆಳಕಾದ ಭೂಮವಿದ್ಯೆಯ ರಹಸ್ಯವನ್ನು ಅರಿತಂತೆ, ಈ ಪ್ರಕಾಂಡ ಪಂಡಿತರೂ ಯುವಕ ಸ್ವಾಮಿಯಿಂದ ಯಾವುದೇ ಪುಸ್ತಕದಲ್ಲಿ ಸಿಗದ ಆಧ್ಯಾತ್ಮಿಕ ಜ್ಞಾನವನ್ನು ಪಡೆದರು. ತಂದೆಯಾದ ಶಿವನು ''ಇಲ್ಲಿ ಬಾ, ಮಗು'' ಎಂದು ಕರೆದಾಗ, ತಾಯಿಯ ಮಡಿಲಿನಿಂದ ಜಿಗಿದ ಕುಮಾರನನ್ನು ತೋಳು ಚಾಚಿ ಹಿಡಿದು ಅಪ್ಪಿಕೊಂಡದ್ದನ್ನು ಶಂಕರರು ''ಸುಬ್ರಹ್ಮಣ್ಯ ಭುಜಂಗ''ದಲ್ಲಿ ವರ್ಣಿಸಿದ್ದಾರೆ. ಗಣಪತಿ ಶಾಸ್ತ್ರಿಗಳ ಪ್ರಕಾರ, ಈ ದೃಶ್ಯವು ''ತಂದೆಯ ಕರೆಗೆ ಈ ಬಾಲಕನ ಪ್ರತಿಕ್ರಿಯೆ''ಯಲ್ಲಿ ಮತ್ತು ತನ್ನ ತಾಯಿಯ ಮನೆಯಾದ ಮಧುರೆಯಿಂದ ತಂದೆಯ ಸಾನ್ನಿಧ್ಯವಾದ ಅರುಣಾಚಲಕ್ಕೆ ಸಮಾಧಿಸ್ಥಿತಿಯಲ್ಲಿ ಅವನು ಮಾಡಿದ ಯಾತ್ರೆಯಲ್ಲಿ ಪುನಃ ಅಭಿನಯಿಸಲ್ಪಟ್ಟಿದೆ. ಚಿರನೂತನವಾದ ಆನಂದದ ಸಾಕಾರ-ಮೂರ್ತಿಯಾದ ಸ್ಕಂದನಲ್ಲಿ ಶಿವ (ಅಥವಾ ಸತ್) ಮತ್ತು ಶಕ್ತಿ (ಅಥವಾ ಚಿತ್) ಸಮ್ಮಿಳಿತವಾಗಿದೆ. ಮಹರ್ಷಿಗಳು ಗುಹೇಶ (ಗವಿಯ ಒಡೆಯ) ಎಂಬುದನ್ನು ಹೃದಯ ಮತ್ತು ಕುಮಾರ ಈ ಎರಡೆರಡೂ ಹೆಸರಾಗಿ ಪದೇಪದೇ ಬಳಸುತ್ತಾರೆ. ಮಾನವ ಹೃದಯದಲ್ಲಿ ಮತ್ತು ಮಾನವ ಜೀವನದಲ್ಲಿ, ತಂದೆ ತಾಯಿ ಮಗನ ರೂಪದ ಸೋಮ-ಸ್ಕಂದನ ರಹಸ್ಯವನ್ನು ಸಾವಿರಬಗೆಯಲ್ಲಿ ಪ್ರಕಟಿಸುವಲ್ಲಿ, ಧರ್ಮವನ್ನು ಅರಿತು ಅದನ್ನು ಅನುಷ್ಠಾನ ಮಾಡಬೇಕೆನ್ನುವವರಿಗೆ ರಾಮಸೇವಕನಾದ ಹನುಮಂತನ ಆಧುನಿಕ ಪಾತ್ರದಲ್ಲಿ ಗಾಂಧೀಜಿ ನೀಡುವ ದೃಢವಾದ ಮಾರ್ಗದರ್ಶನವನ್ನೇ ಮಹರ್ಷಿ ಮೋಕ್ಷವನ್ನು ಅರಸುವವರಿಗೆ ನೀಡುತ್ತಾರೆ.

1896ರ ಸೆಪ್ಟೆಂಬರ್ 1 ರಂದು ಅವರು ತಲುಪಿದ ಮತ್ತು ಐವತ್ತನಾಲ್ಕು ವರ್ಷಗಳು ನೆಲೆಸಿದ ಸ್ಥಳ ಅರುಣಾಚಲ ಅಥವಾ ತಿರುವಣ್ಣಾಮಲೆ. ಅದರ ಸ್ಮರಣೆಯೇ ಮೋಕ್ಷವನ್ನು ತರಲು ಸಾಕು ಎಂಬ ಪ್ರಾಚೀನ ಭಾವನೆಯೊಂದಿದೆ. ಭಾರತದ ಮತ್ತು ನೇಪಾಲದ ಅನೇಕ ದೇವಾಲಯಗಳಲ್ಲಿ ಶಿವನು ಲಿಂಗದ ಅಥವಾ ಮೂರ್ತಿಯ ರೂಪದಲ್ಲಿ ಕಾಣಿಸಿದರೂ,

ಇಲ್ಲಿ ಅವನು ಪರ್ವತದ ರೂಪದಲ್ಲಿಯೇ ಅಭಿವ್ಯಕ್ತನಾಗಿದ್ದಾನೆಂದು ನಂಬಲಾಗಿದೆ. ಕಥೆಯ ಪ್ರಕಾರ ಈ ಸ್ಥಳದಲ್ಲಿ ಶಿವನು ಬೆಳಕಿನ ಕಂಬವಾಗಿ ಕಾಣಿಸಿಕೊಂಡನು. ಅದರ ತುದಿ ಮತ್ತು ಬುಡವನ್ನು ಬ್ರಹ್ಮ ಮತ್ತು ವಿಷ್ಣು ಅರಸಿದರು. ಆದರೆ ಕಾಣಲಾಗಲಿಲ್ಲ. ಹೀಗೆ ಈ ಪರ್ವತವು ಶುದ್ಧ ಪರಚೈತನ್ಯದ ಪ್ರತೀಕವಾದ ಶಿವನ ಸಾಕಾರ ಸ್ವರೂಪ. ಜ್ಞಾನಾರ್ಥಿಗಳಿಗೆ ಅದು ಒಂದು ವಿಶೇಷವಾದ ಸಂದೇಶವನ್ನು ಮತ್ತು ಅರ್ಥವನ್ನು ಹೊಂದಿದೆ.

# ಅಧ್ಯಾಯ 2

# ಬಾಲ್ಯ ಜೀವನ ಮತ್ತು ಸಾಕ್ಷಾತ್ಕಾರ

ವೆಂಕಟರಾಮನ್ 1879ರ ಧನುರ್ಮಾಸದ ಪುನರ್ವಸುವಿಗೆ ಸಮವಾದ ಡಿಸೆಂಬರ್ 29/30ರಂದು ಅರ್ಧರಾತ್ರಿ ಕಳೆದು ಸ್ವಲ್ಪ ಹೊತ್ತಿನ ಅನಂತರ ಹುಟ್ಟಿದರು. ಅವರ ತಂದೆ ತಿರುಚುಳಿಯಲ್ಲಿನ ಸುಂದರಂ ಅಯ್ಯರ್ ಎಂಬ ಒಬ್ಬ ವಕೀಲರು. ತಾಯಿಯ ಹೆಸರು ಅಳಗಮ್ಮ. ಪ್ರಾಥಮಿಕ ವಿದ್ಯಾಭ್ಯಾಸವನ್ನು ತಮ್ಮ ಊರಿನಲ್ಲಿ ಪಡೆದು ಮಾಧ್ಯಮಿಕ ಶಾಲೆಗೆ ಅವರು ಒಂದು ವರ್ಷ ದಿಂಡಿಗಲ್‌ಗೆ ಹೋದರು. 1892ರಲ್ಲಿ ಅವರ ತಂದೆ ಹಠಾತ್ತಾಗಿ ತೀರಿಹೋಗಲು, ವೆಂಕಟರಾಮನ್ ಮತ್ತು ಅವರ ಅಣ್ಣ ನಾಗಸ್ವಾಮಿಯನ್ನು ಅವರ ಚಿಕ್ಕಪ್ಪ ಸುಬ್ಬ ಅಯ್ಯರ್ ಮಧುರೆಗೆ ಕರೆದುಕೊಂಡು ಹೋದರು. ಇನ್ನೂ ಚಿಕ್ಕ ಇಬ್ಬರು ಮಕ್ಕಳು, ನಾಗಸುಂದರಂ ಮತ್ತು ಅಲಮೇಲು, ತಾಯಿಯೊಡನೆ ತಮ್ಮ ದೊಡ್ಡಪ್ಪ ನೆಲ್ಲಿಯಪ್ಪ ಅಯ್ಯರೊಡನೆ ಇರಲು ಮಾನಮಧುರೆಗೆ ಹೋದರು. ಕಾಲಕ್ರಮದಲ್ಲಿ ವೆಂಕಟರಾಮನ್ ಮಧುರೆ ಅಮೆರಿಕನ್ ಮಿಷನ್ ಹೈಸ್ಕೂಲಿಗೆ ಸೇರಿದರು. ಅವರು ಪಾಠಪ್ರವಚನಗಳನ್ನು ಅಷ್ಟೊಂದು ಗಂಭೀರವಾಗಿ ತೆಗೆದುಕೊಳ್ಳಲಿಲ್ಲ. ಆದರೆ ಬುದ್ಧಿವಂತರಾಗಿದ್ದರು ಮತ್ತು ಒಳ್ಳೆಯ ಜ್ಞಾಪಕಶಕ್ತಿಯನ್ನು ಹೊಂದಿದ್ದರು. ಆದ್ದರಿಂದ ತರಗತಿಯಿಂದ ತರಗತಿಗೆ ತೇರ್ಗಡೆ ಪಡೆದರು. ಅವರಿಗೆ ಆಧ್ಯಾತ್ಮಿಕ ಒಲವಿತ್ತೆನ್ನುವುದನ್ನು ತೋರಿಸಲು ಈ ಸಮಯದಲ್ಲಿ ಯಾವ ಸೂಚನೆಯೂ ಇರಲಿಲ್ಲ. ಒಳ್ಳೆಯ ಮೈಕಟ್ಟಿದ್ದ ಅವರು ಆಟಪಾಠಗಳಲ್ಲಿ ಬಹಳ ಆಸಕ್ತಿ ಹೊಂದಿದ್ದರು. ಸಾಮಾನ್ಯವಾಗಿ ಕುಸ್ತಿ ಮತ್ತು ಈಜಿನ ಪಂದ್ಯಗಳಲ್ಲಿ ಗೆಲ್ಲುತ್ತಿದ್ದರು. ಅವರು ಗಾಢನಿದ್ರೆಯಲ್ಲಿ ಇದ್ದಾಗ ಅವರನ್ನು ಎಬ್ಬಿಸುವುದು ಕಷ್ಟವಾಗಿತ್ತು. (ಶಾಲೆಯ ದಿನಗಳಲ್ಲಿ ಅಬ್ದುಲ್ ವಾಹಬ್ ಅವರ ಆಪ್ತ ಸ್ನೇಹಿತರಲ್ಲೊಬ್ಬ. ಮುದ್ದಿಗಾಗಿ ಅವನನ್ನು ಸಾಬ್ಜಾನ್ ಎಂದು ಕರೆಯುತ್ತಿದ್ದರು. ಈತ ವೆಂಕಟರಾಮನ್ ಜೊತೆ ಆಟಗಳಲ್ಲಿ ಭಾಗವಹಿಸುತ್ತಿದ್ದುದಲ್ಲದೆ ಅವರ ಜೊತೆಯಲ್ಲಿ ದೇವಸ್ಥಾನಗಳಿಗೆ ಹೋಗುತ್ತಿದ್ದ ಮತ್ತು ತಿರುಚುಳಿಯ ಮನೆಯ ಪ್ರಿಯ ಅತಿಥಿಯಾಗಿದ್ದ. ಅನಂತರದ ವರ್ಷಗಳಲ್ಲಿ ಪೋಲಿಸ್ ಇಲಾಖೆಗೆ ಸೇರಿದ ಅಬ್ದುಲ್ ವಾಹಬ್, ಅಷ್ಟು ಹೊತ್ತಿಗೆ ಮಹರ್ಷಿಯಾಗಿದ್ದ ತನ್ನ ಹಳೆಯ ಸ್ನೇಹಿತನನ್ನು ನೋಡಲು ಬರುತ್ತಿದ್ದ). ರಸ್ತೆಯ ಆಚೆಯಿಂದ ದೊಡ್ಡ ಕೊಡದಲ್ಲಿ ನೀರು ತರುತ್ತ, ವೆಂಕಟರಾಮನ್ ತಮ್ಮ ಚಿಕ್ಕಮ್ಮನಿಗೆ ಮನೆಗೆಲಸದಲ್ಲಿ ನೆರವಾಗುತ್ತಿದ್ದರು. ತಂದೆಯಿಲ್ಲದ ಹುಡುಗನಿಗೆ ಇಂಥ ಕೆಲಸಗಳನ್ನು ಕೊಡುತ್ತಾರೆಂದು ಅವರ ತಾಯಿಗೆ ಮೊದಲಲ್ಲಿ ದುಃಖವಾಗಿತ್ತು. ಆದರೆ ಆಕೆ ಮಧುರೆಗೆ ಬಂದಾಗ, ಆ ದೊಡ್ಡ ಕೊಡದಲ್ಲಿ ನೀರು ತರಲು ಆಕೆಗೇ ಆಗಲಿಲ್ಲ. ಅದನ್ನು ತರಲು ಆಕೆ ವೆಂಕಟರಾಮನ್‌ಗೆ ಹೇಳಿದರು. ''ನನ್ನ ಚಿಕ್ಕಮ್ಮನಲ್ಲಿ ನೀನು ತಪ್ಪು ಕಂಡುಹಿಡಿದೆ. ಈಗ ನೀನು ಮಾಡುತ್ತಿರುವುದೇನು?'' ಎಂದು ನಗುತ್ತ ತಮ್ಮ

ತಾಯಿಯನ್ನು ಕೇಳಿದರು. ಅನೇಕ ವರ್ಷಗಳ ತರುವಾಯ, ಭಕ್ತರೊಬ್ಬರ ಪ್ರಶ್ನೆಗೆ ಉತ್ತರವಾಗಿ ಇದನ್ನು ಅವರು ನಿಜವೆಂದರು. ವೆಂಕಟರಾಮನ್ ಮನೆಗೆಲಸಗಳಲ್ಲೂ ಕುಶಲರಾಗಿದ್ದರು. ತಂಗಕ್ಕೈ (ಚಿನ್ನದ ಅಥವಾ ಅದೃಷ್ಟದ ಕೈಗಳನ್ನು ಪಡೆದವನು) ಎಂದು ಪ್ರಸಿದ್ಧರಾಗಿದ್ದರು. ಆದ ಕಾರಣ ಹಪ್ಪಳ ಇಡುವುದು ಮೊದಲಾದವುಗಳನ್ನು ಮೊದಲು ಮಾಡಲು ಅವರನ್ನು ಅನೇಕ ಸಲ ಕೇಳಲಾಗುತ್ತಿತ್ತು.

1895ರಲ್ಲಿ ನವೆಂಬರ್ ತಿಂಗಳಲ್ಲಿ ಹಿರಿಯ ಸಂಬಂಧಿಯೊಬ್ಬರು ಅರುಣಾಚಲಕ್ಕೆ ಹೋಗಿಬಂದುದನ್ನು ತಿಳಿಸಿದರು. ವೆಂಕಟರಾಮನ್‌ಗೆ ಬಾಲ್ಯದಿಂದಲೂ ಈ ಹೆಸರು ಭಯ, ಭಕ್ತಿ ಮತ್ತು ಪ್ರೀತಿಯನ್ನು ಹುಟ್ಟಿಸಿದ್ದವು. ಅರುಣಾಚಲ ಎಂದರೆ ತಿರುವಣ್ಣಾಮಲೆ, ನಿಜವಾದ ಮತ್ತು ಹತ್ತಿರದಲ್ಲಿರುವ ಒಂದು ಊರು ಎಂಬುದನ್ನು ಅವರು ಈಗ ಮೊದಲಬಾರಿಗೆ ಅರಿತರು.

ಸ್ವಲ್ಪ ಕಾಲದ ನಂತರ ಪೆರಿಯಪುರಾಣದ ಒಂದು ಪ್ರತಿ ಅವರ ಕೈ ಸೇರಿತು. ಶಿವನ ಅನುಗ್ರಹವನ್ನು ಸಂಪಾದಿಸಿದ ಅರವತ್ಮೂರು ಸಂತರ ಕಥೆಗಳನ್ನು ಓದುತ್ತ ಅವರು ಆನಂದದಿಂದ ತುಂಬಿ ತುಳುಕಿದರು.

ಮಹರ್ಷಿಗಳ ಜೀವನದಲ್ಲಿ ಮತ್ತು ಆಧುನಿಕ ಮಾನವನ ಆತ್ಮಾನ್ವೇಷಣೆಯಲ್ಲಿ ಸಂಧಿಸ್ಥಾನವಾದ ಮಹಾಘಟನೆ ಸಂಭವಿಸಿದ್ದು 1896ರ ಜುಲೈ ಮಧ್ಯದಲ್ಲಿ. ಇದು ಪ್ರಾಯಶಃ ಜುಲೈ 16ರ (ಶುಕ್ಲಪಕ್ಷ ಷಷ್ಠಿ) ಗುರುವಾರದಂದು ಅಂದರೆ ಅಂತಿಮವಾಗಿ ಮಧುರೆಯನ್ನು ಬಿಟ್ಟುಹೋಗುವ ಸುಮಾರು ಆರುವಾರಗಳ ಮೊದಲು. ಒಂದು ದಿನ ಅವರು ತಮ್ಮ ಚಿಕ್ಕಪ್ಪನ ಮನೆಯ ಮಹಡಿಯಲ್ಲಿ ಒಬ್ಬರೇ ಕುಳಿತಿದ್ದರು. (ದೇವಸ್ಥಾನದ ಹತ್ತಿರ, 11, ಚೊಕ್ಕಪ್ಪ ನಾಯ್ಕನ ರಸ್ತೆ). ಅವರ ಆರೋಗ್ಯ ಚೆನ್ನಾಗಿಯೇ ಇತ್ತು. ಆದರೆ ಹಠಾತ್ತಾಗಿ, ಯಾವ ಕಾರಣವೂ ಇಲ್ಲದೆ ಅವರಿಗೆ ಮರಣದ ಭಯ ತಟ್ಟಿತು. ಇದು ಅವರ ಮನಸ್ಸನ್ನು ಒಳಮುಖಿ ಮಾಡಿತು. ಅವರು ಈ ಬಗೆಯ ಜಿಜ್ಞಾಸೆಯೊಂದನ್ನು ನಡೆಸಿದರು: ''ಈಗ ನಾನು ಸಾಯುತ್ತಿದ್ದೇನೆ. ಈ ಸಾವು ಎಂದರೇನು? ಸಾಯುತ್ತಿರುವುದು ಯಾವುದು? ಈ ದೇಹ ಸಾಯುತ್ತದೆ.'' ಅವಯವಗಳನ್ನು ಉದ್ದವಾಗಿ ನೀಡಿ, ಅವನ್ನು ಗಡುಸಾಗಿಸಿ, ಉಸಿರನ್ನು ಬಿಗಿ ಹಿಡಿದು, ಬಾಯಿಯನ್ನು ಮುಚ್ಚಿ ಅವರು ಸಾವನ್ನು ಅಭಿನಯಿಸಿದರು. ಮೌನವಾಗಿ ಜಿಜ್ಞಾಸೆಯನ್ನು ಮುಂದುವರೆಸಿದರು. ''ಸರಿ, ಈಗ, ದೇಹ ಸತ್ತು ಹೋಯಿತು. ನಿಶ್ಚಲವಾಗಿರುವ ಅದನ್ನು ಸ್ಮಶಾನಕ್ಕೆ ಒಯ್ದು, ಅಲ್ಲಿ ಸುಟ್ಟು ಬೂದಿಯಾಗಿಸುತ್ತಾರೆ. ಆದರೆ ನಾನು ಸತ್ತಿದ್ದೇನೆಯೇ? ದೇಹವೇ ನಾನೇ? ದೇಹ ಮೌನವಾಗಿದೆ ಮತ್ತು ಜಡ. ಆದರೆ ನನ್ನ ವ್ಯಕ್ತಿತ್ವದ ಪೂರ್ಣಪ್ರಭಾವ ನನಗೆ ಅರಿವಾಗುತ್ತಿದೆ. ಒಳಗಿರುವ 'ನಾನು' ಎನ್ನುವುದರ ಸ್ಫುರಣ, ಮಾತು ಕೂಡ ನನಗೆ ಕೇಳಿಸುತ್ತಿದೆ. ಆದ್ದರಿಂದ ನಾನು ದೇಹವನ್ನು ಮೀರಿರುವ ಅರಿವು. ನಾನು ಅಮರವಾದ ಚೈತನ್ಯ.'' ಇದಿಷ್ಟೂ ಜಿಜ್ಞಾಸೆ ಬೌದ್ಧಿಕ ಕಸರತ್ತಾಗಿರಲಿಲ್ಲ. ಅದರ ಬದಲು ಪದಗಳ ಮೂಲಕವಾಗಿರದೆ ಅಂಗಾಂಗಳ ಮೂಲಕ ಅವರು ಅನುಭವಿಸಿದ ''ನಾನಿದ್ದೇನೆ'' ಎಂಬ ಶುದ್ಧ ಅರಿವಿನ ಜೀವಂತ ಅನುಭವವಾಗಿತ್ತು.

ವಿದ್ಯಾರ್ಥಿಯೊಬ್ಬನನ್ನು ಋಷಿಯನ್ನಾಗಿ ಮಾಡಿದ ಮರಣದ ಈ ಅಭಿನಯವನ್ನು ಪುರಾಣ, ತತ್ತ್ವಶಾಸ್ತ್ರ ಮತ್ತು ನೀತಿಶಾಸ್ತ್ರಗಳ ಪರಿಭಾಷೆಯಲ್ಲಿ ಪರಿಗಣಿಸಬಹುದು.

ಧರ್ಮೋದ್ಧಾರಕನಾದ ಮಾತೃಸದೃಶ ವಿಷ್ಣುವಿನಿಂದ ಆಸನ್ನಮರಣದಿಂದ ರಕ್ಷಿತನಾಗಿ ಪರಮ ಭಕ್ತನಾದ ಪ್ರಾಣಿಮಾತ್ರ ಗಜರಾಜನಂತಲ್ಲದೆ, ಪರಮಜ್ಞಾನದ ದೇವತೆಯಾದ ಪಿತೃ ಸದೃಶ ಶಿವನ ಮೂಲಕ ಮತ್ತೊಂದು ಮೊಸಳೆಯಿಂದ ವಿಮೋಚನೆ ಪಡೆದು ಮಹಾ ಜ್ಞಾನಿಗಳಾದ ಶಂಕರರಂತೆ, ವೆಂಕಟರಾಮನ್ ತಮ್ಮ ಅಂತರಾತ್ಮವು ಶುದ್ಧ ಚೈತನ್ಯವಾಗಿದೆ ಎಂಬುದನ್ನು ಕಂಡುಕೊಂಡರು ಮತ್ತು ಈ ರೀತಿ ಸಾವಿನ ಭಯವನ್ನು ಎಂದೆಂದಿಗೂ ಜಯಿಸಿದರು. ಈ ಏಕೈಕ ಅನುಭವವು ಮಾನವ ದುಃಖ ಮತ್ತು ಸಾವನ್ನು ಕುರಿತ ಬುದ್ಧನ ದೀರ್ಘ ಧ್ಯಾನವನ್ನು ಒಳಗೊಂಡಿತ್ತು. ಶೇಕ್ಸ್‌ಪಿಯರನ ಮೊಳಗುವ ಪದಗಳಲ್ಲಿ, ಅವರು "ಮನುಷ್ಯರನ್ನು ತಿನ್ನುವ ಸಾವನ್ನು" ತಿಂದರು ಮತ್ತು "ಸಾವು ಸತ್ತಿರುವುದರಿಂದ ತರುವಾಯ ಮತ್ತೆ ಸಾಯುವುದು ಇರುವುದಿಲ್ಲ." ಜ್ಞಾನದೊಡನೆ ಸಂಪೂರ್ಣ ತಾದಾತ್ಮ್ಯದ ಮತ್ತು ದೇಹಾತ್ಮಭಾವದಿಂದ ಸ್ವತಂತ್ರವಾಗಿರುವುದರ ಈ ಉಚ್ಚ ಅನುಭವವು ಅವರಿಗೆ ಸತ್ಯತತ್ವ ಮೀಮಾಂಸೆ ಮತ್ತು ಜ್ಞಾನ ಮೀಮಾಂಸೆ ಇವುಗಳ ನಡುವೆ ಇರುವ ಕೃತಕವಾದ ಅಡ್ಡ ಗೋಡೆಯನ್ನು ಧ್ವಂಸ ಮಾಡಿದ್ದು ಮಾತ್ರವೇ ಅಲ್ಲದೆ ಅವರಲ್ಲಿ ಸರ್ವವ್ಯಾಪಕವಾದ ಪ್ರೇಮ ಮತ್ತು ಆನಂದಗಳ ಸಾರ್ವಕಾಲಿಕ ಚಿಲುಮೆಯೊಂದನ್ನು ಚಿಮ್ಮಿಸಿತು. ಇದು ಅರ್ಧ ಶತಮಾನದ ಅಹಂಕಾರರಹಿತ ಜೀವನದ ಮೂಲಕ ಎಲ್ಲ ಜೀವರುಗಳ ಏಕತೆಯನ್ನು ಸ್ಥಾಪಿಸಿತು.

ಆ ಗಳಿಗೆಯಿಂದ ಆತ್ಮ ಸಮಾಧಿಯು ನಿರಂತರವಾಗಿ ಸಾಗಿತು. ಸೂರಿ ನಾಗಮ್ಮ, ಸ್ವಾಮಿ ಸಿದ್ಧೇಶ್ವರಾನಂದ ಮತ್ತು ಪ್ರೊಫೆಸರ್ ಡಿ.ಎಸ್. ಶರ್ಮ ಮುಂತಾದ ಅನೇಕ ಪ್ರಶ್ನೆಕಾರರಿಗೆ ಅವರು ಪದೇ ಪದೇ ವಿವರಿಸಿದಂತೆ, ಸಂಗೀತದಲ್ಲಿನ ವಿವಿಧ ಸ್ವರಗಳಂತೆ ಇತರ ಭಾವನೆಗಳು ಬರಬಹುದು ಮತ್ತು ಹೋಗಬಹುದು ಆದರೆ ಇತರ ಸ್ವರಗಳು ಅನುಸರಿಸಿ ಸಮ್ಮಿಳಿತವಾಗಬೇಕಾದ ಆಧಾರಶ್ರುತಿಯಂತೆ, ಆತ್ಮಜ್ಞಾನದ ಸ್ಫುರಣವು ಮುಂದುವರೆದಿತ್ತು.

ಸಾವಿನ ಇಡೀ ದರ್ಶನ ಅರ್ಧಗಂಟೆಗೂ ಕಡಿಮೆ ಅವಧಿಯನ್ನು ಆಕ್ರಮಿಸಿತ್ತು. ಆದರೆ ಅದು ಈ ಯುವಕನ ಜೀವನದಲ್ಲಿ ಮೂಲಭೂತವಾದ ಮತ್ತು ಶಾಶ್ವತವಾದ ಬದಲಾವಣೆಯನ್ನು ತಂದುದಷ್ಟೇ ಅಲ್ಲದೆ ಅವನಿಗೆ ಸುಲಭವಾದ, ಎಂದಿಗೂ ವಿಫಲವಾಗದ ಮತ್ತು ಎಲ್ಲ ಕಾರ್ಯಕ್ಕೂ ಉಪಯೋಗವಾಗುವ ಸಾಧನವನ್ನು-'ನಾನು ಯಾರು?' ಎಂಬ ಪ್ರಶ್ನೆಯನ್ನು -ನೀಡಿತು.

ಈ ಘಟನೆಯ ತರುವಾಯ ವೆಂಕಟರಾಮನ್ ಇನ್ನೂ ಹೆಚ್ಚು ಹೆಚ್ಚು ಸಮಾಧಿಯ ಸ್ಥಿತಿಗೆ ಹೋಗುತ್ತಿದ್ದರು ಮತ್ತು ಯಾಂತ್ರಿಕವಾಗಿ ಪಾಠ ಪ್ರವಚನಗಳನ್ನು ಮುಂದುವರೆಸಿದರು. ಜನಗಳ ಜೊತೆ ವ್ಯವಹಾರಗಳಲ್ಲಿ ಹೆಚ್ಚು ನಮ್ರರೂ ವಿನೀತರೂ ಆದರು. ದೇವಸ್ಥಾನಕ್ಕೆ ಇನ್ನೂ ಹೆಚ್ಚು ಸಲ ಮತ್ತು ಇನ್ನೂ ಗಾಢ ಭಕ್ತಿಭಾವದಿಂದ ಹೋಗತೊಡಗಿದರು. ಪೆರಿಯ-ಪುರಾಣದ ಕಥೆಗಳು ಮತ್ತು ದೇವಸ್ಥಾನದಲ್ಲಿ ಅವರು ನೋಡಿದ್ದ ಅರವತ್ಮೂರು ನಾಯನಾರರ ವಿಗ್ರಹಗಳು ಈಗ ಒಂದು ಹೊಸ ಅರ್ಥ ಪಡೆದವು. "ಹೊಸ ಬದುಕಿಗೆ ನಾನು ಎಚ್ಚೆತ್ತ ನಂತರ, ನಾನು ಪ್ರಾಯಶಃ ಪ್ರತಿ ಸಂಜೆ ದೇವಸ್ಥಾನಕ್ಕೆ ಹೋಗುತ್ತಿದ್ದೆ. ಒಬ್ಬನೇ ಹೋಗಿ ಶಿವನ, ಮೀನಾಕ್ಷಿಯ, ನಟರಾಜನ ಅಥವಾ ಅರವತ್ಮೂರು ನಾಯನಾರರ ಎದುರು ಬಹಳ ಹೊತ್ತು ನಿಂತಿರುತ್ತಿದ್ದೆ. ಭಕ್ತಿಯ ಅಲೆಗಳು ನನ್ನನ್ನು ಮುಳುಗಿಸುತ್ತಿದ್ದಂತೆ ಭಾಸವಾಗುತ್ತಿತ್ತು. ನನ್ನ ಆತ್ಮವು ದೇಹದ ಮೇಲೆ ಹಿಂದೆ ತಾನು ಹೊಂದಿದ್ದ

ಅವಲಂಬನವನ್ನು ತ್ಯಜಿಸಿತ್ತು. ಆದ್ದರಿಂದ ಆತ್ಮಕ್ಕೆ ಹೊಸದೊಂದು ಅವಲಂಬನ ಬೇಕಾಗಿತ್ತು. ಆದ್ದರಿಂದಲೇ ದೇವಸ್ಥಾನಕ್ಕೆ ಪದೇ ಪದೇ ಹೋಗುತ್ತಿದ್ದುದು. ಈಶ್ವರನ ಮುಂದೆ ನಿಂತುಕೊಂಡು, ನನ್ನ ಭ' ಹೆಚ್ಚಿ, ಅದು ಅರವತ್ಮೂರು ಸಂತರ ಭಕ್ತಿಯಂತೆ ನಿರಂತರವಾಗಿರಲು ಅವನ ಅನುಗ್ರಹ ನನ್ನ ಮೇಲೆ ಆಗಲಿ ಎಂದು ಆಗಾಗ ಬೇಡುತ್ತಿದ್ದೆ. ಬಹಳವಾಗಿ ನಾನು ಪ್ರಾರ್ಥನೆ ಮಾಡುತ್ತಲೇ ಇರಲಿಲ್ಲ, ಆದರೆ ನನ್ನ ಒಳಗಿನ ನಿಗೂಢವು ಹರಿಯುತ್ತ ಹೋಗಿ ಹೊರಗಿನ ನಿಗೂಢವನ್ನು ಸೇರುವಂತೆ ಅದನ್ನು ಹರಿಯ ಬಿಡುತ್ತಿದ್ದೆ. ಅಶ್ರುಬಿಂದುಗಳು ಸುಖದ ಅಥವಾ ಯಾತನೆಯ ಯಾವುದೇ ವಿಶಿಷ್ಟ ಭಾವವನ್ನು ಸೂಚಿಸದೆ ಆತ್ಮದ ಈ ತುಂಬು ಹರಿವನ್ನು ಸೂಚಿಸುತ್ತಿದ್ದವು.'' ಅವರು ಮೋಕ್ಷಕ್ಕಾಗಿ ಅಥವಾ ಹುಟ್ಟುಗಳ ಚಕ್ರದಿಂದ ವಿಮೋಚನೆಗಾಗಿ ಪ್ರಾರ್ಥಿಸುತ್ತಿದ್ದರೇ ಎಂದು ಕೇಳಿದಾಗ, ''ಅವರಿಗಿದ್ದ ಭಕ್ತಿಯೇ ನನಗೂ ಇರಲೆಂದು ಪ್ರಾರ್ಥಿಸುತ್ತಿದ್ದೆ. ಬಂಧದ ಅಥವಾ ಹುಟ್ಟುಗಳಿಂದ ವಿಮೋಚನೆಯ ವಿಷಯ ನನಗೆ ಸ್ವಲ್ಪವೂ ಗೊತ್ತಿರಲಿಲ್ಲ'' ಎಂದು ಉತ್ತರ ನೀಡಿದರು.

1896ರ ಆಗಸ್ಟ್ 29ರ ಬೆಳಿಗ್ಗೆ ಆರನೆ ತರಗತಿಯ ವಿದ್ಯಾರ್ಥಿ ಮನೆಯಲ್ಲಿ ಕುಳಿತು ಬೇಯ್ನ್ಸರ ಇಂಗ್ಲಿಷ್ ವ್ಯಾಕರಣದಿಂದ ಒಂದು ಭಾಗವನ್ನು ಬರೆಯುತ್ತಿದ್ದರು. ಶಿಕ್ಷೆಯಾಗಿ ಅವರು ಅದನ್ನು ಮೂರು ಬಾರಿ ಮಾಡಬೇಕಾಗಿತ್ತು. ಎರಡು ಪ್ರತಿಗಳನ್ನು ಮಾಡಿ, ಮೂರನೆಯದನ್ನು ಪ್ರಾರಂಭಿಸುವ ಮೊದಲು ಅವರು ತಮಗೆ ಬಲವಂತವಾಗಿ ವಿಧಿಸಿದ್ದ ಕೆಲಸದ ಬಗ್ಗೆ ಬೇಸರ ಪಟ್ಟು, ಕಾಗದಗಳನ್ನು ಪಕ್ಕಕ್ಕೆ ತಳ್ಳಿ, ಕಣ್ಣು ಮುಚ್ಚಿ, ಧ್ಯಾನ ಮಾಡಲು ತೊಡಗಿದರು. ಇದೆಲ್ಲವನ್ನೂ ನೋಡುತ್ತಿದ್ದ ಅವರ ಅಣ್ಣ ಮನೆಯಲ್ಲಿ ಇದ್ದುಕೊಂಡು, ಓದುತ್ತಿರುವಂತೆ ನಟಿಸುತ್ತ ಇರುವಾಗ ಒಬ್ಬ ಯೋಗಿಯಂತೆ ವರ್ತಿಸುತ್ತಿದ್ದುದಕ್ಕಾಗಿ ಅವರನ್ನು ಬೈದರು, ವೆಂಕಟರಾಮನ್ ಈ ಸೂಚನೆಯನ್ನು ಗ್ರಹಿಸಿದರು ಮತ್ತು ಮನೆಯನ್ನು ಬಿಟ್ಟು ಅರುಣಾಚಲಕ್ಕೆ ಹೋಗಲು ಅಂದೇ ಅಲ್ಲಿಯೇ ನಿಶ್ಚಯಿಸಿದರು.

ಸ್ಪೆಷಲ್ ಕ್ಲಾಸಿಗಾಗಿ ಸ್ಕೂಲಿಗೆ ಹೋಗುವುದಾಗಿ ತಮ್ಮ ಅಣ್ಣನಿಗೆ ಹೇಳಿದರು. ''ಹಾಗಾದರೆ ಕೆಳಗೆ ಪೆಟ್ಟಿಗೆಯಲ್ಲಿ ಐದು ರೂಪಾಯಿ ತೆಗೆದುಕೊಂಡು ದಾರಿಯಲ್ಲಿ ನನ್ನ ಕಾಲೇಜಿನ ಫೀಸು ಕಟ್ಟು'' ಎಂದು ಅವರ ಅಣ್ಣ ಹೇಳಿದರು. 1949ರಲ್ಲಿ ಈ ಘಟನೆಯನ್ನು ಜ್ಞಾಪಿಸಿಕೊಳ್ಳುತ್ತ ಮಹರ್ಷಿಗಳು ತಾವು ಅಂತಿಮವಾಗಿ ಮನೆಯನ್ನು ಬಿಟ್ಟು ಹೋಗುತ್ತಿರುವಾಗ ನಿಜಾಂಶವನ್ನು ತಮ್ಮ ಚಿಕ್ಕಮ್ಮನಿಂದ ಬಚ್ಚಿಡಬೇಕಾಗಿ ಬಂದುದನ್ನು ವಿಷಾದದಿಂದ ಹೇಳಿದರು.''ಆಕೆಯ ಅಪೇಕ್ಷೆಯಂತೇಯೇ ನಾನು ಪ್ರತಿಯೊಂದನ್ನೂ ಮಾಡುತ್ತಿದ್ದೆ ಮತ್ತು ಎಂದಿಗೂ ಸುಳ್ಳು ಹೇಳುತ್ತಿರಲಿಲ್ಲ ಎಂಬ ಕಾರಣಕ್ಕಾಗಿ ಆಕೆಗೆ ನನ್ನಲ್ಲಿ ಬಹಳ ನಂಬಿಕೆ ಇದ್ದಿತು. ಇಲ್ಲಿಗೆ ಬರಲು ನಾನು ಮನೆ ಬಿಟ್ಟು ಓಡಿ ಹೋದಾಗ, ಒಂದೇ ಒಂದು ಸುಳ್ಳು ಹೇಳಬೇಕಾಯಿತು. ನಾನೆಲ್ಲಿಗೆ ಹೋಗುತ್ತಿದ್ದೇನೆಂದು ನನ್ನ ಅಣ್ಣ ಕೇಳಿದಾಗ ಸ್ಪೆಷಲ್ ಕ್ಲಾಸಿಗಾಗಿ ಸ್ಕೂಲಿಗೆ ಹೋಗುತ್ತಿದ್ದೇನೆಂದು ಅವನಿಗೆ ಹೇಳಿದೆ. ಊಟವಾದ ಮೇಲೆ, ಬೀಗದ ಕೈಗಳನ್ನು ಕೇಳಿದಾಗ, ನನ್ನ ಚಿಕ್ಕಮ್ಮನಿಗೂ ಅದನ್ನೇ ಹೇಳಿದೆ. ಆಕೆಗೆ ಹೇಗೆ ಗೊತ್ತಾಗಬೇಕು? ಪಾಪ, ಆ ಹೆಂಗಸು ನಾನು ಹೇಳಿದ್ದನ್ನು ನಂಬಿದಳು. ಇವೆಲ್ಲಾ ಆಗಲೇ ಬೇಕಾಗಿತ್ತು.''

ತಿರುವಣ್ಣಾಮಲೆಯ ಪ್ರಯಾಣಕ್ಕೆ ಮೂರು ರೂಪಾಯಿಗಳು ಆಗಬಹುದೆಂದು ವೆಂಕಟರಾಮನ್ ಭಾವಿಸಿದರು. ಅಷ್ಟು ಮಾತ್ರ ಹಣ ತೆಗೆದುಕೊಂಡು, ಉಳಿದ ಎರಡು ರೂಪಾಯಿಗಳನ್ನು ಈ ಮುಂದಿನ ತಮಿಳು ಪತ್ರದೊಡನೆ ಅಲ್ಲಿಯೇ ಬಿಟ್ಟರು: ''ನಾನು ನನ್ನ ತಂದೆಯನ್ನು ಹುಡುಕಿಕೊಂಡು ಮತ್ತು ಅವನ ಅಪ್ಪಣೆ ಪ್ರಕಾರ ಹೊರಟ್ಟಿದ್ದೇನೆ. ಈ ಸಂಗತಿಯ ಬಗ್ಗೆ ಯಾರೂ ದುಃಖಪಡಬಾರದು. ಇದನ್ನು ಹುಡುಕಲು ಹಣ ಖರ್ಚು ಮಾಡಬಾರದು. ನಿನ್ನ ಕಾಲೇಜು ಫೀಸು ಕಟ್ಟಿಲ್ಲ. ಎರಡು ರೂಪಾಯಿಗಳನ್ನೂ ಇದರ ಸಂಗಡ ಇರಿಸಿದೆ.'' ಲೇಖಕನನ್ನು ''ಇದನ್ನು'' ಎಂದು ಸೂಚಿಸಿರುವುದು ಮತ್ತು ಕಾಗದಕ್ಕೆ ರುಜು ಇಲ್ಲದಿರುವುದು ಅವರಿದ್ದ ಮನಃಸ್ಥಿತಿಯನ್ನು ತೋರಿಸುತ್ತವೆ.

ಮಧ್ಯಾಹ್ನಕ್ಕೆ ಸ್ವಲ್ಪ ಮೊದಲು ಅವರು ಮನೆ ಬಿಟ್ಟರು. ರೈಲು ಹಿಡಿಯಲು ಸಾಕಷ್ಟು ಮಾತ್ರ ಇದ್ದ ಕಾಲಕ್ಕೆ ಸರಿಯಾಗಿ ರೈಲ್ವೆ ಸ್ಟೇಷನ್ ತಲುಪಿದರು. ತಿಂಡಿವನಂಗೆ ಒಂದು ಟಿಕೆಟ್‌ಕೊಂಡರು. ಅದು ತಿರುವಣ್ಣಾಮಲೆಗೆ ಅತಿ ಹತ್ತಿರದ ಸ್ಟೇಷನ್ ಎಂದು ಅವರ ಭಾವನೆಯಾಗಿತ್ತು. ಇದಕ್ಕೆ ಅವರಿಗೆ ಎರಡು ರೂಪಾಯಿ ಹದಿಮೂರು ಆಣೆ ಹಿಡಿಯಿತು. ವಾಸ್ತವವಾಗಿ ವಿಳ್ಳುಪುರಂನಲ್ಲಿ ರೈಲು ಬದಲಾಯಿಸಿ ತಿರುವಣ್ಣಾಮಲೆಗೇ ಹೋಗ-ಬಹುದಾಗಿದ್ದ ಒಂದು ಹೊಸ ರೈಲುಮಾರ್ಗ ಇತ್ತು. ಅದಕ್ಕೆ ಸರಿಯಾಗಿ ಮೂರು ರೂಪಾಯಿ ತಗಲುತ್ತಿತ್ತು. ಇದು ಅವರಿಗೆ ತಿಳಿದಿರಲಿಲ್ಲ. ಅವರು ರೈಲು ಹತ್ತಿದ ಮೇಲೆ ಒಬ್ಬ ಮುಸಲ್ಮಾನ ಸಹಪ್ರಯಾಣಿಕ, ಒಬ್ಬ ಮೌಲ್ವಿ, ಅವರ ಸಂಗಡ ಮಾತುಕತೆ ಪ್ರಾರಂಭಿಸಿ, ಅವರ ತಪ್ಪು ತಿಳಿಸಿ, ವಿಳ್ಳುಪುರಂನಲ್ಲಿ ರೈಲಿನಿಂದ ಇಳಿಯುವಂತೆ ಸಲಹೆ ನೀಡಿದ.

ವಿಳ್ಳುಪುರಂನಿಂದ ಹತ್ತು ಮೈಲಿ ದೂರದಲ್ಲಿದ್ದ ಮಾಂಬಳಪಟ್ಟುವಿಗೆ ಅವರು ರೈಲಿನಲ್ಲಿ ಪ್ರಯಾಣ ಬೆಳೆಸಿದರು. ಅವರ ಹತ್ತಿರವಿದ್ದ ಹಣ ಅವರನ್ನು ಒಯ್ಯಬಹುದಾಗಿದ್ದ ದೂರ ಅದಷ್ಟೇ. ಈ ಸ್ಟೇಷನ್ನಿನಿಂದ ಸುಮಾರು ಹತ್ತು ಮೈಲಿ ನಡೆದು ಕಿಳೂರ್ ತಲುಪಿದರು. ಮುಂದಕ್ಕೆ ನಡೆಯಲು ಬಹಳ ಆಯಾಸ ತೋರಿ, ಉಳಿದ ಪ್ರಯಾಣವನ್ನು –ಇನ್ನೂ ಇಪ್ಪತ್ತು ಮೈಲಿಗಳು ಮಿಕ್ಕಿದ್ದವು- ರೈಲಿನಲ್ಲಿ ಮಾಡಲು ನಿಶ್ಚಯಿಸಿದರು. ಅವರಲ್ಲಿ ಹಣವಿಲ್ಲದ್ದರಿಂದ ಕೆಂಪು ಹರಳಿದ್ದ ತಮ್ಮ ಚಿನ್ನದ ಹತ್ತ ಕಡಕುಗಳನ್ನು ಮುತ್ತುಸ್ವಾಮಿ ಭಾಗವತರ್ ಎಂಬವರಲ್ಲಿ ನಾಲ್ಕು ರೂಪಾಯಿಗಳಿಗೆ ಅಡವಿಟ್ಟರು. ಭಾಗವತರ ಹೆಂಡತಿ ಅವರಿಗೆ ಒಳ್ಳೆಯ ಊಟ ಹಾಕಿ, ಗೋಕುಲಾಷ್ಟಮಿಯಂದು ಕೃಷ್ಣನ ನೈವೇದ್ಯಕ್ಕಾಗಿ ಮಾಡಿದ್ದ ಸಿಹಿ ತಿಂಡಿಗಳ ಒಂದು ಪೊಟ್ಟಣವನ್ನೂ ಕೊಟ್ಟರು. ಆದರೆ ಸ್ಟೇಷನ್ನನ್ನು ತಲುಪುವ ಮೊದಲು ಅವರು ಭಾಗವತರು ಕೊಟ್ಟಿದ್ದ ರಸೀತಿಯನ್ನು ಹರಿದು ಹಾಕಿದರು. ಏಕೆಂದರೆ ಅವರಿಗೆ ತಮ್ಮ ಹತ್ತ ಕಡಕುಗಳನ್ನು ಬಿಡಿಸಿಕೊಳ್ಳುವ ಉದ್ದೇಶ ಇರಲಿಲ್ಲ.

ಸೆಪ್ಟೆಂಬರ್ 1 ರಂದು ಬೆಳಗಿನ ಜಾವದಲ್ಲಿ ತಿರುವಣ್ಣಾಮಲೆಯನ್ನು ತಲುಪಿ,ಅವರು ನೇರವಾಗಿ ಶ್ರೀ ಅರುಣಾಚಲೇಶ್ವರ ದೇವಾಲಯಕ್ಕೆ ಹೋಗಿ ತಮ್ಮ ತಂದೆಯ ಮುಂದೆ ನಿಂತರು. ಅವರ ಆನಂದದ ಪಾತ್ರೆ ಅಂಚಿನವರಗೆ ತುಂಬಿತ್ತು. ಅನೇಕ ದಿನಗಳಿಂದ ಅವರ ದೇಹದೊಳಗಡೆ ಸುಡುತ್ತಿದ್ದ ಬೇಗೆ ಈಗ ಶಮನವಾಯಿತು. ಅದು ಅವರ ಯಾತ್ರೆಯ ಕೊನೆ ಮತ್ತು ಸ್ವಗೃಹಾಗಮನ ಆಗಿತ್ತು.

# ಅಧ್ಯಾಯ 3

# ಸಮಾಧಿಯ ವರ್ಷಗಳು ಮತ್ತು ಹೊಸ ನೆಲೆಗಳು

ದೇವಸ್ಥಾನದಿಂದ ಹೊರಗೆ ಬಂದು, ಈ ಯುವಕ ತನ್ನ ತಲೆ ಬೋಳಿಸಿಕೊಂಡ. ತನ್ನಲ್ಲಿದ್ದ ಪದಾರ್ಥಗಳನ್ನು- ಜನಿವಾರ, ಹಣ (ಸುಮಾರು ಮೂರು ರೂಪಾಯಿಗಳು), ತಿಂಡಿ ಪೊಟ್ಟಣ, ಕೌಪೀನಕ್ಕಾಗಿ ತನ್ನ ಪಂಚೆಯಿಂದ ಹರಿದುಕೊಂಡ ತುಂಡೊಂದು ಹೊರತು ಉಳಿದ ಬಟ್ಟೆಗಳನ್ನು ಬಿಸಾಡಿದ. ಹೀಗೆ ಎಲ್ಲವನ್ನೂ ತೊರೆದು ದೇವಸ್ಥಾನಕ್ಕೆ ಮರಳಿದ. ದಾರಿಯಲ್ಲಿ ಬಿರುಮಳೆಯಲ್ಲಿ ತೊಯ್ದ. ಹೀಗೆ ಪರಿಶುದ್ಧನಾಗಿ, ಸಾವಿರಕಂಬಗಳ ಮಂಟಪದಲ್ಲಿ ತನ್ನ ಆವಾಸ ಸ್ಥಾಪಿಸಿದ. ಅಲ್ಲಿ ಕೆಲವು ವಾರಗಳನ್ನು ಚಲಿಸದೆ ಮೌನದಲ್ಲಿ ಕಳೆದ. ಈ ಅವಧಿಯಲ್ಲಿ ಅವನನ್ನು ನೋಡಿಕೊಂಡವರಲ್ಲಿ ಶೇಷಾದ್ರಿ ಸ್ವಾಮಿ ಒಬ್ಬರು. ಅವರು ಉನ್ನತ ಆಧ್ಯಾತ್ಮಿಕ ಸಿದ್ಧಿ ಪಡೆದಿದ್ದ ಒಬ್ಬ ವಿದ್ವಾಂಸ ಸನ್ಯಾಸಿ. ಆದರೆ ಇವರಿಬ್ಬರೂ ತುಂಟ ಹುಡುಗರ ಕಾಟಕ್ಕೆ ಗುರಿಯಾದರು. ಆದ್ದರಿಂದ ಬ್ರಾಹ್ಮಣಸ್ವಾಮಿ ಎಂದು ಕರೆಯಲಾಗಿದ್ದ ಯುವ ಸನ್ಯಾಸಿಯು ಮಂಟಪದ ತಳಗಡೆ ಪಾತಾಳಲಿಂಗವೆಂದು ಪ್ರಸಿದ್ಧವಾಗಿದ್ದ ನೆಲಮಾಳಿಗೆಯಲ್ಲಿ ಆಶ್ರಯ ಪಡೆದ. ಅಲ್ಲಿ ಅವನು ಕಳೆದ ವಾರಗಳಲ್ಲಿ ಇರುವೆಗಳು, ಹುಳುಗಳು ಮತ್ತು ಸೊಳ್ಳೆಗಳು ಅವನ ಮಾಂಸವನ್ನು ತಿಂದವು. ಆದರೆ ಬ್ರಹ್ಮಾನಂದದಲ್ಲಿ ಲೀನವಾಗಿದ್ದ ಈ ಯುವಕ ನಿಶ್ಚಲವಾಗಿದ್ದ. 1949ರ ಮೇ ತಿಂಗಳಲ್ಲಿ, ಅಂದು ಗವರ್ನರ್ ಜನರಲ್ ಆಗಿದ್ದ, ರಾಜಾಜಿ ಈ ನೆಲಮಾಳಿಗೆಯನ್ನು ಉದ್ಘಾಟಿಸಿ ಅದರಲ್ಲಿ ರಮಣಮಹರ್ಷಿಗಳ ಭಾವಚಿತ್ರವನ್ನು ಅನಾವರಣ ಮಾಡಿದರು. ದೇವಸ್ಥಾನದ ಆವರಣದಲ್ಲಿ ಅದು ಈಗ ವಿಶೇಷ ಆಸಕ್ತಿಯ ಒಂದು ಸ್ಥಳವಾಗಿದೆ.

ಕೆಲವು ಭಕ್ತರು ಬ್ರಾಹ್ಮಣ ಸ್ವಾಮಿಯನ್ನು ನೆಲಮಾಳಿಗೆಯಲ್ಲಿ ಕಂಡಾಗ ಹುಳು ತುಂಬಿ ಕೀವು ಒಸರುತ್ತಿದ್ದ ಹುಣ್ಣುಗಳಿಂದ ಕೂಡಿದ ಅವರ ಘೋರಸ್ಥಿತಿ ಅವರಿಗೆ ತಿಳಿದಿರಲಿಲ್ಲ. ಅವರು ಸ್ವಾಮಿಯನ್ನು ಹತ್ತಿರದ ಗೋಪುರ ಸುಬ್ರಹ್ಮಣ್ಯದೇವರ ಗುಡಿಯಲ್ಲಿದ್ದ ಕಲ್ಲಿನ ಮಂಟಪಕ್ಕೆ ಸಾಗಿಸಿದರು. ಅಂದಿನಿಂದ ಅವರನ್ನು ಕುತೂಹಲಾಸಕ್ತ ಪ್ರೇಕ್ಷಕರಿಂದ ದೂರವಾಗಿಸಿ, ಊರಿನ ಹೊರಗಿದ್ದ ವಿವಿಧ ದೇವಸ್ಥಾನಗಳಿಗೆ ಮತ್ತು ತೋಪುಗಳಿಗೆ ಒಯ್ದರು. ಭಿಕ್ಷುಕರು, ಊರಿನ ಭಕ್ತರು, ದೇವಸ್ಥಾನದ ನೌಕರರು ಹಾಗೂ ಇತರ ಒಳ್ಳೆಯ ಜನ ಅವರನ್ನು ನೋಡಿಕೊಂಡರು. ಈ ತಿಂಗಳುಗಳಲ್ಲಿ ಅವರು ಆತ್ಮನಲ್ಲಿ ಲೀನವಾಗಿ, ವಾಸ್ತವದಲ್ಲಿ ಪ್ರಪಂಚದ ಬಗ್ಗೆ ಸತ್ತಂತೆಯೇ ಇದ್ದರು. ಯಾರಾದರೊಬ್ಬ ಭಕ್ತ ದಿನಕ್ಕೊಮ್ಮೆ ತರುತ್ತಿದ್ದ ಊಟ ಮತ್ತು ನೀರನ್ನು ಲಕ್ಷಿಸಿ ತೆಗೆದುಕೊಳ್ಳುವಂತಾಗಲು ಅವರನ್ನು ತೋಳು ಹಿಡಿದು ಬಲವಾಗಿ ಅಲ್ಲಾಡಿಸಬೇಕಾಗಿತ್ತು. ಭಕ್ತನೊಬ್ಬ ತಾಯಿಯಂತೆ ಅವರಿಗೆ ಬಲವಂತದಿಂದ ಸ್ನಾನವನ್ನು, ತಿರುವಣ್ಣಾಮಲೆಗೆ ಅವರು ಬಂದ ನಾಲ್ಕು ತಿಂಗಳಲ್ಲಿ ಮೊದಲನೆಯ ಸಲ

ಮಾಡಿಸಿದುದನ್ನು ಮಹರ್ಷಿಗಳು ವರ್ಷಾಂತರಗಳಾದ ಮೇಲೆ ಜ್ಞಾಪಿಸಿಕೊಂಡರು. ಅಂಥ ಇನ್ನೊಬ್ಬ ಭಕ್ತ ಅವರಿಗೆ ಎರಡನೆಯ ಸ್ನಾನವನ್ನು ಮಾಡಿಸಿದ್ದು ಹನ್ನೆರಡು ತಿಂಗಳ ತರುವಾಯ, ಅವರು ಗುರುಮೂರ್ತಂನಲ್ಲಿ ಇದ್ದಾಗ, ಅಂತೆಯೇ ಅವರು ಹದಿನೆಂಟು ತಿಂಗಳ ಕಾಲ ಕೂದಲು ಕತ್ತರಿಸಿರಲಿಲ್ಲ ಮತ್ತು ಮುಖ ಕ್ಷೌರಮಾಡಿಸಿರಲಿಲ್ಲ. ''ಕೂದಲು ಜಡೆಗಟ್ಟಿ ಬುಟ್ಟಿಯಂತೆ ಹೆಣೆದುಕೊಂಡಿತ್ತು. ಸಣ್ಣ ಕಲ್ಲುಗಳು ಮತ್ತು ಧೂಳು ಅದರಲ್ಲಿ ಸೇರಿಕೊಂಡು, ತಲೆ ಭಾರವಾಗಿ ಕಾಣಿಸುತ್ತಿತ್ತು. ಉಗುರುಗಳು ಉದ್ದವಾಗಿದ್ದು ನನ್ನ ರೂಪ ಭಯಂಕರವಾಗಿತ್ತು. ಆದ್ದರಿಂದ ಕ್ಷೌರ ಮಾಡಿಸಿಕೊಳ್ಳುವಂತೆ ಜನ ನನ್ನನ್ನು ಒತ್ತಾಯ ಪಡಿಸಿದರು. ನಾನು ಒಪ್ಪಿಕೊಂಡೆ. ನನ್ನ ತಲೆ ಸಂಪೂರ್ಣವಾಗಿ ಬೋಳಾದಾಗ, ನನಗೆ ತಲೆ ಇದೆಯೇ ಅಥವಾ ಇಲ್ಲವೇ ಎಂದು ಅನುಮಾನಪಡುತ್ತಿದ್ದೆ. ತಲೆ ಅಲ್ಲಿಯೇ ಇದೆ ಎಂಬುದನ್ನು ಖಚಿತಪಡಿಸಿಕೊಳ್ಳಲು ಅದನ್ನು ಅತ್ತಿಂದಿತ್ತ ಕೊಡವುತ್ತಿದ್ದೆ'' ಎಂದು ಎಷ್ಟೋ ವರ್ಷಗಳ ತರುವಾಯ ಅವರು ನಾಗಮ್ಮನಿಗೆ ಹೇಳಿದರು.

1897ರ ಪ್ರಾರಂಭದಲ್ಲಿ ಅವರನ್ನು ಗುರುಮೂರ್ತಂಗೆ ಕರೆದೊಯ್ಯಲಾಯಿತು. ಅದು ದೇವಸ್ಥಾನಕ್ಕೆ ಬಹುದೂರದಲ್ಲಿ, ಪ್ರಶಾಂತ ಪರಿಸರದಲ್ಲಿದ್ದ ಒಂದು ಮಠ. ಸುಮಾರು 19 ವರ್ಷಗಳು ಅವರು ಅಲ್ಲಿದ್ದರು. ಆತ್ಮನಲ್ಲಿ ತಲ್ಲೀನರಾಗಿಯೇ ಇದ್ದರು. ಮುಖ್ಯವಾಗಿ ಉದ್ದಂಡ ನಾಯನಾರ್ ಎಂಬ ಸಾಧು ಮತ್ತು ಅವನ ಸ್ನೇಹಿತ ಅಣ್ಣಾಲೆ ತಂಬಿರಾನ್ ಅವರನ್ನು ನೋಡಿಕೊಳ್ಳುತ್ತಿದ್ದರು. ಒಮ್ಮೆ ಯುವಕ ಸ್ವಾಮಿಗೆ ಮಧ್ಯಾಹ್ನದ ಭಿಕ್ಷೆಯನ್ನು ಕೊಡುವ ಮೊದಲು ಅವರನ್ನು ಹೂವು, ಧೂಪ, ಕರ್ಪೂರಾರತಿಗಳಿಂದ ವಿಧಿವತ್ತಾಗಿ ಪೂಜೆ ಮಾಡಬೇಕೆಂದು ತಂಬಿರಾನ್‌ಗೆ ಅನಿಸಿತು. ಅದಕ್ಕೆ ಸಿದ್ಧತೆಗಳನ್ನು ಮಾಡಿ ಅವನು ಸ್ವಲ್ಪ ಹೊತ್ತು ಹೊರಗೆ ಹೋಗಿದ್ದಾಗ, ಏನು ನಡೆಯುತ್ತಿದೆಯೆಂಬುದನ್ನು ಮಹರ್ಷಿ ಗಮನಿಸಿದರು. ಭಿಕ್ಷೆ ನೀಡುವುದೇ ಸಾಕಷ್ಟು ಸೇವೆ ಎಂಬ ಅರ್ಥ ಬರುವ ಕೆಲವು ತಮಿಳು ವಾಕ್ಯಗಳನ್ನು ಇದ್ದಲಿನ ಚೂರಿನಿಂದ ಗೋಡೆಯ ಮೇಲೆ ಬರೆದರು. ಕೆಲವು ದಿನಗಳ ತರುವಾಯ ಅವರ ಹೆಸರು ಮತ್ತು ಹುಟ್ಟಿದ ಊರು ತಿಳಿದುಕೊಳ್ಳಲು ಇತರ ಭಕ್ತರು ಒತ್ತಾಯಪಡಿಸಿದರು. ಅವರು ಇಂಗ್ಲೀಷ್ ಅಕ್ಷರಗಳಲ್ಲಿ ''ವೆಂಕಟರಾಮನ್ ತಿರುಚುಳಿ'' ಎಂದು ಬರೆದರು ಹುಚ್ಚನಂತೆ ಕಾಣುತ್ತಿದ್ದ ಈ ಹುಡುಗ ಅಕ್ಷರಸ್ಥ ಮತ್ತು ಅವನಿಗೆ ಇಂಗ್ಲೀಷ್ ಬರುತ್ತದೆ ಎಂಬುದಕ್ಕೆ ಇದು ಮೊದಲ ಸೂಚನೆಯಾಗಿತ್ತು.

ಸ್ವಲ್ಪ ಕಾಲದಲ್ಲಿಯೇ ಯುವ ಸನ್ಯಾಸಿಯ ಪೋಷಣೆಯನ್ನು ಪಳನಿಸ್ವಾಮಿ ಎನ್ನುವವರು ವಹಿಸಿಕೊಂಡರು. ಇವರು ದೂರದ ದೇವಸ್ಥಾನವೊಂದರಲ್ಲಿದ್ದ ವಿನಾಯಕನ ವಿಗ್ರಹವನ್ನು ಪೂಜೆ ಮಾಡುತ್ತಿದ್ದ ಒಬ್ಬ ಮಲಯಾಳಿ ಸಾಧು. 'ಜೀವಂತ ದೇವರ' ದರ್ಶನಕ್ಕಾಗಿ ಅವರನ್ನು ಕೆಲವು ಭಕ್ತರು ಗುರುಮೂರ್ತಂಗೆ ಕರೆತಂದಿದ್ದರು.

ವಿನಾಯಕನ ಪೂಜೆ ಮುಂದುವರೆಯಲು ಬೇರೆ ಏರ್ಪಾಡು ಮಾಡಿ ಪಳನಿಸ್ವಾಮಿ ತಮ್ಮನ್ನು ಬ್ರಾಹ್ಮಣಸ್ವಾಮಿಯ ಪೂರ್ಣಕಾಲದ ಸೇವೆಗೆ ವಿನಿಯೋಗಿಸಿಕೊಂಡು, 20 ವರ್ಷಗಳಿಗೂ ಮೀರಿ ಅವರ ಶುಶ್ರೂಷೆ ಮಾಡಿದರು.

ಈ ನಡುವೆ ಮಧುರೆ ಮತ್ತು ಮಾನಮಧುರೆಯಲ್ಲಿದ್ದ ವೆಂಕಟರಾಮನ್‌ರ ಬಂಧುಗಳಿಗೆ ಇವರ ಬಗ್ಗೆ ಸುದ್ದಿಯೇ ತಿಳಿಯಲಿಲ್ಲ. ಇಪ್ಪತ್ತು ತಿಂಗಳ ಕಾಲ ಅನೇಕ ಸ್ಥಳಗಳಲ್ಲಿ ಅವರನ್ನು

ಹುಡುಕಲಾಯಿತು ಮತ್ತು ಅವರ ಬಗ್ಗೆ ವಿಚಾರಿಸಲಾಯಿತು. ಆದರೆ ಅವರ ಸುಳಿವು ಸಿಗಲಿಲ್ಲ. 1898ರ ಮೇ 1ನೇ ತಾರೀಖು ಮಧುರೆಯಲ್ಲಿ ಸುಬ್ಬು ಅಯ್ಯರ್ ಕಾಲವಾದ ಕೆಲವು ದಿನಗಳ ತರುವಾಯ ಆಕಸ್ಮಿಕವಾಗಿ ಅವರ ಪತ್ತೆ ತಿಳಿಯಿತು. ಅಂತ್ಯಸಂಸ್ಕಾರಗಳಲ್ಲಿ ಪಾಲುಗೊಳ್ಳಲು ಅಳಗಮ್ಮಾಳ್ ಮತ್ತು ಆಕೆಯ ಭಾವ ನೆಲ್ಲಿಯಪ್ಪ ಅಯ್ಯರ್ ಮಾನ ಮಧುರೆಯಿಂದ ಬಂದಿದ್ದರು. ಗುರುಮೂರ್ತಂನಲ್ಲಿ ಯುವಕ ಸ್ವಾಮಿಯ ಹೆಸರು ಮತ್ತು ಊರುಗಳನ್ನು ತಿಳಿದುಕೊಂಡಿದ್ದ ಅಣ್ಣಾಮಲೈ ತಂಬಿರಾನ್ ಅದೇ ಸಮಯಕ್ಕೆ ಮಧುರೆಗೆ ಬಂದಿದ್ದರು. ಧಾರ್ಮಿಕ ಪ್ರವಚನವೊಂದರಲ್ಲಿ ತಮ್ಮ ಪಕ್ಕದಲ್ಲಿ ಕುಳಿತಿದ್ದ ಯುವಕನೊಂದಿಗೆ ತಿರುವಣ್ಣಾಮಲೆಯಲ್ಲಿ ಪ್ರಸಿದ್ಧ ಸಂತರಾಗಿದ್ದ ತಿರುಚುಳಿಯ ವೆಂಕಟರಾಮನ್ ಬಗ್ಗೆ ಹೇಳಿದರು. ಆ ಕುಟುಂಬದ ಸ್ನೇಹಿತನಾಗಿದ್ದ ಆ ಯುವಕ ಅಯ್ಯರ್ ಮತ್ತು ಅಳಗಮ್ಮಾಳ್‌ರನ್ನು ಕಂಡು, ತಾನು ಕೇಳಿದ್ದನ್ನು ಅವರಿಗೆ ತಿಳಿಸಿದ.

ನೆಲ್ಲಿಯಪ್ಪ ಅಯ್ಯರ್ ಕೂಡಲೆ ತಿರುವಣ್ಣಾಮಲೆಗೆ ಹೊರಟರು. ಗುರುಮೂರ್ತಂ ಮಠದ ಪಕ್ಕದಲ್ಲಿದ್ದ ಮಾವಿನ ತೋಟಕ್ಕೆ ಹೋದರು. ಅಷ್ಟು ಹೊತ್ತಿಗೆ, ಬ್ರಾಹ್ಮಣ ಸ್ವಾಮಿ ಮತ್ತು ಅವರ ನಿಷ್ಠಾವಂತ ಪರಿಚರ ತೋಟದ ಯಜಮಾನನ ಆಹ್ವಾನದ ಮೇರೆಗೆ ಅಲ್ಲಿಯ ಎರಡು ಗುಡಿಸಲುಗಳಲ್ಲಿ ಆವಾಸ ಮಾಡಿದ್ದರು. ಜೊಂತೆಗೂದಲು, ಉದ್ದನೆಯ ಉಗುರುಗಳಿಂದ ಕೂಡಿ, ಒಟ್ಟಿನಲ್ಲಿ ಕೊಳಕು ಕೊಳಕಾಗಿದ್ದ ವೆಂಕಟರಾಮನ್‌ರನ್ನು ಗುರುತಿಸುವುದೇ ಕಷ್ಟವಾಗಿತ್ತು. ಅವರ ಬಲಗಾಲಿನ ಕಡಿಯ ಮೇಲಿದ್ದ ಅರೆಗೆಂಪು ಮಚ್ಚೆ ನಿಸ್ಸಂದೇಹವಾಗಿ ವೆಂಕಟರಾಮನ್‌ದೇ ಆಗಿತ್ತು. ಯುವಕ ಸನ್ಯಾಸಿ ತನ್ನ ಮೌನವನ್ನು ಭಂಗಮಾಡಲಿಲ್ಲ. ವಾಪಸಾಗಲು ನೆಲ್ಲಿಯಪ್ಪ ಅಯ್ಯರ್ ಮಾಡಿದ ಪ್ರಾರ್ಥನೆ ವ್ಯರ್ಥವಾಯಿತು. ತಮ್ಮ ದೊಡ್ಡಪ್ಪನ ಈ ಭೇಟಿಯ ಬಗ್ಗೆ ಮಹರ್ಷಿಗಳು ಅನೇಕ ವರ್ಷಗಳ ತರುವಾಯ ನಾಗಮ್ಮನಿಗೆ ಹೇಳಿದರು. "ಅವರು ಸುಬ್ಬು ಅಯ್ಯರ್ ಮನಾದರೂ ಆಗಿದ್ದಿದ್ದರೆ, ನನ್ನನ್ನು ಇಲ್ಲಿಯೇ ಬಿಟ್ಟು ಮನೆಗೆ ಮರುಳುತ್ತಿರಲಿಲ್ಲ. ನನ್ನನ್ನು ಗಂಟುಮೂಟೆ ಕಟ್ಟಿ ಹೊತ್ತುಕೊಂಡು ಹೋಗಿಬಿಡುತ್ತಿದ್ದರು. ಸುಬ್ಬು ಅಯ್ಯರಿಗೆ ಬಹಳ ಧೈರ್ಯ ಮತ್ತು ದರ್ಪ ಇದ್ದವು. ಆದರೆ ಈ ಮನುಷ್ಯ ಬಹಳ ಸಾಧು ಮತ್ತು ಮೃದು, ನಾನು ಇಲ್ಲಿಯೇ ಇರಬೇಕಾಗಿದ್ದುದು ವಿಧಿಯ ತೀರ್ಮಾನವಾಗಿದ್ದುದರಿಂದ, ಸುಬ್ಬು ಅಯ್ಯರ್ ಬದುಕಿರುವವರೆಗೆ ನನ್ನ ಪತ್ತೆ ತಿಳಿಯಲಿಲ್ಲ. ನೆಲ್ಲಿಯಪ್ಪ ಅಯ್ಯರ್ ಅಧ್ಯಾತ್ಮಿಕ ಮನೋವೃತ್ತಿಯವರೂ ಮೃದುವರ್ತನೆಯವರೂ ಆಗಿದ್ದುದರಿಂದ, 'ಇವನಿಗೇಕೆ ತೊಂದರೆ ಮಾಡಬೇಕು?' ಎನ್ನುತ್ತ ನನ್ನನ್ನು ಇಲ್ಲಿಯೇ ಬಿಟ್ಟರು." ಆದರೆ ನೆಲ್ಲಿಯಪ್ಪ ಅಯ್ಯರ್ ಬಹಳ ಭಾರವಾದ ಹೃದಯದಿಂದ ಮಧುರೆಗೆ ವಾಪಸಾದರು. ಮಾವಿನ ತೋಟದಿಂದ ಹೊರಬಂದಾಗ ಅವರು ಧಾರ್ಮಿಕ ಉಪನ್ಯಾಸವೊಂದನ್ನು ಮುಗಿಸುತ್ತಿದ್ದ ಒಬ್ಬ ಪಂಡಿತರನ್ನು ಸಂಧಿಸಿದರು. ಚಿಂತೆಗೀಡಾಗಿದ್ದ ದೊಡ್ಡಪ್ಪ ಯುವಸ್ವಾಮಿಯ ಬಗ್ಗೆ ಅವರ ಅಭಿಪ್ರಾಯ ಕೇಳಿದರು. ಅದೇನೂ ಪ್ರಶಂಸೆಯದಾಗಿರಲಿಲ್ಲ. "ಯಾವುದೇ ವಿದ್ಯಾಭ್ಯಾಸ ಇಲ್ಲದೆ, ಅಪಕ್ವ ಶಾಸ್ತ್ರಜ್ಞಾನ ಪಡೆದು ಆ ಹುಡುಗ ಅಲ್ಲಿ ಕುಳಿತಿದ್ದಾನೆ." ಆದರ ಬ್ರಾಹ್ಮಣಸ್ವಾಮಿ ವಿರೂಪಾಕ್ಷ ಗುಹೆಯಲ್ಲಿದ್ದಾಗ, ನೆಲ್ಲಿಯಪ್ಪ ಅಯ್ಯರ್ ತಮ್ಮ ಮೂರನೆಯ ಭೇಟಿಯಲ್ಲಿ ಯಾರಿಗೂ ತಿಳಿಯದಂತೆ ಒಳಹೊಕ್ಕರು. ಶಂಕರರ ದಕ್ಷಿಣಾಮೂರ್ತಿಸ್ತೋತ್ರವನ್ನು ವಿವರಿಸುತ್ತಿದ್ದ ಯುವಗುರುವನ್ನು ಗಮನಿಸಿದರು. ಆಗ

ಅವರು ತಮ್ಮನ ಮಗನ ಪ್ರೌಢ ಪಾಂಡಿತ್ಯವನ್ನು ಕಂಡುಕೊಂಡರು. ಅವರ ಆತಂಕ ಪರಿಹಾರವಾಯಿತು. ಅದೇ ಅವರ ಕೊನೆಯ ಭೇಟಿಯಾಯಿತು. ಸ್ವಲ್ಪ ಕಾಲದೊಳಗೆ ಅವರು ತೀರಿಕೊಂಡರು.

ಗುರುಮೂರ್ತಂ ಮಠದಲ್ಲಿ ಮತ್ತು ಅದರ ಪಕ್ಕದ ಮಾವಿನ ತೋಟದಲ್ಲಿ ಸುಮಾರು 19 ತಿಂಗಳು ಕಳೆದ ನಂತರ, 1898ರ ಕೊನೆಯ ಭಾಗದಲ್ಲಿ ಯುವಕ ಸ್ವಾಮಿ ಅರುಣ ಗಿರಿನಾಥರ ದೇವಸ್ಥಾನಕ್ಕೆ ತಮ್ಮ ನಿವಾಸ ಬದಲಾಯಿಸಿದರು. ಏಕಾಂತವಾಗಿರಲು ಇಚ್ಛಿಸಿ ಪಳನಿಸ್ವಾಮಿಗೆ ತನಗೆ ಬೇಕಾದ ಕಡೆಗೆ ಹೋಗುವಂತೆ ಹೇಳಿದರು. ಆದರೆ ಕರು ತನ್ನ ತಾಯಿಯ ಬಳಿಗೆ ಮರಳುವಂತೆ ಆ ನಿಷ್ಠಾವಂತ ಶಿಷ್ಯ ಸಾಯಂಕಾಲಕ್ಕೇ ವಾಪಸಾದರು. ಈ ದೇವಸ್ಥಾನದಲ್ಲಿ ಅವರು ಕಳೆದ ಒಂದು ತಿಂಗಳ ಕಾಲದಲ್ಲಿ ಯುವಕ ಸ್ವಾಮಿಯು ತಿರುವಣ್ಣಾಮಲೆಯ ಬೀದಿಗಳಲ್ಲಿ ಭಿಕ್ಷೆ ಎತ್ತುವ ಸನ್ಯಾಸಿ ಜೀವನವನ್ನು ಸಾಗಿಸಿದರು. ಮನೆಯೊಂದರ ಮುಂದೆ ನಿಂತು ಚಪ್ಪಾಳೆ ತಟ್ಟುತ್ತಿದ್ದರು. ಯಾರಾದರೂ ಆಹಾರ ತಂದರೆ ಅದನ್ನು ಎರಡು ಕೈಗಳಲ್ಲೂ ಸ್ವೀಕರಿಸಿ ರಸ್ತೆಯಲ್ಲಿ ನಿಂತುಕೊಂಡೇ ಅದನ್ನು ತಿನ್ನುತ್ತಿದ್ದರು. ಒಂದೇ ಮನೆಯಿಂದ ಎರಡು ಸಲ ಭಿಕ್ಷೆ ಬೇಡುತ್ತಿರಲಿಲ್ಲ. ಪ್ರತಿದಿನವೂ ಬೇರೆ ರಸ್ತೆಯಲ್ಲಿ ಹೋಗುತ್ತಿದ್ದರು. ಬಹಳ ಕಾಲದ ಮೇಲೆ ಭಿಕ್ಷಾಟನೆಯ ಈ ಕಾಲವನ್ನು ಜ್ಞಾಪಿಸಿಕೊಳ್ಳುತ್ತಾ ರಮಣ ಮಹರ್ಷಿ ತಮ್ಮ ಭಕ್ತನೊಬ್ಬನಿಗೆ ಹೇಳಿದರು: ''ಹಾಗೆ ಭಿಕ್ಷೆ ಎತ್ತುತ್ತಿದ್ದಾಗ ನಾನು ಅನುಭವಿಸುತ್ತಿದ್ದ ಘನತೆ ಮತ್ತು ಗಾಂಭೀರ್ಯ ಭಾವವನ್ನು ನೀನು ಊಹಿಸಲಾರೆ. ಮೊದಲನೆಯ ದಿನ ಗುರುಗಳ ಹೆಂಡತಿಯ ಹತ್ತಿರ ಭಿಕ್ಷೆ ಬೇಡಿದಾಗ ನನಗೆ ಸಂಕೋಚ ಆಯಿತು. ಅದಕ್ಕೆ ಕಾರಣ ನನ್ನನ್ನು ಬೆಳೆಸಿದ್ದ ರೀತಿನೀತಿಗಳ ಪರಿಣಾಮ. ಆದರೆ ಅನಂತರದಲ್ಲಿ ನನಗೆ ಸ್ವಲ್ಪವೂ ಕೀಳುಭಾವನೆ ಬರಲಿಲ್ಲ. ನಾನು ಒಬ್ಬ ರಾಜನಂತೆ ಮತ್ತು ರಾಜನಿಗೂ ಮೇಲಿನವನಂತೆ ನನಗೆ ಅನಿಸಿತು. ಕೆಲವು ಸಲ ನನಗೆ ಯಾವುದೋ ಮನೆಯಲ್ಲಿ ಹಳಸಿದ ಅಂಬಲಿ ಸಿಗುತ್ತಿತ್ತು. ಉಪ್ಪು ಅಥವಾ ಇತರ ಯಾವುದೇ ವ್ಯಂಜನ ಇಲ್ಲದೆ ನಾನು ಅದನ್ನು ನಡುಬೀದಿಯಲ್ಲಿ, ನನ್ನ ಬಳಿಗೆ ಬಂದು ಸಾಷ್ಟಾಂಗ ನಮಸ್ಕಾರ ಮಾಡುತ್ತಿದ್ದ ಪಂಡಿತರ ಮತ್ತು ಪ್ರಮುಖ ವ್ಯಕ್ತಿಗಳ ಎದುರಿಗೇ ತಿಂದುಬಿಡುತ್ತಿದ್ದೆ. ಅನಂತರ ತಲೆಯ ಮೇಲೆ ಕೈಗಳನ್ನು ಒರಸಿ, ಪರಮಾನಂದದಿಂದ, ಚಕ್ರವರ್ತಿಗಳು ಕೂಡ ನನ್ನ ದೃಷ್ಟಿಯಲ್ಲಿ ಕೇವಲ ಹುಲ್ಲು ಕಡ್ಡಿಗಳು ಎಂಬ ಮನೋಭಾವದಿಂದ ಮುಂದೆ ಸಾಗುತ್ತಿದ್ದೆ. ಈ ಬಗೆಯ ಮಾರ್ಗವೊಂದು ಇರುವುದರಿಂದಲೇ ನಾವು ಚರಿತ್ರೆಯಲ್ಲಿ ಸಿಂಹಾಸನಗಳನ್ನು ತೊರೆದು ಭಿಕ್ಷಾಟನೆ ಹಿಡಿಯುತ್ತಿದ್ದ ರಾಜರ ಕಥೆಗಳನ್ನು ನೋಡುವುದು.''

ಅರುಣಗಿರಿನಾಥರ ದೇವಸ್ಥಾನ ಅಗ್ರಹಾರಕ್ಕೆ ಹತ್ತಿರವಾಗಿದ್ದುದರಿಂದ, ಬ್ರಾಹ್ಮಣ ಸ್ವಾಮಿಯನ್ನು ನೋಡುವ ಕುತೂಹಲವಿದ್ದ ಜನಗಳ ಗುಂಪು ಹೆಚ್ಚಾಯಿತು. ಅರುಣಾಚಲೇಶ್ವರ ದೇವಾಸ್ಥಾನದ ಗೋಪುರಗಳು ಮತ್ತು ಅದರ ಆವರಣದೊಳಗಿದ್ದ ದಾಸವಾಳದ ತೋಟದಲ್ಲಿ ಕೆಲವು ದಿನಗಳನ್ನು ಕಳೆದ ಬಳಿಕ, ಅವರು ಊರಿನ ಸರಹದ್ದನ್ನು ಬಿಟ್ಟು, ಅರುಣಾಚಲ ಪರ್ವತದ ಪೂರ್ವದಿಕ್ಕಿನ ಪಕ್ಕದಲ್ಲಿ ಪವಳಕುನ್ರು ಎಂಬ ಸ್ಥಳದಲ್ಲಿ ವಾಸಮಾಡಲು ಪ್ರಾರಂಭಿಸಿದರು. ಅಲ್ಲಿ ಒಂದು ಈಶ್ವರ ದೇವಾಲಯ, ಒಂದು ತೊರೆ ಮತ್ತು ಒಂದು ಗುಹೆ ಇದ್ದವು. ಅವರು ಪವಳಕುನ್ರುವಿನಲ್ಲಿ ಆರು ತಿಂಗಳು ಮಾತ್ರ

ವಾಸಮಾಡಿದರೂ, ಭಿಕ್ಷೆ ಬೇಡಲಾಗಲೀ ಇನ್ನಾವುದೇ ಕಾರಣಕ್ಕಾಗಿ ಊರಿಗೆ ಮರಳಿ ಹೋಗಲಿಲ್ಲ. 1922ರ ಕೊನೆಯವರೆಗೆ ಬೆಟ್ಟದ ಮೇಲೆಯೇ ವಾಸಮಾಡಿದರು. ಅವರ ಅಂದಿನ ಆವಾಸ ಇಂದು 'ಶ್ರೀರಮಣಾಶ್ರಮ' ಎಂದು ಪ್ರಸಿದ್ಧವಾಗಿದೆ.

ಯುವಕ ಸ್ವಾಮಿ ಪವಳಕುನ್ರುವಿನಲ್ಲಿದ್ದಾಗಲೆ, ಅವರ ತಾಯಿ ಅವರನ್ನು ಮೊದಲ ಬಾರಿಗೆ, ಮಧುರೆಯ ಚಿಕ್ಕಪ್ಪನ ಮನೆಯಿಂದ ಅವರು ತಪ್ಪಿಸಿಕೊಂಡು ಹೋದ 28 ತಿಂಗಳ ಅನಂತರ, ಕಂಡದ್ದು. ಹುಡುಗನನ್ನು ಮನೆಗೆ ವಾಪಸು ಕರೆತರುವುದರಲ್ಲಿ ವಿಫಲರಾಗಿ ಅವರ ದೊಡ್ಡಪ್ಪ ನೆಲ್ಲಿಯಪ್ಪ ಅಯ್ಯರ್ ತಿರುವಣ್ಣಾಮಲೆಯಿಂದ ಮರಳಿಬಂದಾಗ, ಅಳಗಮ್ಮಾಳಿಗೆ ತಾನೇ ಸ್ವತಃ ಹೋಗಿ ಎದುರಿನಲ್ಲಿ ಅವರಿಗೆ ಮೊರೆಯಿಡಬೇಕೆನಿಸಿತು. ಆದರೆ 1898ರ ಡಿಸೆಂಬರ್‌ವರೆಗೆ, ಸರ್ಕಾರಿ ಕಚೇರಿಯೊಂದರಲ್ಲಿ ಗುಮಾಸ್ತೆಯಾಗಿ ಕೆಲಸ ಮಾಡುತ್ತಿದ್ದ ಅವರ ಹಿರಿಯ ಮಗ ನಾಗಸ್ವಾಮಿಗೆ ಅವರನ್ನು ತಿರುವಣ್ಣಾಮಲೆಗೆ ಕರೆದುಕೊಂಡು ಹೋಗಲು ಕ್ರಿಸ್‌ಮಸ್ ರಜೆಯ ಬಿಡುವು ದೊರೆಯುವ ತನಕ, ಅವರು ಪ್ರಯಾಣ ಕೈಗೊಳ್ಳಲಾಗಲಿಲ್ಲ. ಊರನ್ನು ತಲುಪಿದಾಗ, ಸ್ಥಳೀಯವಾಗಿ ಬ್ರಾಹ್ಮಣಸ್ವಾಮಿ ಎಂದು ಹೆಸರಾಗಿದ್ದ ಅವರ ವೆಂಕಟರಾಮನ್ ಆಗ ಪವಳಕುನ್ರುವಿನಲ್ಲಿ ಬೆಟ್ಟದ ತಪ್ಪಲಿನಲ್ಲಿ ವಾಸಮಾಡುತ್ತಿದ್ದಾರೆಂದು ತಿಳಿಯಿತು. ಅಲ್ಲಿ ಅವರು ಬಂಡೆಯ ಮೇಲೆ ಕುಳಿತಿದ್ದ ಸ್ವಾಮಿಯನ್ನು ಕಂಡರು. ಮನೆಗೆ ವಾಪಸಾಗೆಂದು ಅಕ್ಕರೆಯ ತಾಯಿ ಒತ್ತಾಯಪಡಿಸಲು ಪ್ರಾರಂಭಿಸಿದ ಕೆಲವು ಕ್ಷಣಗಳ ತರುವಾಯ ಅವರು ಕಣ್ಣು ಮುಚ್ಚಿಕೊಂಡರು. ಅಳಗಮ್ಮಾಳ್ ಮತ್ತು ನಾಗಸ್ವಾಮಿ ಪ್ರತಿದಿನ ಬಂದರು. ತಾಯಿ ತಮ್ಮ ಮೊರೆಯನ್ನು ಮುಂದುವರೆಸಿದರು. ಆದರೆ ಸ್ವಾಮಿ ನಿಶ್ಚಲವಾಗಿ ಮೌನದಿಂದ ಕುಳಿತಿದ್ದರು. ಆಕೆ ಬಿಕ್ಕಿ ಬಿಕ್ಕಿ ಅಳಲು ಪ್ರಾರಂಭಿಸಿದಾಗ ಅವರು ಎದ್ದು ನಿಧಾನವಾಗಿ ಹೊರಟುಹೋದರು. ಸ್ವಾಮಿ ಮಾತನಾಡದಿರುವುದರಿಂದ ಯಾವುದಾದರೂ ಉತ್ತರವನ್ನು ಬರೆದು ತೋರಿಸಬಹುದೆಂದು ಒಬ್ಬ ಶಿಷ್ಯರು ಕೊನೆಯಲ್ಲಿ ಸೂಚಿಸಿದರು. "ವಿಧಿ ವಿಧಿಸಿದ್ದು ಆಗುತ್ತದೆ. ಸುಮ್ಮನಿರುವುದೇ ಉತ್ತಮವಾದ ಮಾರ್ಗ," ಎಂದು ಅವರು ಸಾಮಾನ್ಯ ಹೇಳಿಕೆಯ ರೂಪದಲ್ಲಿ ಅದನ್ನು ಮಾಡಿದರು. ದುಃಖದಿಂದ ತಾಯಿ ಮಾನಮಧುರೆಗೆ ವಾಪಸಾದರು. ಸ್ವಾಮಿ ಹಿಂದಿನಂತೆಯೇ ಉಳಿದರು.

1899ರ ಪ್ರಾರಂಭದಲ್ಲಿ ಯುವ ಸನ್ಯಾಸಿಯು ಪಳನಿಸ್ವಾಮಿಯ ಜೊತೆ ಪವಳಕುನ್ರುವನ್ನು ಬಿಟ್ಟು, ವಿರೂಪಾಕ್ಷ ಗುಹೆಯಲ್ಲಿ ತಮ್ಮ ಆವಾಸ ಹೂಡಿದರು. ಅಲ್ಲಿ ಸಮಾಧಿಯಾಗಿದ್ದ ಸಂತರೊಬ್ಬರಿಂದ ಗುಹೆಗೆ ಆ ಹೆಸರು ಬಂದಿತ್ತು. ಇಲ್ಲಿ ಅವರು ಸುಮಾರು 17 ವರ್ಷ ಇದ್ದರು. ಆದರೆ ಬೇಸಿಗೆ ಕಾಲದಲ್ಲಿ, ಪಕ್ಕದಲ್ಲಿದ್ದ ತೊರೆ ಬತ್ತಿ ಹೋದಾಗ, ಅವರು ಮಾವಿನ ಮರದ ಬುಡದಲ್ಲಿದ್ದ ಇನ್ನೊಂದು ಗುಹೆಗೆ ಹೋಗುತ್ತಿದ್ದರು. ಅದರ ಹತ್ತಿರ ಮುಳೈಪಾಲ್ ತೀರ್ಥ ಎಂಬ ಸದಾ ನೀರಿರುತ್ತಿದ್ದ ಕೊಳವಿದ್ದಿತು. ತನಗೆ ಮತ್ತು ತನ್ನ ಗುರುವಿಗೆ ಪಳನಿ ಸ್ವಾಮಿ ಊರಿನಿಂದ ದಿನಕ್ಕೆ ಒಂದು ಸಲ ಆಹಾರ ತರುತ್ತಿದ್ದ. ಸಂಖ್ಯೆ ಹೆಚ್ಚುತ್ತಿದ್ದ ಭಕ್ತರು ಮತ್ತು ಸಂದರ್ಶಕರು ಸನ್ಯಾಸಿಗೆ ಸಮರ್ಪಿಸಲು ಆಹಾರವನ್ನು ತರುತ್ತಿದ್ದುದರಿಂದ, ಇದರ ಅವಶ್ಯಕತೆ ದಿನದಿನಕ್ಕೂ ಕಡಿಮೆಯಾಯಿತು. ಪ್ರತಿದಿನದ ಸ್ನಾನದ ವ್ಯವಸ್ಥೆಯನ್ನು ಏರ್ಪಡಿಸಿದವನೂ ಆತನೇ.

ವಿರೂಪಾಕ್ಷ ಗುಹೆಯ ಅವಧಿಯಲ್ಲಿ ಯುವ ಸನ್ಯಾಸಿ ಸಮಾಧಿ ಮತ್ತು ಮೌನಗಳಿಂದ

ಕ್ರಮೇಣ ಸಾಮಾನ್ಯ ಬಾಹ್ಯಜೀವನಕ್ಕೆ ಹಿಂದಿರುಗಿದರು. ಗುರುಮೂರ್ತಂನಲ್ಲಿ ಇದ್ದಾಗಲೇ ಅವರು ಪಳನಿಸ್ವಾಮಿಯೊಡನೆ ಸ್ವಲ್ಪ ಮಾತನಾಡಲು ಪ್ರಾರಂಭಿಸಿದ್ದರು. ಇದು ಹೆಚ್ಚು ಸಲ ಆಗತೊಡಗಿತು. ಅಷ್ಟು ಬುದ್ಧಿವಂತನಲ್ಲದಿದ್ದರೂ ಪಳನಿಸ್ವಾಮಿ ಆಧ್ಯಾತ್ಮಿಕ ಬೋಧನೆಯ ಪುಸ್ತಕಗಳನ್ನು ಪಟ್ಟಾಗಿ ಓದುತ್ತಿದ್ದ. ಊರಿನಲ್ಲಿದ್ದ ಗ್ರಂಥಾಲಯದಿಂದ ತರುತ್ತಿದ್ದ ಆಧ್ಯಾತ್ಮ ರಾಮಾಯಣ, ಯೋಗವಾಸಿಷ್ಠ, ಕೈವಲ್ಯ ನವನೀತಂ ಮತ್ತು ವೇದಾಂತ ಚೂಡಾಮಣಿ ಮುಂತಾದ ಗ್ರಂಥಗಳಲ್ಲಿದ್ದ ವಿಷಯಗಳನ್ನು ವಿವರಿಸುವಂತೆ ತನ್ನ ಗುರುವನ್ನು ಕೇಳುತ್ತಿದ್ದ. ಇದಕ್ಕಾಗಿ ಯುವಸ್ವಾಮಿ ಪಳನಿಸ್ವಾಮಿಯ ಸಹಾಯದಿಂದ ಮಲಯಾಳಂ ಕಲಿತರು. ಬೇಗನೆ ಆ ಭಾಷೆಯಲ್ಲಿ ಉನ್ನತ ಪ್ರೌಢಿಮೆ ಗಳಿಸಿದರು. ವಿವಿಧ ಪಂಥಗಳ ವಿದ್ವಾಂಸರು ತಮ್ಮ ತಮ್ಮ ಭಾಷೆಯಲ್ಲಿದ್ದ ತಮ್ಮ ಪ್ರಿಯ ಗ್ರಂಥಗಳನ್ನು ಸ್ವಾಮಿಗಳ ಹತ್ತಿರ ವಿವರಣೆಗೆ ಮತ್ತು ವ್ಯಾಖ್ಯಾನಕ್ಕಾಗಿ ತಂದಾಗ ಇದೇ ಪ್ರಯೋಗ ನಡೆಯಿತು. ತರುವಾಯ ಅವರು ಗಂಭೀರಂ ಶೇಷಯ್ಯನ ನೆರವಿನಿಂದ ತೆಲುಗನ್ನೂ, ಕಾವ್ಯ ಕಂಠ ಗಣಪತಿ ಶಾಸ್ತ್ರಿಯ ನೆರವಿನಿಂದ ಸಂಸ್ಕೃತವನ್ನೂ ಕಲಿತದ್ದು ಈ ರೀತಿಯಲ್ಲಿ.

ತಿರುವಣ್ಣಾಮಲೆಗೆ ಬಂದ ಮತ್ತು ಸಾಧಕರ ಪ್ರಶ್ನೆಗಳಿಗೆ ಲಿಖಿತದ ಮೂಲಕ ಉತ್ತರ ಕೊಡಲು ಪ್ರಾಂಭಿಸಿದ ನಡುವಣ ಮೂವತ್ತು ತಿಂಗಳನ್ನು ಯುವ ಸನ್ಯಾಸಿ ತಪಸ್ಸಿನ ಅಥವಾ ಸಾಧನೆಯ ಕಾಲದಂತೆ ಕಳೆದರು. ಆದರೆ ಆ ಏಕಾಂತತೆ ಮತ್ತು ಮೌನ, ದೇಹದ ಉಪೇಕ್ಷೆ ಮತ್ತು ಪ್ರಯತ್ನಿಸಿದರೂ ಸಂದರ್ಶಕರು ಅವರ ಗಮನ ಸೆಳೆಯಲಾಗದಿದ್ದ ದೀರ್ಘಾವಧಿಗಳ ಸಮಾಧಿ–ಇವು ಆತ್ಮಸಾಕ್ಷಾತ್ಕಾರವನ್ನು ಗಳಿಸಲು ಬುದ್ಧಿಪೂರ್ವಕವಾದ ಸಾಧನೆಯೊಂದರ ಅಂಗವಾಗಿರದೆ ಅದರ ಸಿದ್ಧಿಯ ಸಾಕ್ಷಾತ್ ಪರಿಣಾಮವಾಗಿದ್ದವು. ಅನಂತರ ಅವರು ವಿವರಿಸಿದಂತೆ, ''ನಾನು ತಿನ್ನುತ್ತಿರಲಿಲ್ಲ. ಆದ್ದರಿಂದ ನಾನು ಉಪವಾಸ ಮಾಡುತ್ತಿದ್ದೇನೆ ಎನ್ನುತ್ತಿದ್ದರು. ನಾನು ಮಾತನಾಡುತ್ತಿರಲಿಲ್ಲ. ಆದ್ದರಿಂದ ನಾನು ಮೌನ ಆಚರಿಸುತ್ತಿದ್ದೇನೆ ಎನ್ನುತ್ತಿದ್ದರು.''

ಪ್ರಶ್ನೆಗಳಿಗೆ ಉತ್ತರವಾಗಿ ಅವರು ತಿರುವಣ್ಣಾಮಲೆಯಲ್ಲಿದ್ದ ಮೊದಲ ತಿಂಗಳುಗಳಲ್ಲಿ ತಮ್ಮ ಹೃದಯವನ್ನು ತುಂಬಿದ್ದ ಅನಿರ್ವಚನೀಯವಾದ ಆನಂದದಲ್ಲಿ ತಾವು ಹೇಗೆ ಮುಳುಗಿಹೋಗಿದ್ದರು, ತಮ್ಮ ದೇಹದ ಮತ್ತು ಪರಿಸರದ ಸಂಪೂರ್ಣ ಅರಿವನ್ನು ಹೇಗೆ ಕಳೆದುಕೊಂಡಿದ್ದರು, ತಮ್ಮ ಇಂದ್ರಿಯಗಳ ಮತ್ತು ಮನಸ್ಸಿನ ಉಪಯೋಗವನ್ನು ಕ್ರಮೇಣ ಪುನಃ ಹೇಗೆ ಸಂಪಾದಿಸಿದರು, ಮತ್ತು ಸುತ್ತಲಿರುವುದನ್ನು ಮತ್ತೆ ಹೇಗೆ ಕಲಿತುಕೊಂಡರು ಎನ್ನುವುದನ್ನು ವಿವರಿಸುತ್ತಿದ್ದರು. ಹೊರ ಜಗತ್ತಿನ ಸಾಮಾನ್ಯ ವ್ಯವಹಾರಗಳಿಗೆ ಮತ್ತು ಇತರ ಜನರೊಡನೆ ರೂಢಿಯ ಮಾತುಕತೆಗೆ ಅವರು ನಿಧಾನವಾಗಿ ಹಿಂತಿರುಗಿದ್ದನ್ನು ಹೊಸ 'ವ್ಯಕ್ತಿ'ಯೊಬ್ಬರ ಸ್ಪಷ್ಟವಾದ ಬೆಳವಣಿಗೆಯೆಂದು ವರ್ಣಿಸಬಹುದು ಆ ವ್ಯಕ್ತಿ ಸಂಪೂರ್ಣವಾಗಿ ಸಾತ್ವಿಕವಾಗಿತ್ತು. ರಜಸ್ಸು ತಮಸ್ಸುಗಳಿಂದ ಹಾಗೂ ವಾಸನೆಗಳಿಂದ ಮುಕ್ತವಾಗಿತ್ತು. ದೇಹ–ಮನಸ್ಸು ಸುಟ್ಟ ಹಗ್ಗದಂತೆ, ಹಗ್ಗದ ಶಕ್ತಿಯಾಗಲಿ ಕ್ರಿಯೆಯಾಗಲಿ ಇಲ್ಲದೆ, ಆಕಾರಮಾತ್ರವಾಗಿ ಉಳಿದಿದ್ದವು. ಅವರು ಚಿತ್ರಗಳನ್ನು ಹಾಯಿಸಬಹುದಾದ ತೆರೆಯಂತೆ ಅಥವಾ ತನ್ನೆದುರಿಗೆ ಒಡ್ಡಿದ ವಸ್ತುಗಳನ್ನು ಪ್ರತಿಬಿಂಬಿಸುವ ಆದರೆ ಅವುಗಳಿಂದ ಪರಿಣಾಮ ಹೊಂದದ ಕನ್ನಡಿಯಂತೆ ಆದರು ಎನ್ನಬಹುದು. ಪರಿಸರದಿಂದ ಬಂದ ಹೊಸ ಸ್ವರಗಳು

ಆಧಾರಶ್ರುತಿಯೊಂದಿಗೆ, ಅವರ ಬಾಹ್ಯಕ್ರಿಯೆಗಳ ತಳದಲ್ಲಿ ಮತ್ತು ಆಚೆ ಅನುಸ್ಯೂತವಾಗಿದ್ದ ಸಹಜ ಜ್ಞಾನದೊಂದಿಗೆ, ಸಮ್ಮಿಳಿತವಾಗಿದ್ದವು.

''ಏಕಾಂತದ ಮತ್ತು ಮೌನದ ವರ್ಷಗಳನ್ನು ಸಾಕ್ಷಾತ್ಕಾರದ ಸಮಾಧಿಯ ಸ್ಥಿತಿಯನ್ನು ಎಲ್ಲ ಅವಸ್ಥೆಗಳಲ್ಲೂ ಇರುವಂತೆ ರೂಢಿಗೊಳಿಸಲು ಮತ್ತು ಸ್ಥಿರಗೊಳಿಸಲು ಬೇಕಾಗಿದ್ದ ವರ್ಷಗಳು'' ಎನ್ನುವ ಕೆಲವರ ವಾದವನ್ನು ಒಪ್ಪುವ ಸಾಧಕರು ಇಂದು ವಿರಳ. ಈ ಸಾಕ್ಷಾತ್ಕಾರವು ಅಂತಿಮವಾದುದಾಗಿತ್ತು. 1896ರ ಜುಲೈನಲ್ಲಾದ ಮೃತ್ಯುವಿನ ದರ್ಶನ ಮತ್ತು ಪೂರ್ಣ ಆತ್ಮಾನುಭವ ಸಮಗ್ರವೂ ಶಾಶ್ವತವೂ ಆಗಿದ್ದವು. ಬಾಹ್ಯಜಗತ್ತಿನೊಡನೆ ಸಂಬಂಧಗಳನ್ನು ಸರಿಹೊಂದಿಸಿಕೊಳ್ಳಲು ಕೆಲವು ಸಂಬಂಧಗಳನ್ನು ಅವರು ಮತ್ತೆ ಸ್ಥಾಪಿಸಿಕೊಂಡದ್ದು. ಸಮಾಧಿಯಿಂದ ಎಚ್ಚೆತ್ತ ಕೂಡಲೇ ಅವರು ಮಧುರೆಯ ದೇವಸ್ಥಾನಕ್ಕೆ ಪದೇಪದೇ ಹೋಗಲು ಪ್ರಾರಂಭಿಸಿ, ನಟರಾಜನ ಮತ್ತು ಇತರ ದೇವತೆಗಳ ವಿಗ್ರಹಗಳ ಮುಂದೆ ನಿಂತುಕೊಳ್ಳುತ್ತಿದ್ದರು. ಆಮೇಲೆ ಅವರೇ ವಿವರಿಸಿದಂತೆ, ''ಆತ್ಮವು ಶರೀರದ ಮೇಲಿನ ಅವಲಂಬನೆಯನ್ನು ಬಿಟ್ಟು ಯಾವುದೋ ಹೊಸ ನೆಲೆಯನ್ನು ಅರಸುತ್ತಿತ್ತು.'' ತಿರುವಣ್ಣಾಮಲೆಯಲ್ಲಿನ ಮೊದಲ ದಿನಗಳಲ್ಲಿ ಅವರು ತಾವು ಅನುಭವಿಸಿದ್ದ ಮತ್ತು ಚೆನ್ನಾಗಿ ತಿಳಿದಿದ್ದ ಸತ್ಯದ ಅಭಿವ್ಯಕ್ತಿಯನ್ನು ವೇದದ ವಾಕ್ಯಗಳಲ್ಲಿ ಕಂಡರು. ಆದರೂ 1912ರಲ್ಲಿ ಆಮೆಬಂಡೆಯಲ್ಲಿ ಇತರರ ಸಮಕ್ಷಮದಲ್ಲಿ ಮರಣದ ಎರಡನೆ ಅನುಭವವನ್ನು ಪಡೆದ ಅನಂತರವೇ, ಮಹರ್ಷಿಗಳು ಪಾರಮಾರ್ಥಿಕ ಜಗತ್ತು ಮತ್ತು ವ್ಯಾವಹಾರಿಕ ಜಗತ್ತು ಎರಡರಲ್ಲೂ ಸಮಾನವಾಗಿ ಮತ್ತು ಸಂಪೂರ್ಣವಾಗಿ ಆರಾಮವಾಗಿದ್ದಂತೆ ಕಂಡದ್ದು, ವ್ಯಾವಹಾರಿಕ ಜಗತ್ತನ್ನು ಆತ್ಮದ ಮೇಲೆ ಹಾಯಿಸಿದ ಒಂದು ಕನಸಿನಂತೆ ಕಂಡದ್ದು, ಮತ್ತು ಸುತ್ತಲಿರುವವರ ಮೇಲೆ ಕೃಪಾನುಗ್ರಹವನ್ನು ಸುರಿಯುತ್ತಿದ್ದರೂ ಅವರಲ್ಲಿ ಒಬ್ಬರಂತೆ ಜನಗಳ ಜೊತೆ ಬೆರೆತು ಮಾತನಾಡುವಂತಾದದ್ದು.

ಡಾ. ಟಿ.ಪಿ. ರಾಮಚಂದ್ರನ್‌ರ ಪ್ರಕಾರ, ನಾನಾತ್ವದಿಂದ ಕೂಡಿದ ಪ್ರಪಂಚವನ್ನು ಕುರಿತು ಜೀವನ್ಮುಕ್ತನ 'ರಸಾನುಭೂತ್ಯಾತ್ಮಕ' ಧ್ಯಾನ ಮತ್ತು ಆ ಪ್ರಪಂಚದಲ್ಲಿ ಅವನು ನಿಷ್ಕಾಮದಿಂದ ತೊಡಗುವುದು ಒಂದು ಉಪಯುಕ್ತ ಗುರಿಯನ್ನು ಸಾಧಿಸುತ್ತವೆ. ಮಾಯೆಯ ಈಚೆ ದಡದಲ್ಲಿ ಇನ್ನೂ ಇರುವ ನಮಗೆ ಅದು ವ್ಯಾವಹಾರಿಕ ಮತ್ತು ಪಾರಮಾರ್ಥಿಕಗಳು ನಡುವಣ ಸಂಧಿ ಸ್ಥಾನವನ್ನು ಒದಗಿಸುತ್ತದೆ. ಸದ್ಯದ 'ರಸಾತ್ಮಕ' ಅನುಭವದ ರೂಪದಲ್ಲಿ ಅದು ನಮಗೆ ಅನುಭವದಲ್ಲಿ ಎಲ್ಲ ಆತ್ಮಗಳ ಏಕತೆಯಲ್ಲಿ ಪಾಲುಗೊಳ್ಳಲು ಸಹಾಯ ಮಾಡುತ್ತದೆ ಮತ್ತು ಅದರ ಸಾಧ್ಯತೆಯ ಬಗ್ಗೆ ನಂಬಿಕೆಯನ್ನೂ ಉಂಟುಮಾಡುತ್ತದೆ. ಮಹರ್ಷಿಗಳ ಸಮ್ಮುಖದಲ್ಲಿ ಪ್ರತಿಯೊಬ್ಬರಿಗೂ ಚಿತ್ರದಲ್ಲಿ ಪಾತ್ರವಹಿಸುತ್ತಿರುವವರಷ್ಟೇ ಅದರ ಪ್ರೇಕ್ಷಕರೂ ಚಿತ್ರದಲ್ಲಿ ಭಿನ್ನರಾಗಿರದೆ ಅದರಲ್ಲಿ ಭಾಗಿಗಳೇ ಆಗಿದ್ದಾರೆ, ಕನಸು ಕನಸಿಗನಲ್ಲಿದೆಯೇ ವಿನಾ ಕನಸಿಗ ಕನಸಿನಲ್ಲಿಲ್ಲ ಎಂಬ ಅರಿವನ್ನು ಮಹರ್ಷಿಗಳ ಜೊತೆ ತಾವೂ ಪಡೆದಿರುತ್ತಾರೆ ಎಂಬ ಭಾವದ ಅನುಭವವಾಗುತ್ತದೆ.

ಈ ಅಭಿಪ್ರಾಯಕ್ಕೆ ಆಧಾರವು ಮುಕ್ತಿಯನ್ನು ಪಡೆದ ತರುವಾಯ ಭೌತಿಕ ದೇಹ ಮುಂದುವರೆಯುವುದನ್ನು ಕುರಿತ ಮಹರ್ಷಿಗಳ ವರ್ಣನೆಯ ಮಾತುಗಳಲ್ಲಿ ಕಂಡುಬರುತ್ತದೆ. ''ಆತ್ಮದ ಸಾಕ್ಷಾತ್ಕಾರ ಆದ ಕೂಡಲೇ ವ್ಯಕ್ತಿಯು ದೇಹವನ್ನು ಬಿಡಬೇಕಾದಲ್ಲಿ, ಆತ್ಮದ

ಅಥವಾ ಸಾಕ್ಷಾತ್ಕಾರದ ಸ್ಥಿತಿಯ ಜ್ಞಾನ ಇತರರಿಗೆ ಹೇಗೆ ಒದಗುತ್ತದೆ ಎಂಬುದು ನನಗೆ ತಿಳಿಯದು. ಜೊತೆಗೆ ಇದರ ಅರ್ಥ ತಮ್ಮ ಆತ್ಮಸಾಕ್ಷಾತ್ಕಾರದ ಫಲಗಳನ್ನು ಸಮಗೆ ಗ್ರಂಥಗಳ ಮೂಲಕ ತಿಳಿಸಿರುವವರನ್ನು ಜ್ಞಾನಿಗಳೆಂದು ಪರಿಗಣಿಸಲಾಗುವುದಿಲ್ಲ ಎಂದಾಗುತ್ತದೆ, ಏಕೆಂದರೆ ಸಾಕ್ಷಾತ್ಕಾರವಾದ ಮೇಲೂ ಅವರು ಜೀವಿಸುತ್ತಿದ್ದರು. ಪ್ರಪಂಚದಲ್ಲಿ ಕ್ರಿಯೆಗಳನ್ನು ಮಾಡುತ್ತಿರುವವರೆಗೆ (ಮನಸ್ಸು ಇರದಿದ್ದರೆ ಕ್ರಿಯೆ ಅಸಾಧ್ಯ) ವ್ಯಕ್ತಿಯೊಬ್ಬನನ್ನು ಜ್ಞಾನಿಯೆಂದು ಭಾವಿಸಲಾಗುವುದಿಲ್ಲ ಎಂದರೆ, ಆಗ ಜ್ಞಾನವನ್ನು ಪಡೆದ ತರುವಾಯ ವಿವಿಧ ಬಗೆಯ ಕೆಲಸವನ್ನು ನಿರ್ವಹಿಸಿದ ಮಹರ್ಷಿಗಳನ್ನು ಮಾತ್ರವೇ ಅಲ್ಲದೆ ದೇವತೆಗಳನ್ನೂ ಮತ್ತು ಸ್ವತಃ ಈಶ್ವರನನ್ನೂ ಅಜ್ಞಾನಿಗಳು ಎನ್ನಬೇಕಾಗುತ್ತದೆ, ಏಕೆಂದರೆ ಈಶ್ವರನು ಪ್ರಪಂಚವನ್ನು ನೋಡಿಕೊಳ್ಳುತ್ತಿರುತ್ತಾನೆ. ವಸ್ತುಸ್ಥಿತಿ ಏನೆಂದರೆ, ಕ್ರಿಯೆಯೊಡನೆ ಯಾವುದೇ ರೀತಿಯಲ್ಲಿ ತನ್ನನ್ನು ಏಕೀಕರಿಸಿಕೊಳ್ಳದೆ ಅಥವಾ ತಾನು ಕರ್ತೃವೆಂದು ಎಂದಿಗೂ ಭಾವಿಸಿಕೊಳ್ಳದೆ ಜ್ಞಾನಿಯು ಎಷ್ಟೇ ಪ್ರಮಾಣದ ಕೆಲಸವನ್ನು ಮಾಡಬಹುದು ಮತ್ತು ತುಂಬ ಚೆನ್ನಾಗಿಯೂ ಮಾಡಬಹುದು. ಯಾವುದೋ ಶಕ್ತಿ ಅವನ ದೇಹದ ಮೂಲಕ ಕಾರ್ಯ ಮಾಡುತ್ತದೆ ಮತ್ತು ಕೆಲಸವನ್ನು ಪೂರೈಸಲು ಅವನ ದೇಹವನ್ನು ಬಳಸಿಕೊಳ್ಳುತ್ತದೆ.''

ಚೈತನ್ಯವಾಗಿ ಮತ್ತು ಎಲ್ಲ ವ್ಯಕ್ತಿಗಳಲ್ಲಿರುವ ಪುರುಷನಾಗಿ ಜೀವನ್ಮುಕ್ತನು ನಮ್ಮ ನಡುವೆ ಬದುಕಿ ಬಾಳುತ್ತಾನೆ. ಎಲ್ಲರಲ್ಲೂ ಮತ್ತು ಎಲ್ಲ ಜೀವರಾಗಿ ಬದುಕುತ್ತಾನೆ. ಆದರೆ ನಮ್ಮ ಅಜ್ಞಾನದಲ್ಲಿ ನಾವು ಅವನನ್ನು ಇತರ ವ್ಯಕ್ತಿಗಳ ನಡುವೆ ಒಬ್ಬ 'ವ್ಯಕ್ತಿ' ಯನ್ನಾಗಿ ಮತ್ತು ಯಾವುದೋ ನಿರ್ದಿಷ್ಟ ದೇಹವೊಂದರಲ್ಲಿ ವಾಸಿಸುವವನನ್ನಾಗಿ ಭಾವಿಸುತ್ತೇವೆ.

# ಅಧ್ಯಾಯ 4

# ವಿರೂಪಾಕ್ಷ ಗುಹೆ: ಜ್ಞಾನಿಯ ಸಹಜತೆ

ತಾಯಿ ಪ್ರಕೃತಿಯಿಂದ ತಂದೆ ಪುರುಷನ ಬಳಿಗೆ, ಸೋಪಾಧಿಕ ಜ್ಞಾನದಿಂದ ಶುದ್ಧಜ್ಞಾನಕ್ಕೆ ಹೋದದ್ದು ಕೇವಲ ತಾತ್ಕಾಲಿಕದ್ದಾಗಿತ್ತು. ವಿರೂಪಾಕ್ಷ ಗುಹೆಯಲ್ಲಿ ಯುವ ಸನ್ಯಾಸಿ ವಾಸಿಸಿದ್ದ ಮೊದಲ ವರ್ಷಗಳಲ್ಲಿ ಸತ್ ಮತ್ತು ವಿಕ್ರಿಯೆಗಳ, ಜಡ ಹಾಗೂ ಚೈತನ್ಯಗಳ ಸ್ವಾಭಾವಿಕ ಸಂಯೋಗ ನಿಧಾನವಾಗಿ ಪುನಃ ಸ್ಥಾಪಿತವಾಯಿತು. ಆತ್ಮ ಜ್ಞಾನಿಯೆಂದು ಹರಡುತ್ತಿದ್ದ ಅವರ ಕೀರ್ತಿಯು ಭಕ್ತರನ್ನು ಮತ್ತು ದರ್ಶನಾಕಾಂಕ್ಷಿಗಳನ್ನು ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ಅವರ ಬಳಿಗೆ ತಂದಿತು. ಅವರಲ್ಲಿ ಅನಕ್ಷರಸ್ಥ ಜನ ಮತ್ತು ವಿವಿಧ ಆಧುನಿಕ ವೃತ್ತಿಗಳಲ್ಲಿ ತೊಡಗಿದ್ದರೂ ಆಧ್ಯಾತ್ಮಿಕ ಒಲವಿದ್ದವರು ಇದ್ದರು. ಸಂದರ್ಶಕರಿಗೆ ಅವರು ಹತ್ತಿರ ಬರಗೊಡಿಸದಿರುವವರೋ ದೂರವಾಗಿರುವವರೋ ಆಗಿ ಕಾಣಿಸಲಿಲ್ಲ. ಯಾವ ಮಾತು ಆಡದಿದ್ದರೂ ಕೇವಲ ಅವರ ಕೃಪಾಪೂರ್ಣ ಸಾನ್ನಿಧ್ಯದಿಂದಲೇ ದುಃಖತಪ್ತ ಜನ ಸಮಾಧಾನ ಪಡೆದರು. ಜ್ಞಾನಿಯಾಗಿ ಅವರು ವಿದ್ವಾಂಸ ಸಾಧಕರನ್ನು ಆಕರ್ಷಿಸಿದರು. ಸನ್ಯಾಸಿಯಿಂದ ಪ್ರಸರಿಸುತ್ತಿದ್ದ ಶಾಂತಿಯನ್ನು ಹೀರಿಕೊಳ್ಳುತ್ತಿದ್ದಂತೆ ಅವರಲ್ಲಿ ಅನೇಕರು ತಮ್ಮ ಬೌದ್ಧಿಕ ಸಮಸ್ಯೆಗಳು ಮತ್ತು ಸಂದೇಹಗಳು ಅದೃಶ್ಯವಾಗುತ್ತಿದ್ದುದನ್ನು ಕಂಡುಕೊಂಡರು. ಅವರ ಪ್ರೀತಿಪೂರ್ಣವಾದ ಆದರ ಚಿಕ್ಕಮಕ್ಕಳನ್ನೂ ಆಕರ್ಷಿಸಿತು. ಅವರ ಎದುರಿನಲ್ಲಿ ಮಕ್ಕಳು ಮನೆಯಲ್ಲಿದ್ದಷ್ಟೇ ನಿರಾತಂಕವಾಗಿರುತ್ತಿದ್ದವು. ಬೆಟ್ಟದ ಮೇಲೆ ಓಡಾಡುತ್ತಿರುವಾಗ ಭೇಟಿಯಾದ ಕುರಿ ಕಾಯುವವರ ಮತ್ತು ಹುಲ್ಲು ಕುಯ್ಯುವವರ ಸಂಗಡವೂ ಅವರು ಅಂತೆಯೇ ವರ್ತಿಸುತ್ತಿದ್ದರು. ಬ್ರಾಹ್ಮಣಸ್ವಾಮಿಯಲ್ಲಿ ಆ ಜನ ಜಾತಿವರ್ಗಗಳಿರದ ಒಬ್ಬ ಪ್ರೀತಿಯ ಗೆಳೆಯನನ್ನು ಕಂಡರು.

ಅವರ ಸಾನ್ನಿಧ್ಯ ನೀಡುವ ಶಾಂತಿಗಾಗಿ ತಿರುವಣ್ಣಾಮಲೆಗೆ ಮಹರ್ಷಿಯನ್ನು ಅರಸಿ ಬಂದವರಲ್ಲಿ ಒಬ್ಬರು ಎಚ್ಚಮ್ಮಾಳ್. 1906ರ ಪ್ರಾರಂಭದಲ್ಲಿ ಆಕೆ ಬಂದಳು. ಚಿಕ್ಕವಳಿದ್ದಾಗಲೇ ಕ್ರಮವಾಗಿ ಗಂಡ, ಮಗ ಮತ್ತು ಮಗಳನ್ನು ಕಳೆದುಕೊಂಡ ಆಕೆಯ ಹೃದಯ ದುಃಖದಿಂದ ಭಾರವಾಗಿತ್ತು. ಮಾತಿಲ್ಲದೆ ಅವರ ಮುಂದೆ ನಿಂತಿರುವಂತೆಯೇ, ಅವರ ಕಣ್ಣುಗಳಲ್ಲಿ ಹೊಳೆಯುತ್ತಿದ್ದ ದಯಾನುಗ್ರಹದಿಂದ ಆಕೆಗೆ ಸಮಾಧಾನ ಕಂಡಿತು. ಆಕೆ ಜೀವಾವಧಿ ಭಕ್ತಳಾದಳು. ಊರಿನಿಂದ ನಾಲ್ಕು ಮೈಲಿ ದೂರದಲ್ಲಿ ವಾಸಿಸುತ್ತಿದ್ದರೂ ಆಕೆ ಪ್ರತಿದಿನ ಮಧ್ಯಾಹ್ನ ಸ್ವಾಮಿಗೆ ಊಟ ತರುತ್ತಿದ್ದಳು ಅಥವಾ ಕಳುಹಿಸುತ್ತಿದ್ದಳು. ಸ್ವಲ್ಪ ಕಾಲದ ಮೇಲೆ, ಅವರ ಅನುಮತಿ ಪಡೆದು, ಚೆಲ್ಲಮ್ಮಾಳ್ ಎಂಬ ಹುಡುಗಿಯನ್ನು ದತ್ತು ತೆಗೆದುಕೊಂಡಳು. ಕಾಲಾಂತರದಲ್ಲಿ ಅವಳಿಗೆ ಮದುವೆ ಮಾಡಿ ಮೊಮ್ಮಗನ ಜನನವನ್ನು ಕಂಡಳು. ಅವನಿಗೆ ರಮಣ ಎಂದು ಮಹರ್ಷಿಗಳ ಹೆಸರಿಟ್ಟು ಸಂತೋಷಿಸಿದಳು.

ಆಕೆ ತಿರುವಣ್ಣಾಮಲೆಯಲ್ಲಿ ತನ್ನ ಮನೆಯಲ್ಲಿದ್ದಾಗ ಒಂದು ದಿನ ಅವಳ ಅಳಿಯನಿಂದ ಟೆಲಿಗ್ರಾಂ ಬಂದಿತು. ಚೆಲ್ಲಮ್ಮಾಳ್ ಸತ್ತು ಹೋದಳೆಂದು ಅದರಲ್ಲಿ ತಿಳಿಸಲಾಗಿತ್ತು. ಆಕೆ ಸ್ವಾಮಿಯ ಹತ್ತಿರಕ್ಕೆ ಓಡಿ ಹೋಗಿ ಆ ಟೆಲಿಗ್ರಾಂನ್ನು ಅವರಿಗೆ ಕೊಟ್ಟಳು. ಅದನ್ನು ಓದುತ್ತಿದ್ದಂತೆ ಅವರು ಕಣ್ಣೀರಿಟ್ಟರು. ಅಂತ್ಯ ಸಂಸ್ಕಾರದಲ್ಲಿ ಭಾಗವಹಿಸಲು ಹಳ್ಳಿಗೆ ಹೋಗಿದ್ದ ಎಚ್ಚಮ್ಮಾಳ್ ವಾಪಸಾಗಿ, ತನ್ನ ಚಿಕ್ಕ ಮೊಮ್ಮಗನನ್ನು ಆಶೀರ್ವಾದಕ್ಕಾಗಿ ಅವರ ಕೈಗಳಲ್ಲಿಡಲು ಅವರು ಮತ್ತೆ ಅತ್ತರು. ''ಜ್ಞಾನಿಯು ಅಳುವವರೊಡನೆ ಅಳುತ್ತಾನೆ, ನಗುವವರೊಡನೆ ನಗುತ್ತಾನೆ, ಆಟವಾಡುವವರೊಡನೆ ಆಟವಾಡುತ್ತಾನೆ, ಹಾಡುವವರೊಡನೆ ತಾಳಕ್ಕೆ ಸರಿಯಾಗಿ ಹಾಡುತ್ತಾನೆ. ಅವನು ಒಂದು ಶುದ್ಧವಾದ ಕನ್ನಡಿಯಂತೆ ಇರುತ್ತಾನೆ. ಅದು ನಾವಿರುವಂತೆ ತದ್ವತ್ತಾಗಿ ನಮ್ಮ ಬಿಂಬವನ್ನು ಪ್ರತಿಬಿಂಬಿಸುತ್ತದೆ. ಬದುಕಿನಲ್ಲಿ ವಿವಿಧ ಪಾತ್ರಗಳನ್ನು ಆಡುವವರು ನಾವೇ. ಅದು ಕನ್ನಡಿಯನ್ನಾಗಲಿ ಕನ್ನಡಿಯನ್ನು ಹೊತ್ತಿರುವ ನಿಲುವನ್ನಾಗಿ ಹೇಗೆ ತಟ್ಟುತ್ತದೆ? ಅವು ಕೇವಲ ಆಧಾರವಾಗಿರುವುದರಿಂದ, ಅವನ್ನು ಯಾವುದೂ ತಟ್ಟುವುದಿಲ್ಲ'' ಎಂದು ಅವರೊಮ್ಮೆ ನುಡಿದರು. ಎಚ್ಚಮ್ಮಾಳ್ ದುಃಖಕ್ಕೆ ಮಹರ್ಷಿಯ ದರ್ಶನವು ನೋವನ್ನು ರೂಪಾಂತರಗೊಳಿಸಿ, ಅದನ್ನು ಅವ್ಯೆಯಕ್ತಿಕವಾಗಿಸುತ್ತದೆ. ಎಚ್ಚಮ್ಮಾಳ್ ವಿಷಯದಲ್ಲಿ ಆದಂತೆ, ಎಷ್ಟೋ ಜನಗಳ ವಿಷಯದಲ್ಲಿ, ದುಃಖವು ಜೀವಾವಧಿ ಭಕ್ತಿಯಾಗಿ ಮಾರ್ಪಟ್ಟಿತು.

ಮಹರ್ಷಿ ಅಹಂಕಾರವನ್ನು ತ್ಯಜಿಸಿ ನಿಜವಾಗಿ ಸನ್ಯಾಸಿಯಾಗಿದ್ದರೂ, ಸನ್ಯಾಸದ ಯಾವುದೇ ವರ್ಗಕ್ಕೆ ವಿಧಿವತ್ತಾಗಿ ದೀಕ್ಷೆ ಪಡೆಯಲು ನಿರಾಕರಿಸಿದರು. ಅವರು ವಿರೂಪಾಕ್ಷ ಗುಹೆಯಲ್ಲಿ ವಾಸಮಾಡುತ್ತಿದ್ದ ಪ್ರಾರಂಭದ ದಿನಗಳಲ್ಲಿ, ಪ್ರಸಿದ್ಧವಾದ ಮಠದ ಶಾಸ್ತ್ರಿಗಳೊಬ್ಬರು ಅವರ ಬಳಿ ಬಂದು ದೀಕ್ಷೆಯನ್ನು ಸ್ವೀಕರಿಸುವಂತೆ ಪ್ರಾರ್ಥಿಸಿದರು. 1949ರಲ್ಲಿ ಈ ಸಂಗತಿಯನ್ನು ಜ್ಞಾಪಿಸಿಕೊಳ್ಳುತ್ತಾ, ಮಹರ್ಷಿ ಹೀಗೆ ಹೇಳಿದರು:

''ಮಠದಿಂದ ಶಾಸ್ತ್ರಿಗಳು ಒಂದು ಬೆಳಿಗ್ಗೆ ಬಂದು, ಬ್ರಾಹ್ಮಣನಾಗಿ ಹುಟ್ಟಿದ್ದರಿಂದ ನಾನು ವಿಧಿವತ್ತಾಗಿ ಸಂನ್ಯಾಸ ತೆಗೆದುಕೊಳ್ಳಬೇಕೆಂದು ದೀರ್ಘಕಾಲ ವಾದಿಸಿದರು. ಅದು ಪ್ರಾಚೀನ ಸಂಪ್ರದಾಯ, ಅವರ ವಿಷಯವೆಲ್ಲ ನಿಮಗೆ ಗೊತ್ತು. ನಮ್ಮ ಆಚಾರ್ಯರ ಪರಂಪರೆಯಲ್ಲಿ ನಿಮ್ಮನ್ನು ಸೇರಿಸಲು ನನಗೆ ಬಹಳ ಆಸಕ್ತಿಯಿದೆ. ನೀವು ಸುಮ್ಮನೆ ಹೂಂ ಎಂದರೆ, ಮಠದಿಂದ ಅಗತ್ಯವಾದ ಸಾಮಗ್ರಿಗಳೆಲ್ಲವನ್ನೂ ಇಲ್ಲಿಗೆ ತಂದು ನಾನು ನಿಮಗೆ ದೀಕ್ಷೆ ಕೊಡುತ್ತೇನೆ. ನಿಮಗೆ ಅಖಂಡ ಕಾಷಾಯ ವಸ್ತ್ರಗಳನ್ನು ಧರಿಸುವ ಅಪೇಕ್ಷೆ ಇಲ್ಲದಿದ್ದರೆ, ನಿಮ್ಮ ಕೌಪೀನವಾದರೂ ಕಾಷಾಯದ್ದಾದರೆ ಸಾಕು. ದಯವಿಟ್ಟು ಇದನ್ನು ಆಲೋಚಿಸಿ ನಿಮ್ಮ ಒಪ್ಪಿಗೆ ಕೊಡಿ. ಊಟಕ್ಕೆ ನಾನು ಬೆಟ್ಟದ ಕೆಳಕ್ಕೆ ಹೋಗಿ ಮಧ್ಯಾಹ್ನ ಮೂರುಗಂಟೆಗೆ ಹಿಂದಿರುಗಿ ಬರುತ್ತೇನೆ. ನಮ್ಮ ಮಠದ ಜನ ನಿಮ್ಮ ಮಹಿಮೆಯನ್ನು ಕೇಳಿ, ಈ ಪ್ರಾರ್ಥನೆಯೊಡನೆ ನನ್ನನ್ನು ಇಲ್ಲಿಗೆ ಕಳುಹಿಸಿದ್ದಾರೆ. ನೀವು ಒಪ್ಪಿದರೆ ನಮಗೆಲ್ಲಾ ಸಂತೋಷವಾಗುತ್ತದೆ'' ಎಂದು ಅವರು ಹೇಳಿದರು.

ಶಾಸ್ತ್ರಿಗಳು ಹೊರಟುಹೋದ ಸ್ವಲ್ಪ ಹೊತ್ತಿಗೆ ಒಬ್ಬ ಮುದುಕರು ಪುಸ್ತಕಗಳ ಒಂದು ಹೊರೆ ಹೊತ್ತುಕೊಂಡು ಬಂದರು. ಅದನ್ನು ನನ್ನ ಮುಂದಿಟ್ಟು, ''ಸ್ವಾಮಿ, ನಾನು ಈಗ ತಾನೆ ಬಂದೆ. ನಾನು ಕೆಳಕ್ಕೆ ಹೋಗಿ, ಸ್ನಾನ ಊಟ ಮುಗಿಸಿ ವಾಪಸು ಬರುವವರೆಗೆ

ದಯವಿಟ್ಟು ಈ ಹೊರೆಯನ್ನು ನೋಡಿಕೊಳ್ಳಿ'' ಎಂದರು. ಅವರು ಹೊರಟುಹೋದ ಮೇಲೆ ಆ ಹೊರೆಯನ್ನು ಬಿಚ್ಚಿ ಆ ಪುಸ್ತಕಗಳನ್ನು ಸ್ವಲ್ಪ ನೋಡಬೇಕೆನಿಸಿತು. ಮೊದಲು ನನಗೆ ಸಿಕ್ಕಿದ್ದು ಸಂಸ್ಕೃತದಲ್ಲಿದ್ದ ಅರುಣಾಚಲ ಮಹಾತ್ಮ್ಯ. ಆ ಗ್ರಂಥ ಸಂಸ್ಕೃತವಲ್ಲೂ ಇದೆಯೆಂಬುದು ನನಗೆ ಅದುವರೆಗೆ ತಿಳಿದಿರಲಿಲ್ಲ. ಅದನ್ನು ತೆರೆಯುತ್ತಿದ್ದಂತೆ ನನಗೆ ಈ ಶ್ಲೋಕ ಕಂಡಿತು: 'ಈ ಅರುಣಾಚಲ ಪರ್ವತದ ಮೂವತ್ತು ಯೋಜನಗಳೊಳಗೆ ವಾಸಿಸುವವರಿಗೆ, ಅವರು ಯಾವ ದೀಕ್ಷೆಯನ್ನು ತೆಗೆದುಕೊಳ್ಳದಿದ್ದರೂ, ನಾನು ಸಂಸಾರದಿಂದ ವಿಮೋಚನೆಯನ್ನೂ, ನನ್ನಲ್ಲೇ ಐಕ್ಯವನ್ನೂ ನೀಡುತ್ತೇನೆ.'

''ಶಾಸ್ತ್ರಿಗಳು ಮಧ್ಯಾಹ್ನ ಬಂದಾಗ, ಅವರ ಸೂಚನೆಗೆ ಉತ್ತರವಾಗಿ, ಅವರಿಗೆ ಈ ಶ್ಲೋಕವನ್ನು ತೋರಿಸಿದೆ. ಅವರು ವಿದ್ವಾಂಸರಾಗಿದ್ದರಿಂದ, ಹೆಚ್ಚೇನೂ ಹೇಳದೆ ನಮಸ್ಕಾರ ಮಾಡಿ ಸುಮ್ಮನೆ ಹೊರಟುಹೋದರು.''

ಪರ್ವತದ ಪ್ರಭಾವವು ಕಥೆ ಕಟ್ಟುವ ಕವಿತಾಮನೋಭಾವದ ಶಕ್ತಿಯೇ ವಿನಾ ಬೇರೇನೂ ಅಲ್ಲದಿರುವುದೇನೋ ನಿಜ. ಆ ಪ್ರಭಾವವನ್ನು ಈ ರೀತಿ ಪುಷ್ಟೀಕರಿಸಿ ಸಮರ್ಥಿಸುವ ಮೂಲಕ ಮಹರ್ಷಿಗಳು ಯಾವುದೋ ಒಂದು ಸಮಾಜದಲ್ಲಿ ಕೆಲವು ಪರಿಸ್ಥಿತಿಗಳಲ್ಲಿ ಕೆಲವು ವ್ಯಕ್ತಿಗಳಿಗೆ ಲಭ್ಯವಾಗಿರುವ ಕರ್ಮಾಚರಣೆ ತುಂಬಿದ ಸಂಪ್ರದಾಯವನ್ನು ತಿರಸ್ಕರಿಸಿದರು. ಆದರಿಂದ ತಮ್ಮ ಸ್ವಾತಂತ್ರ್ಯವನ್ನು ಕಾಪಾಡಿಕೊಂಡರು ಮತ್ತು ಅಂಥದೇ ನಂಬಿಕೆಯಿದ್ದ ಇತರರಿಗೂ ಅದನ್ನು ವಿಸ್ತರಿಸಿದರು. ಹೇಗೇ ಆಗಲಿ, ಕಾನೂನಿನ ರೀತ್ಯಾ, ತಾವು ಸಂನ್ಯಾಸಿಯಲ್ಲ, ಅತ್ಯಾಶ್ರಮಿ ಎಂದು ಆಮೇಲೆ ಹೇಳುವಂತಾದರು.

ಯುವ ಸಂನ್ಯಾಸಿಯ ಬಳಿಗೆ ಬಂದ ವಿದ್ವಾಂಸ ಅನ್ವೇಷಕರಲ್ಲಿ ಪ್ರಮುಖರಾದವರು ಸಂಸ್ಕೃತದ ದೊಡ್ಡ ಕವಿಗಳೂ ಪಂಡಿತರೂ ಆಗಿದ್ದ ಕಾವ್ಯಕಂಠ ಗಣಪತಿಶಾಸ್ತ್ರಿಗಳು. ಅವರು ಬ್ರಾಹ್ಮಣಸ್ವಾಮಿಯನ್ನು 1903ರ ತರುವಾಯದಿಂದ ಭೇಟಿಮಾಡುತ್ತಿದ್ದರೂ, ಅವರನ್ನು ತಮ್ಮ ಗುರುವೆಂದು ಒಪ್ಪಿಕೊಂಡದ್ದು ನಾಲ್ಕುವರ್ಷಗಳ ಅನಂತರವೇ. ಅವರು ವೇದಶಾಸ್ತ್ರ ಗ್ರಂಥಗಳನೆಲ್ಲ ಸ್ವಾಧೀನ ಮಾಡಿಕೊಂಡಿದ್ದರು ಮತ್ತು ತಪಸ್ಸು ಮಾಡಿದ್ದರು. ಆದರೆ ಅವರಿಗೆ ನೆಮ್ಮದಿ ಇರಲಿಲ್ಲ, ಏಕೆಂದರೆ ತಮಗೆ ವಿಷಯದ ಬಗ್ಗೆ ಸ್ಪಷ್ಟತೆ ಹಾಗೂ ನಿಶ್ಚಯ ಇರಲಿಲ್ಲವೆಂದು ಅವರಿಗೆ ಅನಿಸಿತ್ತು. 1907ರಲ್ಲಿ ಅವರು ಮತ್ತೆ ವಿರೂಪಾಕ್ಷ ಗುಹೆಗೆ ಬಂದಾಗ ತಪಸ್ಸಿನ ಸ್ವರೂಪದ ಬಗ್ಗೆ ತಿಳುವಳಿಕೆ ನೀಡುವಂತೆ ಬ್ರಾಹ್ಮಣಸ್ವಾಮಿಯನ್ನು ಪ್ರಾರ್ಥಿಸಿದರು. ಸ್ವಾಮಿ ಹೀಗೆ ಉತ್ತರಿಸಿದರು. '' 'ನಾನು' ಎಂಬ ಭಾವನೆ ಎಲ್ಲಿಂದ ಉದಯಿಸುತ್ತದೆ ಎಂಬುದನ್ನು ಗಮನಸಿದರೆ, ಮನಸ್ಸು ಅದರಲ್ಲಿ ಲಯವಾಗುತ್ತದೆ; ಅದು ತಪಸ್ಸು. ಮಂತ್ರವೊಂದನ್ನು ಪುನರಾವರ್ತನೆ ಮಾಡಿದಾಗ, ಮಂತ್ರದ ನಾದ ಯಾವ ಮೂಲದಿಂದ ಉತ್ಪನ್ನವಾಗುತ್ತದೆ ಎಂಬುದನ್ನು ಗಮನಿಸಿದರೆ, ಮನಸ್ಸು ಅದರಲ್ಲಿ ಲಯವಾಗುತ್ತದೆ; ಅದು ತಪಸ್ಸು.''

ಬ್ರಾಹ್ಮಣ ಸಂನ್ಯಾಸಿಯನ್ನು ಭಗವಾನ್ ಶ್ರೀರಮಣ ಮಹರ್ಷಿ ಎಂದು ಪುನರ್ನಾಮಕರಣ ಮಾಡಿ, ಅವರನ್ನು ಸುಬ್ರಹ್ಮಣ್ಯನ ಅವತಾರವೆಂದು ಮೊದಲು ಹಾಡಿಹೊಗಳಿದವರು ಕಾವ್ಯಕಂಠರು. ಕಾವ್ಯಕಂಠರು ಮತ್ತು ಅವರ ಪಂಡಿತ ಶಿಷ್ಯರಾದ ಟಿ.ವಿ. ಕಪಾಲಿಶಾಸ್ತ್ರಿ ಮತ್ತು ದೈವರಾತರಂಥವರು ಹಾಕಿದ ಪ್ರಶ್ನೆಗಳು ಮತ್ತು ಅವಕ್ಕೆ

ಮಹರ್ಷಿಯ ಉತ್ತರಗಳೇ ಪ್ರಸಿದ್ಧ ಸಂಸ್ಕೃತ ಗ್ರಂಥವಾದ ರಮಣಗೀತೆ. ''ಪ್ರಪಂಚದ ಸಂತರ ಇತಿಹಾಸದಲ್ಲಿ ಮಹರ್ಷಿ ಅನ್ಯಾದೃಶರಾಗಿದ್ದಾರೆ. ಸಾಕ್ಷಾತ್ಕಾರವಾದ ತರುವಾಯ ಪೂರ್ತಿ ಐವತ್ನಾಲ್ಕು ವರ್ಷಗಳು ಬದುಕಿದ್ದುದು, ಒಂದೇ ಭಾಗದಲ್ಲಿನ ತಮ್ಮ ಸ್ಥಾನದಿಂದ ಅಷ್ಟೊಂದು ಜನಗಳ ಮೇಲೆ ಪ್ರಭಾವ ಬೀರಿದುದು, ಎಲ್ಲರಿಗೂ ಎಲ್ಲ ವೇಳೆಯಲ್ಲೂ ಸುಲಭವಾಗಿ ಸಿಗುತ್ತಿದ್ದುದು, ಸಂದೇಹವಾದದ ಹೊನಲನ್ನು ಅವರಂತೆ ತಡೆಗಟ್ಟಿದುದು, ನಿಜವಾಗಿ ಹಿಂದೆಂದೂ ಆಗಿರದಿದ್ದ ಕೆಲಸ'' ಎಂದು ಕಪಾಲಿಶಾಸ್ತ್ರಿ ಬರೆದರು. ಆದರೆ, ಮಹರ್ಷಿಯ ಬಗ್ಗೆ ತಮ್ಮ ಪ್ರೀತಿ ಮೆಚ್ಚಿಕೆಗಳನ್ನು ಉಳಿಸಿಕೊಂಡರೂ, ''ಅವರ ಉಪದೇಶ ತೀರ ಸ್ಪಷ್ಟ, ಯಾವ ಹಂತವೂ ಇರದಿದ್ದುದು; ಹೇಗೇ ಇರಲಿ ನನ್ನ ಪರಿಸ್ಥಿತಿಯಲ್ಲಿರುವ ಜನರಿಗೆ ಸಾಧ್ಯವಲ್ಲದ್ದು'' ಎಂಬುದನ್ನು ಅವರು ಮನಗಂಡು, ಶ್ರೀ ಅರವಿಂದರ ಅನುಯಾಯಿ ಆದರು.

ಶೈವಸಿದ್ಧಾಂತವನ್ನು ಕುರಿತ ಗೋಷ್ಠಿಯೊಂದರಲ್ಲಿ ಭಾಗವಹಿಸಲು ಒಮ್ಮೆ ಗಣಪತಿ ಶಾಸ್ತ್ರಿಗಳನ್ನು ಆಹ್ವಾನಿಸಲಾಗಿತ್ತು. ಆದರೆ ಈ ಧಾರ್ಮಿಕ ಪಂಥದ ಸಾಹಿತ್ಯವು ಬಹುವಾಗಿ ತಮಿಳಿನಲ್ಲಿರುವುದರಿಂದ, ಅವರಿಗೆ ಅದರ ಪರಿಚಯ ಹೆಚ್ಚಾಗಿರಲಿಲ್ಲ. ಆದ್ದರಿಂದ ಇದು ಅವರಿಗೆ ಮುಜುಗರವೆನಿಸಿತು. ಆಗ ಮಹರ್ಷಿಗಳು ಆ ಸಿದ್ಧಾಂತದ ಸಾರವನ್ನು ಅವರಿಗೆ ವಿವರಿಸಿ, ಸಂಸ್ಕೃತದಲ್ಲಿ ಹನ್ನೆರಡು ಸೂತ್ರಗಳನ್ನು ಅವರಿಗೆ ನೀಡಿದರು. ಗೋಷ್ಠಿಯಲ್ಲಿ ಗಣಪತಿ ಶಾಸ್ತ್ರಿಗಳು ನಿರ್ವಹಿಸಿದ ಪಾತ್ರ ಅಧಿಕಾರಪೂರ್ಣವೂ ಪ್ರಮಾಣಭೂತವೂ ಆಗಿತ್ತೆಂದು ಹೊಗಳಲ್ಪಟ್ಟಿತು.

ರಮಣಮಹರ್ಷಿಯನ್ನು ಕುರಿತು ಕಾವ್ಯಕಂಠರು ಸಂಸ್ಕೃತದಲ್ಲಿ ಅನೇಕ ಸ್ತೋತ್ರಗಳನ್ನು ರಚಿಸಿದರು ಮತ್ತು ಮಹರ್ಷಿಗಳು ಸಂಸ್ಕೃತದ ವಿವಿಧ ಕ್ಲಿಷ್ಟ ವೃತ್ತಗಳಿಗೆ ಕೈಹಾಕಲು ಕಾರಣರೂ ಆದರು. ಗಣಪತಿಶಾಸ್ತ್ರಿಗಳ ಸದ್ದರ್ಶನ ಮಹರ್ಷಿಗಳ ಸತ್ಯದ ಮೇಲಿನ ನಲವತ್ತು ಪದ್ಯಗಳ ಅನುವಾದ. ಅದು ಆಧುನಿಕ ತತ್ವಶಾಸ್ತ್ರದ ಉದ್ಗ್ರಂಥವೊಂದೆಂದು ನ್ಯಾಯವಾಗಿಯೇ ಪ್ರಸಿದ್ಧವಾಗಿದೆ.

ರಮಣಗೀತೆಯು ತುಂಬುನಾದದಿಂದ ಮಿನುಗುವ ಸಂಸ್ಕೃತ ಶೈಲಿಯು ಅರ್ಹ ವಿದ್ವಾಂಸರ ಮೆಚ್ಚಿಕೆ ಗಳಿಸಿದ್ದರೂ, ಅದರ ವಿಷಯಗಳು ಅನುವಾದದಲ್ಲಿ ಕೂಡ ವೇದಾಂತದ ಸಂಪ್ರದಾಯದ ಪರಿಚಯವಿಲ್ಲದ ಸಾಮಾನ್ಯ ಓದುಗನಿಗೂ ಬಹಳ ಹಿಡಿಸುತ್ತವೆ. ''ಎಲ್ಲ ಕ್ರಿಯೆಗಳಿಗೆ ಮತ್ತು ಅವುಗಳ ಫಲಗಳಿಗೆ ಆಧಾರವಾದ ನಮ್ಮ ನಿಜವಾದ ಮಾನವ ಸ್ವರೂಪದ ಆವಿಷ್ಕಾರವೇ ಮಾನವನ ಪರಮ ಕರ್ತವ್ಯ'' ವೆಂದು ಮೂರನೆಯ ಅಧ್ಯಾಯದಲ್ಲಿ ತಿಳಿಸಿದೆ. ನಮ್ಮ ನಿಜವಾದ ಸ್ವರೂಪವನ್ನು ಅರಿಯಲು, ಇಂದ್ರಿಯ ವಿಷಯಗಳಿಂದ ಆಲೋಚನೆಗಳನ್ನು ಹಿಂಸೆಳೆದು, ನಿರ್ವಿಷಯಕವಾದ ಜಿಜ್ಞಾಸೆಯಲ್ಲಿ ಸ್ಥಿರವಾಗಿ ನೆಲೆಸುವ ಶ್ರಮಸಾಧ್ಯವಾದ ಪ್ರಯತ್ನ ಬೇಕಾಗುತ್ತದೆ.

ಐದನೆಯ ಅಧ್ಯಾಯ ಹೃದಯವಿದ್ಯೆಯನ್ನು ವಿವರಿಸುತ್ತದೆ. ಹೃದಯವು ಎದೆಯ ಎಡಭಾಗದಲ್ಲಿರುವ ಅವಯವವಲ್ಲ. ಅದರ ಬಲಭಾಗದಲ್ಲಿರುವಂತೆ ಭಾವಿಸಿರುವ ಆತ್ಮ. 'ನಾನು' ಎಂಬ ಭಾವನೆ ಮತ್ತು ಇತರ ಎಲ್ಲ ಭಾವನೆಗಳು ಉದ್ಭವಿಸುವುದು ಅದರಿಂದ. ಯೋಗದ ಕ್ಲಿಷ್ಟಪ್ರಕ್ರಿಯೆಯನ್ನು ಬದಿಗೆ ಸರಿಸಿ, ಶ್ರೀ ರಮಣರು ನಮ್ಮ ಸಹಜ ಸ್ಥಿತಿಯ

ರಹಸ್ಯವನ್ನು ಬಯಲು ಮಾಡುತ್ತಾರೆ.

''ಇಡೀ ವಿಶ್ವವೇ ನಮ್ಮ ದೇಹದಲ್ಲಿದೆ ಮತ್ತು ಇಡೀ ದೇಹ ನಮ್ಮ ಹೃದಯದಲ್ಲಿದೆ. ಆದ್ದರಿಂದ ಇಡೀ ವಿಶ್ವ ನಮ್ಮ ಹೃದಯದಲ್ಲಿದೆ. ಸೂರ್ಯನು ಚಂದ್ರನಿಗೆ ಬೆಳಕು ನೀಡುವಂತೆಯೇ, ಈ ಹೃದಯವು ಮನಸ್ಸಿಗೆ ಬೆಳಕು ನೀಡುತ್ತದೆ. ರಾತ್ರಿಯಲ್ಲಿ ಸೂರ್ಯನಿಲ್ಲದಿದ್ದಾಗ ಚಂದ್ರನ ಬೆಳಕನ್ನು ಕಾಣುವಂತೆ, ಹೃದಯದಿಂದ ದೂರವಾದ ವ್ಯಕ್ತಿ ಮನಸ್ಸನ್ನು ಮಾತ್ರವೇ ಗ್ರಹಿಸುತ್ತಾನೆ. ಬೆಳಕಿನ ನಿಜವಾದ ಮೂಲ ತನ್ನ ಆತ್ಮವೇ ಎನ್ನುವುದನ್ನು ಗ್ರಹಿಸದೆ ಮತ್ತು ಮನಸ್ಸಿನ ಮೂಲಕ ವಸ್ತುಗಳನ್ನು ತನಗಿಂತ ಬೇರೆಯಾಗಿ ಗ್ರಹಿಸಿ, ಅಜ್ಞಾನಿಯು ಮೋಹಕ್ಕೊಳಗಾಗುತ್ತಾನೆ. ಸೂರ್ಯನ ಪ್ರಕಾಶದಿಂದ ಚಂದ್ರನ ಬೆಳಕು ಆಗುವಂತೆ, ಹೃದಯದಲ್ಲಿ ನೆಲೆಸಿರುವ ಜ್ಞಾನಿಯು ಮನಸ್ಸಿನ ಬೆಳಕು, ಹೃದಯದ ಬೆಳಕಿನಲ್ಲಿ ಲಯವಾಗುವುದನ್ನು ಕಾಣುತ್ತಾನೆ. ನೋಡುವವನು ನೋಡುವ ವಸ್ತುವಿನಿಂದ ಬೇರೆ ಎಂಬ ಭಾವನೆಯು ಮನಸ್ಸಿನಲ್ಲಿ ಮಾತ್ರ ಇರುವಂಥದು. ಹೃದಯದಲ್ಲಿ ನೆಲೆಸಿರುವವರಿಗೆ ನೋಡುವವನು ಮತ್ತು ನೋಡಿದ ವಸ್ತು ಎರಡೂ ಒಂದೇ.''

ಒಂಬತ್ತನೆಯ ಅಧ್ಯಾಯವು ಸಂಘವಿದ್ಯೆಯ ಸಂಗ್ರಹವಾಗಿದೆ. ಅದರಲ್ಲಿ ಸಮಾಜಶಾಸ್ತ್ರ, ರಾಜನೀತಿ ಮತ್ತು ಮಾನವ ಸಹೋದರತ್ವ ಸೇರಿವೆ. ತನ್ನ ಬಗ್ಗೆ ಕರ್ತವ್ಯ, ತನ್ನ ಪರಿವಾರದ ಬಗ್ಗೆ ಕರ್ತವ್ಯ, ತನ್ನ ನಾಡಿನ ಬಗ್ಗೆ ಕರ್ತವ್ಯ ಮತ್ತು ಮಾನವ ಸಮಾಜದ ಬಗ್ಗೆ ಕರ್ತವ್ಯ ಇವುಗಳ ನಡುವೆ ಯಾವ ಸಂಘರ್ಷವೂ ಇರಬೇಕಾಗಿಲ್ಲ. ''ವಿವಿಧ ಜೀವನಮಾರ್ಗಗಳನ್ನು ಅನುಸರಿಸುತ್ತಿರುವವರಿಂದ ಕೂಡಿದ ಸಮಾಜವೊಂದರಲ್ಲಿ ಸಮಾಜವು ದೇಹದಂತೆಯೂ, ಸದಸ್ಯರು ಅದರ ಅವಯವಗಳಂತೆಯೂ ಇರುತ್ತಾರೆ. ದೇಹಕ್ಕೆ ಅನುಕೂಲವಾಗಿ ವರ್ತಿಸುವ ಅವಯವದಂತೆ ವ್ಯಕ್ತಿಯು ಸಮಾಜದ ಒಳಿತಾಗಿ ಶ್ರಮಿಸುವ ಮೂಲಕ ಏಳಿಗೆ ಪಡೆಯುತ್ತಾನೆ. ಮನಸ್ಸು, ಮಾತು ಮತ್ತು ದೇಹದ ಮೂಲಕ ವ್ಯಕ್ತಿಯು ಯಾವಾಗಲೂ ಸಮಾಜದ ಹಿತಾರ್ಥಗಳಿಗೆ ಸಹಾಯಕವಾಗಿರುವಂತೆ ನಡೆದುಕೊಳ್ಳಬೇಕು ಮತ್ತು ಹಾಗೆ ವರ್ತಿಸಲು ತನ್ನ ಪರಿವಾರವನ್ನು ಜಾಗ್ರತಗೊಳಿಸಬೇಕು.'' ತನ್ನ ಮನಸ್ಸನ್ನು ಶುದ್ಧಿಗೊಳಿಸುವ ಶಾಂತಿ ಮತ್ತು ಸಮಾಜದ ಪ್ರಗತಿಗೆ ಅವಶ್ಯಕವಾದ ಶಕ್ತಿ ಈ ಎರಡರಿಂದ ಸಮಾಜದ ಯೋಗಕ್ಷೇಮವನ್ನು ಪೋಷಿಸಬೇಕು. ಗುಂಪುಗಳ ಹಾಗೂ ವರ್ಗಗಳ ನಡುವೆ ಸಂಘರ್ಷವನ್ನು ತಪ್ಪಿಸಬೇಕಾದಲ್ಲಿ, ರಾಷ್ಟ್ರಗಳ ನಡುವಣ ಸಂಘರ್ಷವನ್ನೂ ಅಂತೆಯೇ ತಪ್ಪಿಸಬೇಕು. ''ಇಡೀ ಮಾನವ ಸಮಾಜವು ಸಾಧಿಸಬೇಕಾದ ಪರಮ ಗುರಿ ಸಮಾನತೆಯ ಭಾವನೆಯ ಮೇಲೆ ಸ್ಥಾಪಿಸಿದ ಸಹೋದರಭಾವ. ಅಂಥ ಸಹೋದರ ಭಾವದ ಮೂಲಕ ಮಾನವರಲ್ಲಿ ಶಾಂತಿ ನೆಲೆಸುತ್ತದೆ. ಆಗ ಈ ಇಡೀ ಭೂಮಂಡಲವೇ ಒಂದು ಕುಟುಂಬದಂತೆ ಏಳಿಗೆ ಪಡೆಯುತ್ತದೆ''

ಗಂಡಸಿನಷ್ಟೇ ಹೆಂಗಸಿಗೂ ಸಂನ್ಯಾಸಕ್ಕೆ ಅಧಿಕಾರವಿದೆ ಎಂದು ಹದಿಮೂರನೆಯ ಅಧ್ಯಾಯ ವಿಧಿಸುತ್ತದೆ. ಏಕೆಂದರೆ ಮುಕ್ತಿಯಲ್ಲಿ ಮತ್ತು ಜ್ಞಾನದಲ್ಲಿ ಗಂಡಸಿನ ಮತ್ತು ಹೆಂಗಸಿನ ನಡುವೆ ಯಾವ ವ್ಯತ್ಯಾಸವೂ ಇಲ್ಲ.

''ಸಂದೇಹ ಮತ್ತು ತಪ್ಪುಗ್ರಹಿಕೆ ಎರಡೂ ಪರಿಹಾರವಾಗುವುದು ಅನುಭವದಿಂದ

ಮಾತ್ರವೇ, ನೂರಾರು ಶಾಸ್ತ್ರ ಗ್ರಂಥಗಳಿಂದಲ್ಲ'' ಎಂದು ಹದಿನೈದನೆಯ ಅಧ್ಯಾಯ ಘೋಷಿಸುತ್ತದೆ.

ಮಹರ್ಷಿಗಳ ಪ್ರಭಾವಕ್ಕೆ ಸಿಕ್ಕಿದ ಮೊದಲನೆಯ ಪಾಶ್ಚಾತ್ಯ ಅನ್ವೇಷಕ ಪ್ರಾಯಶಃ ಎಫ್.ಎಚ್. ಹಂಫ್ರಿಸ್. ಇಂಡಿಯನ್ ಪೋಲಿಸ್ ಸರ್ವಿಸಿಗೆ ಸೇರಿದ ಈತ ಮಹರ್ಷಿಯನ್ನು 1911ರಲ್ಲಿ ಬೆಟ್ಟದ ಮೇಲೆ ಸಂದರ್ಶಿಸಿದ. 21 ವರ್ಷದ ಯುವಕ ಹಂಫ್ರಿಸ್ ಮತಧರ್ಮದ ಶ್ರದ್ಧಾಪೂರ್ವಕ ಅಭ್ಯಾಸಿಯಾಗಿದ್ದ. ಪವಾಡದ ಶಕ್ತಿಗಳು ಅವನಲ್ಲಿ ಕಾಣಿಸಿಕೊಳ್ಳಲು ಪ್ರಾರಂಭವಾಗುತ್ತಲೇ ಅವನು ಸಿದ್ಧಿಗಳ ಬಗ್ಗೆ ತಿಳಿದುಕೊಳ್ಳಲು ಕುತೂಹಲಿಯಾಗಿದ್ದ. ಮಹರ್ಷಿಗಳು ಈ ಕುತೂಹಲಕ್ಕೆ ಪ್ರೋತ್ಸಾಹ ಕೊಡಲಿಲ್ಲ: ''ಅಲೌಕಿಕ ವ್ಯಾಪಾರಗಳ ಬಗ್ಗೆ ಹೆಚ್ಚು ಭಾವಿಸಬೇಡಿ. ಅತೀಂದ್ರಿಯ ದೃಷ್ಟಿ, ಅತೀಂದ್ರಿಯ ಶ್ರವಣ ಮುಂತಾದವುಗಳಿಗೆ ಬೆಲೆಯೇನೂ ಇಲ್ಲ, ಏಕೆಂದರೆ ಅವುಗಳನ್ನು ಹೊಂದಿರುವುದಕ್ಕಿಂತ ಅವು ಸಂಭವವಿರುತ್ತದೆ. ಸಿದ್ಧಿಶಕ್ತಿಗಳಿಗೆ ಯಾವನೇ ಗುರು ಎಂದೇ ಆಗಲಿ ಸ್ವಲ್ಪವೂ ಗಮನಕೊಟ್ಟಿದ್ದಿಲ್ಲ, ಏಕೆಂದರೆ ಅವನ ದಿನನಿತ್ಯದ ಬದುಕಿನಲ್ಲಿ ಅವನಿಗೆ ಅವುಗಳ ಅಗತ್ಯವಿಲ್ಲ.''

''ನಮಗೆ ದೃಶ್ಯವಾಗುವ ವಿಷಯಗಳು ವಿಚಿತ್ರವೂ ಆಶ್ಚರ್ಯಕರವೂ ಆಗಿವೆ. ಆದರೆ ಇದೆಲ್ಲಕಿಂತಲೂ ಅತ್ಯಂತ ಅದ್ಭುತವಾದುದನ್ನು ನಾವು ಅರಿತಿಲ್ಲ. ನಾವು ನೋಡುವ ಎಲ್ಲ ವಸ್ತುಗಳಿಗೆ ಮತ್ತು ಅವನ್ನು ನಾವು ನೋಡುವ ಕ್ರಿಯೆಗೆ ಕಾರಣವಾದುದು ಒಂದೇ ಅನಂತ ಶಕ್ತಿ ಎನ್ನುವುದು. ಅದು ಬದುಕು, ಸಾವು ಮತ್ತು ಘಟನೆಗಳು ಇಂಥ ಬದಲಾಯಿಸುತ್ತಿರುವ ವಿಷಯಗಳ ಮೇಲೆ ನಿಮ್ಮ ಗಮನ ನೆಡಬೇಡಿ. ಅವನ್ನು ನೋಡುವ ಅಥವಾ ಗ್ರಹಿಸುವ ಕ್ರಿಯೆಯ ಬಗ್ಗೆ ಕೂಡ ಆಲೋಚಿಸಬೇಡಿ. ಆದರೆ ಇವೆಲ್ಲವನ್ನೂ ನೋಡುವ ವಸ್ತುವನ್ನು ಇವೆಲ್ಲಕ್ಕೂ ಕಾರಣವಾಗಿರುವ ವಸ್ತುವನ್ನು ಮಾತ್ರ ಕುರಿತು ಚಿಂತಿಸಿ. ಅದು ನಿಮ್ಮೊಳಗೇ ಇದೆ. ಈ ಏಕಾಗ್ರತೆಯ ಪರಿಣಾಮಗಳನ್ನು ಎಲ್ಲ ಬಗೆಯ ಅನೈಚ್ಛಿಕ ಅತೀಂದ್ರಿಯ ದೃಷ್ಟಿ, ಮನಸ್ಸಿನ ಶಾಂತಿ, ಕಷ್ಟಗಳನ್ನು ಎದುರಿಸುವ ಶಕ್ತಿ, ಸರ್ವವ್ಯಾಪಕ ಶಕ್ತಿ, ಆದರೆ ಯಾವಾಗಲೂ ಅನೈಚ್ಛಿಕ ಶಕ್ತಿ ಇವುಗಳಲ್ಲಿ ಕಾಣಬಹುದು.''

''ಕ್ರೈಸ್ತ, ಬೌದ್ಧ, ಹಿಂದೂ, ಥಿಯಾಸಫಿ ಅಥವಾ ಇತರ ಯಾವುದೇ ಪದ್ಧತಿಯವಾಗಿರಲಿ ಮತಗಳು ಎಲ್ಲ ಮತಗಳೂ ಸಂಧಿಸುವ ಒಂದು ಹಂತಕ್ಕೆ ಮಾತ್ರ ನಮ್ಮನ್ನು ಒಯ್ಯಬಲ್ಲವು, ಅದರಿಂದಾಚೆಗೆ ಒಯ್ಯಲಾರವು. ದೇವರೇ ಎಲ್ಲವೂ ಮತ್ತು ಎಲ್ಲವೂ ದೇವರೇ ಎನ್ನುವ ಸಂಗತಿಯನ್ನು ಗ್ರಹಿಸುವುದೇ ಆ ಹಂತ. ಇದು ಯಾವುದೇ ರಹಸ್ಯವಾದ ಅರ್ಥದಲ್ಲಿ ಆಗಿರದೆ ಅತ್ಯಂತ ಲೌಕಿಕವೂ ಸರ್ವಸಾಮಾನ್ಯವೂ ಆದ ಅರ್ಥದಲ್ಲಿ ಆಗಿರುತ್ತದೆ. ಹೆಚ್ಚು ಲೌಕಿಕ, ಸಾಮಾನ್ಯ ಮತ್ತು ಪ್ರಾಯೋಗಿಕ ಆಗಿರುವಷ್ಟೂ ಉತ್ತಮವಾಗಿರುತ್ತದೆ.'' ಆದರೆ ದೇವರ ಈ ವಿಶ್ವವ್ಯಾಪಿತ್ವವನ್ನು ಕೇವಲ ಬೌದ್ಧಿಕವಾಗಿ ಗ್ರಹಿಸಬಾರದು, ನಿರಂತರ ಅಭ್ಯಾಸದ ಮೂಲಕ ಸಾಕ್ಷಾತ್ಕರಿಸಿಕೊಂಡು ಅನುಭವಿಸಬೇಕು.

ತಾನು ಪ್ರಪಂಚಕ್ಕೆ ಸಹಾಯ ಮಾಡಬಹುದೇ ಎಂದು ಹಂಫ್ರಿಸ್ ಕೇಳಿದಾಗ, ''ನಿನಗೆ ಸಹಾಯ ಮಾಡಿಕೊ. ಆಗ ಪ್ರಪಂಚಕ್ಕೂ ಸಹಾಯ ಮಾಡುತ್ತೀಯೆ. ನೀನು ಪ್ರಪಂಚದಿಂದ ಬೇರೆಯಲ್ಲ. ಪ್ರಪಂಚವೂ ನಿನ್ನಿಂದ ಬೇರೆಯಲ್ಲ'' ಎಂದು ಮಹರ್ಷಿ ನುಡಿದರು. ತಮ್ಮ

ಲೌಕಿಕ ಜವಾಬ್ದಾರಿಗಳಿಗೂ ಧಾರ್ಮಿಕ ಜೀವನಕ್ಕೂ ನಡುವೆ ಕಾಣಿಸುತ್ತಿದ್ದ ವಿರೋಧದಿಂದ ತೊಂದರೆಗೊಳಗಾಗಿದ್ದ ಅನೇಕ ಸಾಧಕರಿಗೆ ಸಲಹೆ ಮಾಡಿದ್ದಂತೆ, ಅವನಿಗೂ ಅವನ ಕೆಲಸದ ಕರ್ತವ್ಯಗಳು ಮತ್ತು ಧ್ಯಾನ ಎರಡನ್ನೂ ಒಟ್ಟಿಗೇ ಮಾಡಲು ಸಲಹೆಯಿತ್ತರು.

ಹಂಫ್ರಿಸ್ ಲಂಡನ್ನಿನಲ್ಲಿದ್ದ ತನ್ನ ಸ್ನೇಹಿತನೊಬ್ಬನಿಗೆ ಒಂದು ಕಾಗದ ಬರೆದ. ಅದು ಆಮೇಲೆ ಒಂದು ವಿದ್ವತ್‌ಪತ್ರಿಕೆಯಲ್ಲಿ ಪ್ರಕಟವಾಯಿತು. ಅದರಲ್ಲಿ ಹಂಫ್ರಿಸ್ ಮಹರ್ಷಿಗಳ, ಮೇಲೆ ಸಂಗ್ರಹಿಸಿದ, ಉಪದೇಶವನ್ನು ವರದಿ ಮಾಡಿದ್ದೇ ಅಲ್ಲದೆ, ಅವರ ಸಾನ್ನಿಧ್ಯದ ಪ್ರಭಾವವನ್ನೂ ಈ ಮಾತುಗಳಲ್ಲಿ ನಿರೂಪಿಸಿದ. ''ಗುಹೆಯನ್ನು ತಲುಪಿದ ಮೇಲೆ ನಾವು ಅವರ ಮುಂದೆ ಪಾದದ ಬಳಿ ಕುಳಿತೆವು ಮತ್ತು ಏನನ್ನೂ ನುಡಿಯಲಿಲ್ಲ. ಈ ರೀತಿ ನಾವು ಬಹಳ ಕಾಲ ಕುಳಿತಿದ್ದೆವು. ನನ್ನಿಂದ ನನ್ನನ್ನು ಹೊರಕ್ಕೆತ್ತಿದಂತೆ ನನಗೆ ಭಾಸವಾಯಿತು. ಅರ್ಧಗಂಟೆಯ ಕಾಲ ನಾನು ಮಹರ್ಷಿಗಳ ಕಣ್ಣುಗಳನ್ನು ನೋಡುತ್ತಿದ್ದೆ. ಅವು ತಮ್ಮ ಗಂಭೀರವಾದ ಧ್ಯಾನಭಾವವನ್ನು ಸ್ವಲ್ಪವೂ ಬದಲಾಯಿಸಲಿಲ್ಲ. ದೇಹವು ಪವಿತ್ರಾತ್ಮದ ದೇಗುಲದಂತೆ ನನಗೆ ಸ್ವಲ್ಪ ಅರಿವಾಗತೊಡಗಿತು. ನನ್ನ ಭಾವಗಳು ಅನಿರ್ವಚನೀಯ-ವಾಗಿದ್ದವು..... ಅತ್ಯಂತ ಹೃದಯ ಸ್ಪರ್ಶಿಯಾದ ದೃಶ್ಯವೆಂದರೆ ಮಹರ್ಷಿಗಳ ಬಳಿಗೆ ಬಂದು ಅವರ ಬಳಿ ಕುಳಿತುಕೊಳ್ಳುವ ಏಳು ವರ್ಷದವರೆಗಿನ ಚಿಕ್ಕಮಕ್ಕಳು. ದಿವಸಗಳಗಟ್ಟಲೆ ಮಹರ್ಷಿ ಅವರೊಡನೆ ಒಂದೇ ಒಂದು ಮಾತು ಆಡದಿದ್ದರೂ ಅಥವಾ ಅವರ ಕಡೆ ನೋಡದಿದ್ದರೂ ಈ ಮಕ್ಕಳು ಸ್ವಂತ ಇಚ್ಛೆಯಿಂದ ಬೆಟ್ಟ ಹತ್ತಿ ಬರುತ್ತಿದ್ದರು. ಅವರು ಅಲ್ಲಿ ಆಟ ಆಡುವುದಿಲ್ಲ. ಪೂರ್ಣ ತೃಪ್ತಿಯಿಂದ, ಶಾಂತವಾಗಿ ಸುಮ್ಮನೆ ಕುಳಿತಿರುತ್ತಾರೆ.''

ಆದರೂ, ನೋಡಲು ಬರುತ್ತಿದ್ದ ಈ ಮಕ್ಕಳು ಅನೇಕ ವೇಳೆ ಆಟ ಆಡುತ್ತಿದ್ದುವೇ ಅಲ್ಲದೆ ಮಹರ್ಷಿಗಳು ಅವರ ಆಟಪಾಠಗಳಲ್ಲಿ ಸೇರುತ್ತಿದ್ದರು. ವಿರೂಪಾಕ್ಷ ಗುಹೆಯಲ್ಲಿ ಮಕ್ಕಳ ಜೊತೆ ಗೋಲಿ ಆಡುತ್ತಿದ್ದುದು ನಿಜವೇ ಎಂದು ಅನೇಕ ವರ್ಷಗಳ ತರುವಾಯ ಭಕ್ತನೊಬ್ಬನು ಕೇಳಿದಾಗ, ಮಹರ್ಷಿ ಅದು ನಿಜವೆಂದು ತಿಳಿಸಿ ಹೀಗೆ ಹೇಳಿದರು. ''ಅದಕ್ಕಾಗಿ ತೋಡಿದ ಹಳ್ಳಗಳು ಇನ್ನೂ ಅಲ್ಲಿರಬೇಕು. ಆ ಮಕ್ಕಳು ಕೆಲವು ಸಲ ಸಿಹಿತಿಂಡಿಯ ಪೊಟ್ಟಣಗಳನ್ನು ತರುತ್ತಿದ್ದರು. ಅವನ್ನು ನಾವೆಲ್ಲರೂ ಹಂಚಿಕೊಳ್ಳುತ್ತಿದ್ದೆವು. ದೀಪಾವಳಿಯಲ್ಲಿ ಅವರು ನನ್ನ ಭಾಗದ ಪಟಾಕಿಗಳನ್ನು ಬೇರೆ ತೆಗೆದಿಟ್ಟು ನನಗೆ ತಂದುಕೊಡುತ್ತಿದ್ದರು. ನಾವೆಲ್ಲ ಒಟ್ಟಿಗೆ ಪಟಾಕಿ ಹಚ್ಚುತ್ತಿದ್ದೆವು. ಅದು ಬಹಳ ಮನರಂಜನೆ ಒದಗಿಸುತ್ತಿತ್ತು.''

ವಿರೂಪಾಕ್ಷ ಗುಹೆಯಲ್ಲಿ ಆಟವಾಡಲು ಬೆಟ್ಟವೇರಿ ಬರುತ್ತಿದ್ದ ಮಕ್ಕಳು ಕೆಲವು ಸಲ ತಮ್ಮ ಬೊಂಬೆಗಳನ್ನು ತಂದು ಅವುಗಳ ಮದುವೆ ನಡೆಸುತ್ತಿದ್ದರು. ಅವರಲ್ಲಿ ಎಚ್ಚಮ್ಮಾಳ್‌ಳ ಮಗಳು ಚೆಲ್ಲಮ್ಮ ಇದ್ದಳು. ಬಹಳ ಸಣ್ಣವಳಾಗಿದ್ದರೂ, ಅವಳು ಏಕಾದಶಿ ಮತ್ತು ಕೃತ್ತಿಕೆ ಮೊದಲಾದ ಸಂದರ್ಭಗಳಲ್ಲಿ ತನ್ನ ತಾಯಿಯ ಜೊತೆ ಉಪವಾಸವಿರುತ್ತಿದ್ದಳು. ತನ್ನ ತಾಯಿ ತಯಾರಿಸುತ್ತಿದ್ದ ಆಹಾರವನ್ನು ಅನೇಕ ಸಲ ತರುತ್ತಿದ್ದ ಆ ಹುಡುಗಿಗೆ ಉಪವಾಸ ತೊಂದರೆಯಾಗಿತ್ತೆಂಬುದನ್ನು ಮಹರ್ಷಿ ಗಮನಿಸಿದರು. ''ತಾನು ಉಪವಾಸ ಮಾಡುತ್ತಿದ್ದರೂ ಅವಳು ಒಂದು ಕೃತ್ತಿಕೆಯ ದಿನ ನನಗೆ ಆಹಾರ ತಂದಳು, ಅವಳು ಯಾವ ಆಹಾರವನ್ನೂ ತೆಗೆದುಕೊಳ್ಳದೆ ಇದ್ದಾಗ, ನಾನು ತಿನ್ನುವುದು ಹೇಗೆ? ಅಂಥ ಉಪವಾಸಗಳನ್ನು ಮಾಡಲು

ಅವಳು ಬಹಳ ಚಿಕ್ಕವಳೆಂದು ಹೇಳಿ ಅವಳನ್ನು ಊಟಮಾಡುವಂತೆ ಒಪ್ಪಿಸಿದೆ'' ಎಂದು ಅವರು ಆಮೇಲೆ ಜ್ಞಾಪಿಸಿಕೊಂಡು ಹೇಳಿದರು. ಮಾರನೆಯ ದಿನ ಅವಳು ಊಟ ತೆಗೆದುಕೊಂಡು ಬೆಟ್ಟ ಹತ್ತಿ ಬರುತ್ತಿರುವಾಗ, ಅವಳಿಗೆ ಒಂದು ಕಾಗದದ ಚೂರು ಸಿಕ್ಕಿತು. ಅದರಲ್ಲಿ ಒಂದು ಶ್ಲೋಕ ಇದ್ದ ಹಾಗೆ ಕಂಡಿತು. ಅದನ್ನು ಅವಳು ಮಹರ್ಷಿಗೆ ತೋರಿಸಿದಳು. ಚೆಲ್ಲಮ್ಮಾಳಿಗಾಗಿ ಅವರು ಶ್ಲೋಕವನ್ನು ಸಂಸ್ಕೃತದಿಂದ ತಮಿಳಿಗೆ ತರ್ಜುಮೆ ಮಾಡಿದರು. ಅದು ಹೀಗಿತ್ತು: ''ಸಾಧುಸಂತರ ಸಂಗ ದೊರೆತಲ್ಲಿ ಆತ್ಮನಿಗ್ರಹದ ಬಗೆಬಗೆಯ ವಿಧಾನಗಳು ಏತಕ್ಕೆ? ತಂಪಾದ ತೆಂಕಣ ನಸುಗಾಳಿ ಬೀಸುತ್ತಿರುವಾಗ ಬೀಸಣಿಗೆಯ ಪ್ರಯೋಜನ ಏನು ಎಂದು ಹೇಳುತ್ತೀಯಾ?'' ಅಲ್ಲಿಂದಾಚೆಗೆ ಅವಳು ತನ್ನ ಉಪವಾಸಗಳನ್ನು ನಿಲ್ಲಿಸಿದಳು.

ದೀನರ ಮತ್ತು ದರಿದ್ರರ ಜೊತೆ ಅವರ ತಾದಾತ್ಮ್ಯ ಭಾವದ ಅಸಂಖ್ಯಾತ ನಿದರ್ಶನಗಳಲ್ಲಿ ಒಂದನ್ನು ಅವರದೇ ಸ್ಪಷ್ಟ ಮಾತುಗಳಲ್ಲಿ ನಿರೂಪಿಸಬಹುದು: ''ಬೇಸಿಗೆಯಲ್ಲಿ ನಾವು ನೀರಿಲ್ಲದ ವಿರೂಪಾಕ್ಷ ಗುಹೆಯಿಂದ ಮಾವಿನ ಮರದ ಗುಹೆಗೆ ಹೋಗುತ್ತಿದ್ದೆವು. ಮಧ್ಯಾಹ್ನದ ಹೊತ್ತಿಗೆ ತಲೆಯ ಮೇಲೆ ಭಾರವಾದ ಹುಲ್ಲಿನ ಕಂತೆಗಳನ್ನು ಹೊತ್ತು, ಬಹಳ ಬಳಲಿದ್ದ ಕೆಲವು ಕೆಳಜಾತಿಯ ಹೆಂಗಸರು ಗುಹೆಗೆ ಬರುತ್ತಿದ್ದರು. ಬಡ ಜನ, ಅವರು ಮುಂಜಾವಿನಲ್ಲಿ ಸ್ವಲ್ಪ ಗಂಜಿ ಕುಡಿದು ಹೊರಡುತ್ತಿದ್ದರು. ಬೆಟ್ಟ ಹತ್ತಿ ಒಂದು ಹೊರೆ ಹುಲ್ಲು ಸಂಗ್ರಹಿಸುತ್ತಿದ್ದರು. ಗುಹೆಗೆ ಬಂದ ಕೂಡಲೇ ಅವರು ಹೊರೆಗಳನ್ನು ಕೆಳಕ್ಕೆಸೆದು, ಬಗ್ಗಿ, 'ಸ್ವಾಮಿ, ನಮ್ಮ ಬೆನ್ನ ಮೇಲೆ ಒಂದು ತಂಬಿಗೆ ನೀರು ಸುರಿಯಿರಿ' ಎಂದು ಕೇಳುತ್ತಿದ್ದರು. ನಾನು ವರಾಂಡದ ಮೇಲೆ ನಿಂತುಕೊಂಡು, ಅವರು ಅಪೇಕ್ಷಿಸಿದಂತೆ ನೀರು ಸುರಿಯುತ್ತಿದ್ದೆ. ಆಯಾಸ ಪರಿಹರಿಸಿಕೊಂಡು, ಅವರು 'ಓಹ್, ಇದು ಎಷ್ಟು ಹಿತವಾಗಿದೆ?' ಎನ್ನುತ್ತಿದ್ದರು. ಆಮೇಲೆ ಕೈಗಳನ್ನು ಬೊಗಸೆಮಾಡಿಕೊಂಡು ಹೊಟ್ಟೆ ತುಂಬುವವರೆಗೆ ನೀರು ಕುಡಿಯುತ್ತಿದ್ದರು. ಮುಖಗಳನ್ನು ತೊಳೆದುಕೊಂಡು, ಸ್ವಲ್ಪ ಹೊತ್ತು ಮರಗಳ ನೆರಳಿನಲ್ಲಿ ಕುಳಿತಿದ್ದು ಹೊರಟುಹೋಗುತ್ತಿದ್ದರು. ಅವರು ಆ ಹೊತ್ತಿಗೆ ಬರುತ್ತಾರೆಂದು ನನಗೆ ಗೊತ್ತಿತ್ತು. ಆದ್ದರಿಂದ ನಾನು ನೀರು ಹಿಡಿದುಕೊಂಡು ಸಿದ್ಧನಾಗಿರುತ್ತಿದ್ದೆ. ಅವರು ತಾನೇ ಏನು ಮಾಡಬಹುದಾಗಿತ್ತು? ಅವರು ಮುಲೈಪಾಳ್ ತೀರ್ಥದ ನೀರನ್ನು ಮುಟ್ಟುವಂತಿರಲಿಲ್ಲ. ಬೇರೆ ಇನ್ನೆಲ್ಲೂ ನೀರಿರಲಿಲ್ಲ. ಹುಲ್ಲನ್ನು ಮಾರಿ ಸ್ವಲ್ಪ ಹಣ ಪಡೆಯುವವರೆಗೆ ಅವರಿಗೆ ಗಂಜಿಯೂ ಸಿಗುತ್ತಿರಲಿಲ್ಲ. ಪಾಪ, ಆ ಬಡ ಜನ, ಏನು ಮಾಡುವಂತಿದ್ದರು? ಸ್ವಾಮಿ ನೀರು ಕೊಡುತ್ತಾರೆಂಬ ಆಸೆಯಿಂದ ಅವರು ಗುಹೆಗೆ ಬರುತ್ತಿದ್ದರು.

''ಆ ಕಾಲದಲ್ಲಿ ನಾವು ಅಡಿಗೆ ಮಾಡುತ್ತಿರಲಿಲ್ಲ. ಯಾವತ್ತಾದರೂ ನಾವು ಮಾಡಿದಾಗ, ಅಕ್ಕಿ ಬೇಯುತ್ತಿರುವಾಗ ತುಂಬ ನೀರು ಹಾಕುತ್ತಿದ್ದೆವು. ಗಂಜಿಯನ್ನು ತೆಗೆದು, ಒಂದು ಪಾತ್ರೆಯಲ್ಲಿ ಸುರಿದು, ಯಥೇಚ್ಛವಾಗಿ ನೀರು ಸೇರಿಸಿ, ಉಪ್ಪು ಹಾಕಿ ಇಡುತ್ತಿದ್ದೆವು. ಒಣಗಿದ ಶುಂಠಿ ಸಿಕ್ಕಿದರೆ ನಾನು ಅದನ್ನೂ ಅದಕ್ಕೆ ಸೇರಿಸುತ್ತಿದ್ದೆ. ಆ ಹೆಂಗಸರು ಬರುವ ಹೊತ್ತಿಗೆ ಗಂಜಿ ನೀರು ತಣ್ಣಗೆ ಇರುತ್ತಿತ್ತು. ಒಂದು ಬಟ್ಟಲಿನಷ್ಟು ಅದನ್ನು ಅವರ ಕೈಗಳಿಗೆ ಸುರಿದಾಗ ಅಮೃತವೋ ಎಂಬಂತೆ ಅದನ್ನು ಕುಡಿದು ಅವರು ಹೊರಟುಹೋಗುತ್ತಿದ್ದರು. ಆ ಗಂಜಿಯ ರುಚಿ ಮತ್ತು ಆ ನೀರನ್ನು ಕುಡಿದ ಸಂತೋಷ ಅವರು ಮಾತ್ರ ಸವಿಯಬಲ್ಲವರಾಗಿದ್ದರು.''

ಭಾವದಿಂದ ತುಂಬಿ ಮಹರ್ಷಿಗಳು ಮಾತು ಮುಂದುವರಿಸಲಾಗದೆ ಮೌನವಾಗುತ್ತಿದ್ದರು ಎಂದು ಈ ಕಥೆಯನ್ನು ಹೇಳುವ ನಾಗಮ್ಮ ಸೇರಿಸುತ್ತಾರೆ.

ಒಂದು ಸಲ ಮಹರ್ಷಿ ಮತ್ತು ಮುದಲಿಯಾರ್ ಸ್ವಾಮಿ ವಿರೂಪಾಕ್ಷ ಗುಹೆಯ ಮೇಲಿದ್ದ ಬೆಟ್ಟದ ಮೇಲೆ ನಡೆಯುತ್ತಿದ್ದರು. ಅಲ್ಲಿ 15 ಅಡಿ ಎತ್ತರದ ಒಂದು ದೊಡ್ಡ ಬಂಡೆ ಇದ್ದಿತು. ಅದರ ತುದಿಯಲ್ಲಿ ಒಂದು ಕೊರಕಲಿದ್ದಿತು. ಒಬ್ಬ ಚಿಕ್ಕ ಕುರುಬ ಹುಡುಗಿ ಅಲ್ಲಿ ಅಳುತ್ತ ನಿಂತಿದ್ದಳು. ಮಹರ್ಷಿ ಅದಕ್ಕೆ ಕಾರಣವನ್ನು ಕೇಳಿದಾಗ, ಅವಳ ಒಂದು ಕುರಿ ಕಾಲು ಜಾರಿ ಕೊರಕಲಿಗೆ ಬಿದ್ದಿದೆಯೆಂದೂ, ಅದನ್ನು ಅವಳು ಪಾರು ಮಾಡಲಾಗಲಿಲ್ಲ-ವೆಂದೂ ಹೇಳಿದಳು. ಕೂಡಲೇ ಮಹರ್ಷಿ ಕೊರಕಲಿನಲ್ಲಿ ಇಳಿದು, ಕುರಿಯನ್ನು ಭುಜದ ಮೇಲೆ ಹೊತ್ತು, ಮೇಲಕ್ಕೆ ಹತ್ತಿ ಬಂದು ಆ ಹುಡುಗಿಗೆ ಕೊಟ್ಟರು. ಅವಳಿಗೆ ಬಹಳ ಸಂತೋಷವಾಯಿತು.

ಹದಿನಾರನೆಯ ವರ್ಷದಲ್ಲಿ ಆದ ಮೃತ್ಯುವಿನ ಅನುಭವವು ಸ್ವಲ್ಪ ವ್ಯತ್ಯಾಸದೊಡನೆ 1912ರಲ್ಲಿ, ಹದಿನಾರು ವರ್ಷಗಳ ತರುವಾಯ, ಮತ್ತೆ ಆಯಿತು. ಅದನ್ನು ಮಹರ್ಷಿ ನಾಗಮ್ಮನಿಗೆ ಹೀಗೆ ತಿಳಿಸಿದರು: ''ಒಂದು ದಿನ ವಾಸು (ವಾಸುದೇವ ಶಾಸ್ತ್ರಿ) ಮತ್ತು ಇತರರೊಡನೆ ನಾನು ಸ್ನಾನಕ್ಕಾಗಿ ಪಚಿಯಮ್ಮನ್ ದೇವಸ್ಥಾನದ ಎದುರಿಗಿರುವ ಕೊಳಕ್ಕೆ ಹೋದೆ. ಹತ್ತಿರದ ದೊಡ್ಡ ಹಾದಿಯಲ್ಲಿ ವಾಪಸು ಬರುತ್ತಿದ್ದಾಗ ಆಮೆ ಬಂಡೆಯನ್ನು ನಾವು ಸಮೀಪಿಸುತ್ತಿದ್ದಂತೆ, ನನಗೆ ಆಯಾಸ ಮತ್ತು ತಲೆಸುತ್ತು ಕಂಡಿತು. ನನ್ನ ಎದುರಿಗಿದ್ದ ನಿಸರ್ಗದ ದೃಶ್ಯ ಹಠಾತ್ತಾಗಿ ಕಾಣದಾಯಿತು. ಅದನ್ನು ಒಂದು ಬಿಳಿಬಟ್ಟೆಯಿಂದ ಮುಚ್ಚಿದಂತೆ ಆಯಿತು. ಆದರೆ ಒಂದರ ಮರೆ ಮತ್ತು ಇನ್ನೊಂದರ ದರ್ಶನ ನಿಧಾನವಾಗಿ ಆಯಿತು. ಅಂದರೆ, ಒಂದೇ ಸಮಯದಲ್ಲಿ ನಿಸರ್ಗದ ದೃಶ್ಯದ ಅಂಶವೂ, ಬಿಳುಪಿನ ಅಂಶವೂ ನನ್ನೆದುರಿಗೆ ಗೋಚರವಾದವು. ಆದರೆ ಕೂಡಲೇ ಪ್ರಕೃತಿಯ ದೃಶ್ಯ ಪೂರ್ತಿಯಾಗಿ ಅದೃಶ್ಯವಾಯಿತು. ನಾನು ನಡೆಯುವುದನ್ನು ನಿಲ್ಲಿಸಿದೆ. ಬಿಳಿಛಾಯೆ ಅದೃಶ್ಯವಾಗುತ್ತಲೆ ನಡಿಗೆ ಮುಂದುವರೆಸಿದೆ. ಎರಡನೆಯ ಸಲ ಹಾಗೆ ಆಯಿತು. ನನ್ನ ನಿಶ್ಯಕ್ತಿ ಹೆಚ್ಚಿತು. ಆದ್ದರಿಂದ ಆಸರೆಯಾಗಿ ನಾನು ಬಂಡೆಯ ಮೇಲೆ ಒರಗಿಕೊಳ್ಳಬೇಕಾಯಿತು. ಮೂರನೆಯ ಸಲ ಹಾಗಾದಾಗ, ನಾನು ಬಂಡೆಯ ಮೇಲೆ ಕುಳಿತೆ. ನನ್ನ ಸುತ್ತಲೂ ಬಿಳಿಬಟ್ಟೆಯ ತೆರೆಯಿತ್ತು.''

''ನನ್ನ ತಲೆ ಸುತ್ತುತ್ತಿತ್ತು. ರಕ್ತದ ಸಂಚಾರ ಮತ್ತು ಎದೆಯ ಬಡಿತ ನಿಂತವು. ಸತ್ತ ದೇಹಕ್ಕೆ ಆಗುವಂತೆ ನನ್ನ ದೇಹ ಕಪ್ಪು ಬಣ್ಣಕ್ಕೆ ತಿರುಗಲು ಪ್ರಾರಂಭವಾಯಿತು. ಕ್ರಮೇಣ ಅದು ಹೆಚ್ಚಾಗುತ್ತಿದ್ದಂತೆ, ನಾನು ನಿಜವಾಗಿ ಸತ್ತು ಹೋದೆನೆಂದು ಭಾವಿಸಿ ವಾಸು ಅಳುವುದಕ್ಕೆ ಪ್ರಾರಂಭಿಸಿ ನನ್ನನ್ನು ತಬ್ಬಿಕೊಂಡ. ನನ್ನ ದೇಹದ ಬಣ್ಣದಲ್ಲಿ ಬದಲಾವಣೆ, ವಾಸುವಿನ ಆಲಿಂಗನ, ಅವನ ದೇಹದ ನಡುಕ ಮತ್ತು ನನ್ನ ಸುತ್ತಲಿದ್ದ ಇತರರ ಮಾತುಕತೆ ಇವೆಲ್ಲದರ ಅರಿವು ನನಗಿತ್ತು. ನನ್ನ ಕೈಕಾಲುಗಳು ತಣ್ಣಗಾಗುತ್ತಿದ್ದುದು ಮತ್ತು ಎದೆಯ ಬಡಿತ ನಿಲ್ಲುತ್ತಿದ್ದುದೂ ನನಗೆ ಗೊತ್ತಾಗುತ್ತಿತ್ತು. ಆದರೆ ನನಗೆ ಸ್ವಲ್ಪವೂ ಭಯವಾಗಲಿಲ್ಲ. ನನ್ನ ಭಾವನೆಗಳ ಅರಿವು ಮತ್ತು ನನ್ನ ಆತ್ಮದ ಅರಿವು ಅಳಿದುಹೋಗಲಿಲ್ಲ. ನನ್ನ ದೇಹದ ಸ್ಥಿತಿಯ ಬಗ್ಗೆ ನನಗೆ ಸ್ವಲ್ಪವೂ ಚಿಂತೆಯಿರಲಿಲ್ಲ. ನಾನು ಪದ್ಮಾಸನದ ಭಂಗಿಯಲ್ಲಿ ಕುಳಿತಿದ್ದೆ ಹಿಂದಿದ್ದ ಬಂಡೆಯ ಮೇಲೆ ಒರಗಿರಲಿಲ್ಲ. ರಕ್ತ ಚಲನೆ ನಿಂತು ಹೋಯಿತು. ಆದರೆ ಆಸನಬಂಧ

ಅಂತೆಯೇ ಇತ್ತು. ಇದೆಲ್ಲ ಸುಮಾರು ಹದಿನೈದು ನಿಮಿಷಗಳ ಕಾಲ ಆಗಿತ್ತು.''

''ಹಠಾತ್ತನೆ ದೇಹದಲ್ಲೆಲ್ಲ ಚೈತನ್ಯ ತುಂಬಿತು. ರಕ್ತ ಸಂಚಾರ ಮತ್ತು ಎದೆಯ ಬಡಿತ ಪ್ರಾರಂಭವಾದವು. ಶರೀರದ ಕಪ್ಪು ಬಣ್ಣ ಹೊರಟುಹೋಯಿತು. ದೇಹದ ಎಲ್ಲ ರಂಧ್ರಗಳಿಂದಲೂ ಧಾರಾಕಾರವಾಗಿ ಬೆವರು ಸುರಿಯಲಾರಂಭಿಸಿತು. ನಾನು ಕಣ್ಣು ತೆರೆದು ಎದ್ದು ನಿಂತೆ. 'ಬನ್ನಿ, ಹೋಗೋಣ' ಎಂದೆ. ಹೆಚ್ಚಿನ ಯಾವ ಘಟನೆಯೂ ಇಲ್ಲದೆ ನಾವು ವಿರೂಪಾಕ್ಷ ಗುಹೆಯನ್ನು ತಲುಪಿದೆವು.

''ಆ ಸಂದರ್ಭದಲ್ಲಿ ಮಾತ್ರ ನನ್ನ ಹೃದಯ ಮತ್ತು ಉಸಿರಾಟ ಏಕಕಾಲದಲ್ಲಿ ತಮ್ಮ ಕೆಲಸ ನಿಲ್ಲಿಸಿದ್ದವು. ಉದ್ದೇಶಪೂರ್ವಕವಾಗಿ ಆ ಸ್ಥಿತಿಯನ್ನು ನಾನು ತಂದುಕೊಂಡಿರಲಿಲ್ಲ. ಸತ್ತ ತರುವಾಯ ಶರೀರ ಹೇಗೆ ಕಾಣಿಸುತ್ತದೆ ಎಂಬುದನ್ನು ನೋಡುವ ಅಪೇಕ್ಷೆಯೇನೂ ನನಗಿರಲಿಲ್ಲ. ಅಂತಹ ಅನುಭವಗಳು ನನಗೆ ಹಿಂದೆ ಆಗಿದ್ದವು. ಈ ಸಲ ಅದು ಇನ್ನೂ ಹೆಚ್ಚು ಸ್ಪಷ್ಟವಾಗಿ ಆಗಿತ್ತು, ಅಷ್ಟೆ.''

1948-50ರಲ್ಲಿ, ಅವರ ದೀರ್ಘವಾದ ಯಾತನಾಮಯವಾದ ಅಂತಿಮ ಅನಾರೋಗ್ಯದ ಕಾಲದಲ್ಲಿ ಮಹರ್ಷಿಗಳು ದೇಹದ ಬಗ್ಗೆ ಇದೇ ಬಗೆಯ ಪೂರ್ಣ ಅನಾಸಕ್ತಿಯನ್ನು ತೋರಿದರು ಎನ್ನಬಹುದು. ಪವಾಡಗಳು, ಉಜ್ವಲ ಜ್ಯೋತಿಯೊಂದರಲ್ಲಿ ದೇಹಗಳು ರಹಸ್ಯಮಯ ರೀತಿಯಲ್ಲಿ ಅದೃಶ್ಯವಾಗುವುದು ಮುಂತಾದ ಕತೆಗಳಲ್ಲಿನ ಆಸಕ್ತಿಗೆ ಅವರು ಪ್ರೋತ್ಸಾಹ ಕೊಡಲಿಲ್ಲ. ಆತ್ಮಜಿಜ್ಞಾಸೆಯ ಹಾದಿ ಕೆಲವು ವಿಶಿಷ್ಟ ವ್ಯಕ್ತಿಗಳಿಗೆ ಮಾತ್ರವಾಗಿರದೆ ಎಲ್ಲ ಜನರಿಗೂ ತೆರೆದಿದೆಯೆಂದು ಅವರು ಭಾವಿಸಿದ್ದರಿಂದ ಜ್ಞಾನಿಯ-ದೇಹವು ಇತರ ಯಾವುದೇ ದೇಹದಂತೆಯೇ ಎಲ್ಲ ದೇಹಗಳ ಗತಿಯಾದ ಕಾಯಿಲೆ ಮತ್ತು ನಾಶಕ್ಕೆ ಗುರಿಯಾಗುತ್ತದೆಂಬುದನ್ನು ತೋರಿಸಿದರು.

ಮಹರ್ಷಿಗಳ ಜೀವನದಲ್ಲಿ ಇನ್ನು ಯಾವುದೇ ಹೆಚ್ಚಿನ ಮಹತ್ವದ ಘಟನೆ ಸಂಭವಿಸಲಿಲ್ಲ. ತದನಂತರ ನಾಲ್ಕು ದಶಕಗಳಲ್ಲಿ ಅವರ ಕತೆ ಅವರ ಬಳಿಗೆ ಪ್ರತಿಯೊಬ್ಬನೂ ತನ್ನದೇ ಆದ ಸಮಸ್ಯೆ ಮತ್ತು ಪ್ರಶ್ನೆಗಳ ಸಹಿತ ಬರುತ್ತಿದ್ದ ಬಗೆಬಗೆಯ ಭಕ್ತರ ಮತ್ತು ಅನ್ವೇಷಕರ ಕತೆಯಾಗಿತ್ತು. ಜೀವನ್ಮುಕ್ತನ ಬದುಕು ಬೆಳಕಿಗಾಗಿ ಅಥವಾ ಶಾಂತಿಗಾಗಿ ಅವನತ್ತ ತಿರುಗುತ್ತಿದ್ದವರ ಸುಖ-ದುಃಖಗಳಲ್ಲಿ ನಿರಂತರವಾಗಿ ಪಾಲುಗೊಳ್ಳುವುದಷ್ಟೆ ಆಗಿತ್ತು.

# ಅಧ್ಯಾಯ 5

# ಸ್ಕಂದಾಶ್ರಮ: ತಾಯಿ

ಸಹಜವಾಗಿಯೇ ಮಹರ್ಷಿಗಳ ಬಳಿಗೆ ಬಂದು ಅವರ ಅನುಗ್ರಹವನ್ನು ಪಡೆದವರಲ್ಲಿ ಅವರ ತಾಯಿಯೂ ಒಬ್ಬರಾಗಿದ್ದರು.

1898 ರ ಕೊನೆಯಲ್ಲಿ ತಿರುವಣ್ಣಾಮಲೆಯಿಂದ ನಿರಾಶಳಾಗಿ ಮನೆಗೆ ಮರಳಿದ ತರುವಾಯ ಅಳಗಮ್ಮಾಳ್ ತನ್ನ ಹಿರಿಯ ಮಗ ನಾಗಸ್ವಾಮಿಯ ಮರಣದಿಂದ ಭಾರಿ ಆಘಾತ ಅನುಭವಿಸಿದಳು. ಕಾಶಿಯಾತ್ರೆಗೆ ಹೋದಾಗ ಒಮ್ಮೆ ತನ್ನ ಸಂನ್ಯಾಸಿ ಮಗನನ್ನು ನೋಡಿದಳು. 1914ರಲ್ಲಿ ಮತ್ತೊಮ್ಮೆ ತಿರುಪತಿ ಯಾತ್ರೆಗೆ ಹೋದಾಗ ನೋಡಿದಳು. ಈ ಎರಡನೆ ಸಲ ಆಕೆ ಕಾಯಿಲೆ ಬಿದ್ದು ಎರಡು ಅಥವಾ ಮೂರು ವಾರ ಜ್ವರದಿಂದ ನರಳಿದಳು. ಆ ಸಮಯದಲ್ಲಿ ಮಹರ್ಷಿ ಆಕೆಯನ್ನು ಗುಣಪಡಿಸೆಂದು ಅವರು ಶಿವನಿಗೆ ಒಂದು ಸ್ತೋತ್ರ ರಚಿಸಿದರು. ಅದರ ನಾಲ್ಕು ಶ್ಲೋಕಗಳಲ್ಲಿ ಮೂರನೆಯದು ಸ್ವಲ್ಪ ಸಂದಿಗ್ಧವಾಗಿದೆ:

ಅರುಣಾಚಲ, ನೀನೊಂದು ಉಜ್ವಲವಾದ ಜ್ಞಾನ ಜ್ಯೋತಿ.
ನಿನ್ನ ಜ್ಯೋತಿಯಲ್ಲಿ ನನ್ನ ತಾಯಿಯನ್ನು ಆವರಿಸಿ ನಿನ್ನಲ್ಲಿ
ಅವಳನ್ನು ಐಕ್ಯ ಮಾಡಿಕೊ.

ಆಗ ದಹನಸಂಸ್ಕಾರದ ಅಗತ್ಯವಾದರೂ ಯಾವುದಿರುತ್ತದೆ? ವಾಸ್ತವದಲ್ಲಿ ಅದು ಅವಳನ್ನು ಮಾಯೆಯ ಜ್ವರದಿಂದ ರಕ್ಷಿಸಿ ಏಕತ್ವದಲ್ಲಿ ಮತ್ತೆ ಲೀನವಾಗಿಸುವ ಪ್ರಾರ್ಥನೆಯಾಗಿತ್ತು.

ಅದ್ವೈತಿ ಸಂನ್ಯಾಸಿಯೊಬ್ಬರು ಇನ್ನೊಬ್ಬರ ಪರವಾಗಿ ಸ್ಪಷ್ಟವಾಗಿ ಪ್ರತ್ಯಕ್ಷವಾಗಿ ಕಾಣುವ ಬೆಟ್ಟದ ದೇವರೊಂದಕ್ಕೆ ಪ್ರಾರ್ಥನೆ ಸಲ್ಲಿಸುವುದರ ವಿರೋಧಾಬಾಸವನ್ನು ಜಿ. ರಾಮಸ್ವಾಮಿ ಪಿಳ್ಳೆ ಎಂಬ ಭಕ್ತರೊಬ್ಬರು ಅದೇ ವೆನ್ಬವೃತ್ತದ ಪದ್ಯವೊಂದರಲ್ಲಿ ಒತ್ತಿ ಹೇಳಿದ್ದಾರೆ.

ತಾವೇ ವಿಶ್ವದ ತಾಯಿಯಾಗಿರುವ, ಅರುಣದ ರಮಣರು
ತಮ್ಮ ತಾಯಿಯ ವೇದನೆಯನ್ನು ಸಹಿಸಲಾರದೆ,
ಆತ್ಮದ ಪರ್ವತದಿಂದ
ಆತ್ಮದ ಅನುಗ್ರಹ ಹರಿದು ಬಂದಿತೋ ಎಂಬಂತಿರುವ ಈ ನಾಲ್ಕು
ಶ್ಲೋಕಗಳ ರೂಪದಲ್ಲಿ
ಆಕೆಯ ಪುನರಾರೋಗ್ಯಕ್ಕಾಗಿ ಪ್ರಾರ್ಥನೆ ಮಾಡುತ್ತಾರೆ.

ಅಳಗಮ್ಮಾಳ್ ಗುಣಹೊಂದಿ ಮಾನಮಧುರೆಗೆ ವಾಪಸಾದರು. ಆದರೆ ಒಂದೆರಡು ವರ್ಷಗಳಲ್ಲೇ ಅವರ ಭಾವ ನೆಲ್ಲಿಯಪ್ಪ ಕಾಲವಾದರು. ಜೊತೆಗೆ ಆಕೆಯ ಕೊನೆಯ ಮಗ ನಾಗಸುಂದರಂನ ಹೆಂಡತಿಯೂ ಎಳೆಯ ಗಂಡುಮಗುವೊಂದನ್ನು ಬಿಟ್ಟು ತೀರಿಕೊಂಡಳು.

ತನ್ನ ಬದುಕಿನ ಕೊನೆ ವರ್ಷಗಳನ್ನು ಸಂನ್ಯಾಸಿ ಮಗನ ಜೊತೆಯಲ್ಲಿ ಕಳೆಯಬೇಕೆಂದು ಆಕೆಗೆ ಈಗ ಅನಿಸಿತು. ಆಗ ವಿರೂಪಕ್ಷ ಗುಹೆಯಲ್ಲಿದ್ದ ಅವರೊಡನೆ ಇರಲು ಆಕೆ 1916ರಲ್ಲಿ ಬಂದಾಗ, ಮಹರ್ಷಿ ಬೇರೆ ಕಡೆಗೆ ಹೊರಟು ಹೋಗಬಹುದೆಂದು ಕೆಲವರು ಹೆದರಿದರು. ಆದರೆ ಅವರು ಈಗ ತಮ್ಮ ಮಾನವ ಸಂಬಂಧಗಳಲ್ಲಿ ಪೂರ್ಣವಾಗಿ ಸಹಜಸ್ಥಿತಿ ಹೊಂದಿದ್ದರು. ತಮ್ಮ ತಾಯಿಯನ್ನು ಆಶ್ರಮದ ಕುಟುಂಬದ ಒಬ್ಬ ವ್ಯಕ್ತಿಯನ್ನಾಗಿ ಸ್ವೀಕರಿಸಿದರು. ಆಕೆಯ ಕೊನೆಯ ಮಗ ನಾಗಸುಂದರಂ ಕೂಡ ಸ್ವಲ್ಪ ಕಾಲದ ತರುವಾಯ ಬಂದು ಸೇರಿದ. ಆತ ಮಹರ್ಷಿಯನ್ನು ಹಿಂದೆ ಸಂದರ್ಶಿಸಿದ್ದ. ನಿರಂಜನಾನಂದ ಎಂಬ ಹೆಸರಿನಿಂದ ಸಂನ್ಯಾಸಿಯಾಗಿ ಆಶ್ರಮದ ವ್ಯವಹಾರಗಳನ್ನು ನೋಡಿಕೊಳ್ಳಲು ಪ್ರಾರಂಭಿಸಿದ.

ಮಗನ ವಿಷಯದಲ್ಲಿ ತಾಯಿಯ ಪ್ರೀತಿ ಅನೇಕ ಬಗೆಗಳಲ್ಲಿ ವ್ಯಕ್ತವಾಯಿತು. ಆಕೆಯ ಮರಣದ ತರುವಾಯ ಅವರು ನೆನಪಿಸಿಕೊಂಡರು: ''ನಾನು ಬೇಡ ಬೇಡ ಎನ್ನುತ್ತಿದ್ದರೂ ನನ್ನ ತಾಯಿ ನಿಧಾನವಾಗಿ ಅಡಿಗೆ ಪ್ರಾರಂಭಿಸಿದಳು. ಮೊದಲು ತರಕಾರಿ, ಆಮೇಲೆ ಸಾರು, ಹೀಗೆಯೇ ಶುರುವಾಯಿತು. 'ಅವನಿಗೆ ಈ ತರಕಾರಿ ಇಷ್ಟ, ಆ ಹಣ್ಣು ಇಷ್ಟ' ಎನ್ನುತ್ತಾ ಏನನ್ನಾದರೂ ತರುತ್ತಿದ್ದಳು. ನನ್ನ ತೋಳಿನಲ್ಲೇ ಸಾಯಬೇಕೆನ್ನುವುದು ಅವಳ ಮುಖ್ಯ ಅಪೇಕ್ಷೆಯಾಗಿತ್ತು. ನನ್ನ ತಂಗಿ ಅಲಮೇಲು ಮಾನಮಧುರೆಯ ಹತ್ತಿರದ ಅವಳ ಹಳ್ಳಿಯಲ್ಲಿ ಹೊಸಮನೆಯೊಂದನ್ನು ಕಟ್ಟಿದಾಗ ಅಲ್ಲಿಗೆ ಬಂದು ಅದನ್ನು ನೋಡಲು ತಾಯಿಯನ್ನು ಗೋಗರೆದಳು. ಆ ಮನೆಯೊಳಗೆ ತಾಯಿ ಒಂದೇ ಹೆಜ್ಜೆಯಿಟ್ಟರೂ ಸಾಕೆಂದು ಹೇಳಿದಳು. ಆದರೆ ತಾಯಿ ಒಪ್ಪಲಿಲ್ಲ. ಅಲ್ಲಿ ಕಾಯಿಲೆ ಬಿದ್ದು ವಾಪಸು ಬರಲು ಆಗದಿರಬಹುದೆಂದು ಆಕೆ ಹೆದರಿದಳು. 'ನನ್ನ ಹೆಣವನ್ನು ಈ ಮುಳ್ಳಿನ ಪೊದೆಗಳಲ್ಲಿ ನೀನು ಎಸೆದುಬಿಟ್ಟರೂ ಸರಿ, ನಾನು ಯೋಚನೆ ಮಾಡುವುದಿಲ್ಲ. ಆದರೆ ನಾನು ನಿನ್ನ ತೋಳಿನಲ್ಲೇ ಪ್ರಾಣ ಬಿಡಬೇಕು' ಎನ್ನುತ್ತಿದ್ದಳು.''

ಸ್ವಲ್ಪಸ್ವಲ್ಪವಾಗಿ ಅವರು ತಾಯಿಯನ್ನು ಸಾಂಪ್ರದಾಯಿಕ ಆಚಾರಗಳಿಂದ ಮತ್ತು ಮಹರ್ಷಿಯೊಬ್ಬರ ತಾಯಿಯೆಂಬ ಮಹತ್ವದ ಭಾವನೆಯಿಂದ ಬಿಡಿಸಿ, ಆಕೆಯನ್ನು ಅಂತಿಮ ವಿಮೋಚನೆಗೆ ಸಿದ್ಧಗೊಳಿಸಿದರು.

ಒಂದು ರಾತ್ರಿ ಆಕೆ ಹಪ್ಪಳ ಮಾಡಲು ಪ್ರಾರಂಭಿಸಿ ಆ ಕೆಲಸದಲ್ಲಿ ಸಹಾಯ ಮಾಡಲು ತನ್ನ ಮಗನನ್ನು ಕರೆದರು. ಇಂಥ ಭೋಗಗಳಲ್ಲಿ ಆಕೆ ತೊಡಗುವುದನ್ನು ಅವರು ಒಪ್ಪಲಿಲ್ಲ. ಆದರೆ ಪ್ರಸಿದ್ಧವಾದ ಹಪ್ಪಳದ ಹಾಡನ್ನು ರಚಿಸಲು ಆ ಸಂದರ್ಭವನ್ನು ಬಳಸಿಕೊಂಡರು. ಅದು ಆಕೆಗೆ ಗೊತ್ತಿದ್ದ ಮತ್ತು ಆಕೆ ಹಾಡುತ್ತಿದ್ದ ಅನ್ನದ ಹಾಡು, ಸಾರಿನ ಹಾಡು ಮತ್ತು ವೇದಾಂತದ ಅರ್ಥಗಳನ್ನೊಳಗೊಂಡಿದ್ದ ಅಂಥ ಇತರ ಸರಳ ಹಾಡುಗಳಿಗೆ ಮುಕುಟ-ವಾಗಿತ್ತು. ಈ ಹಾಡನ್ನು ರಚಿಸಿದ ಸ್ವಲ್ಪ ಕಾಲದ ತರುವಾಯ ಮಹರ್ಷಿಗಳು ಗಿರಿಪ್ರದಕ್ಷಿಣೆಯ ಕಾಲದಲ್ಲಿ ಭಕ್ತರಿಗೆ ಅದರ ಅಂತರಾರ್ಥವನ್ನು ತಾವೇ ವಿವರಿಸಿದರು. ಅದರ ಪ್ರತಿಯೊಂದು ಅಭಿಪ್ರಾಯಕ್ಕೂ, ಪ್ರತಿಮೆಗೂ ಅನೇಕ ಪ್ರಮಾಣಗಳನ್ನು ಉದ್ಧರಿಸಿದರು. ಆ ವಿವರಣೆಯು ಮುಗಿಯುವುದಕ್ಕೆ ಮುಂಚೆಯೇ ಅವರು ಬೆಟ್ಟದ ಪ್ರದಕ್ಷಿಣೆಯನ್ನು ಮುಗಿಸಿದ್ದರು. ಆ ಹಾಡಿನ ವಿಷಯ ಹೀಗಿದೆ:

''ಉದ್ದಿನ ಬೇಳೆಯನ್ನು ಬೀಸುವಕಲ್ಲಿನಲ್ಲಿ ಬೀಸಿ, ಮಂಗರವಳ್ಳಿ ರಸ ಸೇರಿಸಿ, ಕುಟ್ಟಿ,

ಲಟ್ಟಿಸಿ, ಒತ್ತಿ, ಕರಿದು ತಿನ್ನುವಂತೆ, ದೇಹಭೂಮಿಯಲ್ಲಿ ಬೆಳೆದ ನಾನು ಎನ್ನುವುದನ್ನು ಆತ್ಮವಿಚಾರವೆಂಬ ಬೀಸುವಕಲ್ಲಿನಲ್ಲಿ ಹಿಟ್ಟು ಮಾಡಿ, ಸಜ್ಜನರೊಡನೆ ಸೇರಿಸಿ, ಭಕ್ತಿಯಲ್ಲಿ ಮೆದುಗೊಳಿಸಿ ಒತ್ತಿ, ಕರಿದು ಆತ್ಮಕ್ಕೆ ತಿನ್ನಿಸಬೇಕು. ಹೀಗೆ ರುಚಿಕರವಾದ ಭಕ್ಷ್ಯವನ್ನು ಮಾಡುವ ಮತ್ತು ತಿನ್ನುವ ಪ್ರತಿಯೊಂದು ಹಂತವೂ ಯಾವುದೋ ಸಾಧನೆಯ ಸಂಕೇತವಾಗಿರುವಂತೆ ಮಾಡಲ್ಪಟ್ಟಿದೆ. ಚಿರಪರಿಚಿತವಾದ ಇಡೀ ಕಾರ್ಯಕ್ರಮ ಒಂದು ಬಗೆಯ ಸರಳ ದೀಕ್ಷೆಯಾಗುತ್ತದೆ.''

ಆಶ್ರಮವಾಸಿಗಳಿಗೆ ಮತ್ತು ಸಂದರ್ಶಕರಿಗೆ ತಾಯಿ ಅಡಿಗೆ ಮಾಡಲು ಪ್ರಾರಂಭಿಸಿದರು. ಸ್ವಲ್ಪ ಕಾಲದಲ್ಲೇ ಇನ್ನೂ ವಿಶಾಲವಾದ ವಸತಿಯ ಅಗತ್ಯ ಕಂಡುಬಂದಿತು. ಬೆಟ್ಟದ ಮೇಲೆ ಇನ್ನೂ ಸ್ವಲ್ಪ ಮೇಲುಗಡೆ ಇದನ್ನು ಏರ್ಪಡಿಸಲಾಯಿತು. ಶ್ರಮಪಟ್ಟು ದುಡಿಯುತ್ತಿದ್ದ ಕಂದಸ್ವಾಮಿ ಎಂಬ ಕಟ್ಟಾಭಕ್ತನೊಬ್ಬ ಇದನ್ನು ಮಾಡಿದನು. ಕೆಲವು ಕೂಲಿಗಳ ಸಹಾಯದಿಂದ ಆತ ಮುಳ್ಳುಗಿಡಗಳನ್ನು ತೆಗೆದುಹಾಕಿ, ಕಲ್ಲು ಮತ್ತು ಬಂಡೆಗಳನ್ನು ಸಮ ಮಾಡಿ, ತೋಟವನ್ನು ಬೆಳೆಸಿ, 1917ರಲ್ಲಿ ಒಂದು ಆಶ್ರಮವನ್ನು ಕಟ್ಟಿದನು. ಕಟ್ಟಿದವನ ಹೆಸರನ್ನು ಸಂಸ್ಕೃತೀಕರಿಸಿದ ರೂಪದಿಂದ ಅದು 'ಸ್ಕಂದಾಶ್ರಮ' ಎಂದು ಪ್ರಸಿದ್ಧವಾಯಿತು.

ಸ್ಕಂದಾಶ್ರಮವನ್ನು ಕಟ್ಟುತ್ತಿದ್ದಾಗ, ಭಕ್ತರು ತಮಗೆ ಮತ್ತು ಕೆಲಸಗಾರರಿಗೆ ಅಡಿಗೆ ಮಾಡುತ್ತಿರುವಾಗ, ಮಹರ್ಷಿ ಅವರೊಡನೆ ಕೂಡಿಕೊಳ್ಳುತ್ತಿದ್ದರು. ಅನಂತರ ಅವರು ದೇವರಾಜ ಮುದಲಿಯಾರ್‌ಗೆ ಹೇಳಿದರು: ''ಮೊದಲಿಗೆ ಆ ಜಾಗದಲ್ಲಿ ಬಹಳ ಜನ ಕೆಲಸಮಾಡುತ್ತಿದ್ದರು. ಅಲ್ಲಿದ್ದ ಪಾಪಾಸುಕಳ್ಳಿ ತೆಗೆದು ನೆಲವನ್ನು ಸಮಮಾಡುತ್ತಿದ್ದರು. ನಾವು ಅವರಿಗೆ ಕೂಲಿಯ ಜೊತೆಗೆ ಮಧ್ಯಾಹ್ನದ ಊಟವನ್ನೂ ಕೊಡುತ್ತಿದ್ದೆವು. ಅವರಿಗೆ ಮತ್ತು ನಮಗೆ ಎರಡೇ ಬಗೆಯ ಅಡಿಗೆಯನ್ನು ಒಟ್ಟಿಗೇ ತಯಾರಿಸುತ್ತಿದ್ದೆವು: ಒಂದು ದೊಡ್ಡ ಹಂಡೆ ಗಂಜಿ ಮತ್ತು ನಮ್ಮ ಹತ್ತಿರವಿದ್ದ ಎಲ್ಲ ತರಕಾರಿಗಳ ಇನ್ನೊಂದು ತಪ್ಪಲೆ. ಅದನ್ನು ಕೆದಕಲು ನಾವು ಬಳಸುತ್ತಿದ್ದ ಸೌಟು ಮರದ ಒಂದು ಕೊಂಬೆಯಾಗಿತ್ತು ಎಂದು ನಾನು ಹೇಳಿದರೆ ಅದರ ಪ್ರಮಾಣ ಎಷ್ಟಿರುತ್ತಿತ್ತು ಎಂಬುದನ್ನು ನೀನು ಊಹಿಸಿಬಹುದು.''

ಸ್ಕಂದಾಶ್ರಮದ ಬಾಗಿಲಲ್ಲಿ ಮೆಟ್ಟಿಲುಗಳ ಮೇಲೆ ಮಹರ್ಷಿಯೊಡನೆ ತಾನೊಬ್ಬನೇ ಕುಳಿತಿದ್ದಾಗ ನಡೆದ ಘಟನೆಯೊಂದನ್ನು ಇನ್ನೊಬ್ಬ ಭಕ್ತ ವರ್ಣಿಸಿದ್ದಾನೆ. ''ಒಬ್ಬ ಮನುಷ್ಯ ತನ್ನ ಕುಟುಂಬದೊಡನೆ ಬಾಗಿಲಿನ ಬಳಿಗೆ ಬಂದು, ಅಲ್ಲೇ ನಿಂತುಕೊಂಡು ನನ್ನನ್ನು ಕರೆದ. ನಾನು ಅವನ ಹತ್ತಿರ ಹೋದಾಗ ಅವರ ಗೌರವ ಅರ್ಪಿಸಲು ಸ್ವಾಮಿಗಳ ಹತ್ತಿರಕ್ಕೆ ಬರಬಹುದೇ ಎಂದು ಸ್ವಾಮಿಗಳನ್ನು ಕೇಳಿ ಎಂದು ಕೋರಿದ. ನನಗೆ ಆಶ್ಚರ್ಯವಾಗಿ, 'ಅಪ್ಪಣೆ ಏಕೆ ಕೇಳುತ್ತೀಯೇ?' ಎಂದು ಕೇಳಿದೆ. 'ನಾವು ಅಸ್ಪೃಶ್ಯರು' ಎಂದು ಆತ ಉತ್ತರ ನೀಡಿದ. ಭಗವಾನರ ಹತ್ತಿರ ಜಾತಿಗೆ ಯಾವ ಅರ್ಥವೂ ಇರಲಿಲ್ಲವೆಂದೂ, ಅವರು ಬರಬಹುದೆಂದೂ ನಾನು ಆತನಿಗೆ ತಿಳಿಸಿದೆ. ಇಡೀ ಪರಿವಾರ ಬಂದು ಭಗವಾನರಿಗೆ ಅಡ್ಡಬಿದ್ದರು. ಆ ಅಸ್ಪೃಶ್ಯ ಮತ್ತು ಆತನ ಕುಟುಂಬದ ಮೇಲೆ ಭಗವಾನರ ಅನುಗ್ರಹ ದೃಷ್ಟಿ ಸುಮಾರು ಹತ್ತು ನಿಮಿಷಗಳ ಕಾಲ ನೆಲೆಸಿದ್ದುದು ನನಗೆ ಚೆನ್ನಾಗಿ ನೆನಪಿದೆ. ಎಷ್ಟು ಜನ ಶ್ರೀಮಂತರು ಮತ್ತು ಪ್ರಸಿದ್ಧ ವ್ಯಕ್ತಿಗಳು ಅವರ ಕಾಲಿಗೆ ಬಿದ್ದೂ ಅಂತಹ ಅನುಗ್ರಹ ಪಡೆಯದೆ ಹೋಗಿದ್ದನ್ನು ನಾನು ಕಂಡಿಲ್ಲ!''

ಕೇರಳದ ಪ್ರಸಿದ್ಧ ಸಂತರೂ ಸಮಾಜ ಸುಧಾರಕರೂ ಆದ ಶ್ರೀ ನಾರಾಯಣಗುರುಗಳು ಮಹರ್ಷಿಯನ್ನು ಸ್ಕಂದಾಶ್ರಮದಲ್ಲಿ ಭೇಟಿಮಾಡಿದರು. ಅವರಿಬ್ಬರು ನಡುವೆ ಯಾವ ಮಾತುಕತೆಯೂ ನಡೆಯಲಿಲ್ಲ. ಅಗಲವಾಗಿ ಕಣ್ಣು ತೆರೆದು ಎವೆಯಿಕ್ಕದ ಮಹರ್ಷಿ ಕುಳಿತಿದ್ದಂತೆ ಅವರಿಬ್ಬರ ನಡುವೆ ಮೌನ ಸಂವಾದದ ಪ್ರಬಲ ಪ್ರವಾಹ ಮಾತ್ರ ಹರಿಯುತ್ತಿತ್ತು. ಅನೇಕಾನೇಕ ಭಕ್ತರು ಒಳಕ್ಕೆ ಬಂದು ತಮ್ಮ ಗೌರವ ಸಲ್ಲಿಸಿ ಹೊರಟುಹೋಗುತ್ತಿದ್ದರು. ಶ್ರೀನಾರಾಯಣ-ಗುರುಗಳು ಮಹರ್ಷಿ ಮತ್ತು ಆಶ್ರಮವಾಸಿಗಳೊಡನೆ ಊಟ ಮಾಡಿದರು. ತಮ್ಮ ಊರಿಗೆ ಮರಳಿದ ಮೇಲೆ 'ನಿವೃತ್ತಿ ಪಂಚಕ' ಎಂಬ ಮುಕ್ತನ ಆನಂದವನ್ನು ವರ್ಣಿಸುವ ಐದು ಸಂಸ್ಕೃತ ಶ್ಲೋಕಗಳನ್ನು ರಚಿಸಿ ರಮಣಮಹರ್ಷಿಗಳಿಗೆ ಅವನ್ನು ಕಳುಹಿಸಿಕೊಟ್ಟರು.

ಸ್ಕಂದಾಶ್ರಮದಲ್ಲಿ ಇತರ ಭಕ್ತರ ಸೇವೆ ಮಾಡುತ್ತ ಭಕ್ತೆಯಾಗಿ ಇದ್ದ ಅಳಗಮ್ಮಾಳ್ 1922ರ ಮೇ 19ರಂದು (ವೈಶಾಖ ಬಹುಳ ನವಮಿ) ಕಾಲವಾದಳು. ಕೊನೆಯ ಗಳಿಗೆಗಳಲ್ಲಿ ಭಕ್ತರು ಅವಳ ಸುತ್ತಲೂ ಕುಳಿತು ವೇದಗಳನ್ನು ಪಠಿಸುತ್ತ, ರಾಮನಾಮ ಜಪಿಸುತ್ತ ಇದ್ದರು. ಮಹರ್ಷಿ ಆಕೆಯ ಎದೆಯ ಮೇಲೆ ತಮ್ಮ ಬಲಗೈಯನ್ನೂ, ತಲೆಯ ಮೇಲೆ ತಮ್ಮ ಎಡಗೈಯನ್ನೂ ಇಟ್ಟು ಪಕ್ಕದಲ್ಲಿ ಕುಳಿತಿದ್ದರು. ಆ ಸಾಧ್ವಿ ಮಹಾಸಮಾಧಿಯನ್ನು ಪಡೆದರು ಅಥವಾ ಬ್ರಹ್ಮದಲ್ಲಿ ಲೀನವಾದರು ಎಂದು ಭಾವಿಸಿದ್ದರಿಂದ ಆಕೆಯ ದೇಹವನ್ನು ದಹಿಸದೆ ಬೆಟ್ಟದ ಬುಡದಲ್ಲಿ ಪಳಿತೀರ್ಥದ ಹತ್ತಿರ ಒಂದು ಜಾಗದಲ್ಲಿ ಸಮಾಧಿ ಮಾಡಿದರು. ಅದರ ಸುತ್ತ ಎದ್ದ ದೇವಸ್ಥಾನ 1948ರಲ್ಲಿ ಪೂರ್ಣವಾಯಿತು. ಸಾಂಪ್ರದಾಯಿಕ ಹಿಂದೂಕರ್ಮಗಳ ಪ್ರಕಾರ ಅಲ್ಲಿ ಮಾತೃಭೂತೇಶ್ವರನಿಗೆ (ಮಾತೆಯ ರೂಪದಲ್ಲಿರುವ ದೇವರಿಗೆ) ಪ್ರತಿನಿತ್ಯವೂ ಪೂಜೆ ನಡೆಯುತ್ತಿದೆ. ತಾಯಂದಿರು ಎಲ್ಲೆಡೆಯೂ ಮಾನವಕುಲದ ಅತ್ಯಂತ ಗೌರವಕ್ಕೆ ಅರ್ಹರಾಗಿಯೂ, ಬಹಳ ಪ್ರಮಾಣದಲ್ಲಿ ಅದನ್ನು ಪಡೆಯುವವರೂ ಆಗಿರುವುದರಿಂದ ತಮ್ಮ ಪೂರ್ವಜರ ಧರ್ಮದೊಂದಿಗೆ ಮಹರ್ಷಿಯ ಅತ್ಯಂತ ಬಲವಾದ ಸಂಬಂಧವು ಮಾತೃತ್ವದ ಗೌರವಾರ್ಥವಾಗಿ ಸಾಂಪ್ರದಾಯಿಕ ಶೈಲಿಯಲ್ಲಿ ಕಟ್ಟಿ ನಡೆಸುತ್ತಿರುವ ದೇವಸ್ಥಾನವಾಗಿರುವುದು ಉಚಿತವಾಗಿಯೇ ಇದೆ.

ದೇವತಾಮಂದಿರಗಳು, ಮಾಡಗಳು ಮತ್ತು ರೂಢ ಕರ್ಮಾಚರಣೆಗಳಿಂದ ಕೂಡಿ, ಸಂಪ್ರದಾಯದಿಂದ ಶ್ರೀಮಂತವಾಗಿರುವ ದೇವಸ್ಥಾನದಲ್ಲಿ ಭಕ್ತರು ಮಾತಾಪಿತೃಗಳ ತಾದಾತ್ಮ್ಯವನ್ನು ಅವರಿಬ್ಬರೂ ಮಾತೃಶಕ್ತಿಯೊಡನೆ ಏಕೀಕರಿಸಿದ್ದ ಮೂರ್ತಿರೂಪದ ಮೂಲಕ ಅನುಭವಿಸಿದರೆ, ಮಾತೃಭೂತೇಶ್ವರನ ಬಿಂಬದಲ್ಲಿ ಅವರು ಸ್ವತಃ ಮಹರ್ಷಿಗಳ ಮಾತೃಸದೃಶ ಅನುಕಂಪವನ್ನು ಕಾಣುತ್ತಾರೆ. ಅದರ ಪಕ್ಕದಲ್ಲಿ, ಮಹರ್ಷಿಗಳ ಸಮಾಧಿಯ ಮೇಲೆ 1967-70ರಲ್ಲಿ ಕಟ್ಟಿದ ಧ್ಯಾನಮಂದಿರವು ಗಾಳಿಬೆಳಕುಗಳಿಂದ ತುಂಬಿದ ವೈಶಾಲ್ಯ ಮತ್ತು ಸರಳತೆಗಳಿಂದ ದೇವಸ್ಥಾನದ ಸಾಂಪ್ರದಾಯಿಕ ಸಂಕೀರ್ಣತೆಗೆ ಸ್ಪಷ್ಟವಾದ ವ್ಯತ್ಯಾಸವನ್ನು ತೋರಿಸುತ್ತದೆ. ಅವೆರಡೂ ಒಟ್ಟಿನಲ್ಲಿ ಧಾರ್ಮಿಕ ಅನುಭವದ ಎರಡು ಪ್ರಧಾನ ಮಾರ್ಗಗಳಿಗೆ ನಿದರ್ಶನವಾಗಿದೆ: ತಾಯಿಯೆಂದು ಆದರಿಸಿದ ಮತ್ತು ತಾಯಿಯ ಮೂಲಕ ದೊರೆತ ಗತಕಾಲದ ಆಸ್ತಿಯಾದ ಭಕ್ತಿ ಮತ್ತು ಮಗನು ಧೈರ್ಯದಿಂದ ಉದ್ಘೋಷಿಸಿದ, ಇನ್ನೂ ಸ್ಪಷ್ಟ ಆಕಾರ ತಾಳದ, ಭವಿಷ್ಯತ್ಕಾಲದ ಹೊಸ ಬೆಳಕಾದ ಜ್ಞಾನ.

# ಅಧ್ಯಾಯ 6

# ರಮಣಾಶ್ರಮ: ಬೆಳವಣಿಗೆ

1922ರ ಮೇ ತಿಂಗಳಲ್ಲಿ ತಾಯಿ ಸ್ಕಂದಾಶ್ರಮದಲ್ಲಿ ನಿಧನರಾದರು. ಆ ಆಶ್ರಮ 1916ರಿಂದ ಮಹರ್ಷಿಗಳ ನಿವಾಸವಾಗಿತ್ತು. ಅರುಣಾಚಲದ ದಕ್ಷಿಣ ತಪ್ಪಲಿನಲ್ಲಿ ಭಕ್ತನೊಬ್ಬನು ದಾನಮಾಡಿದ್ದ ಜಾಗವೊಂದರಲ್ಲಿ ಆಕೆಯ ದೇಹವನ್ನು ಸಮಾಧಿ ಮಾಡಿದ್ದು ಬೀಜವೊಂದನ್ನು ನೆಟ್ಟಂತೆ ಮತ್ತು ಕುಟುಂಬವೊಂದನ್ನು ಸ್ಥಾಪಿಸಿದಂತೆ ಆಯಿತು. ಅನಂತರದ ತಿಂಗಳುಗಳಲ್ಲಿ ಮಹರ್ಷಿ ತಾಯಿಯ ಸಮಾಧಿಗೆ ಮತ್ತೆ ಮತ್ತೆ ಭೇಟಿ ಕೊಟ್ಟರು. ತರುವಾಯ 1922ರ ಡಿಸೆಂಬರಿನಲ್ಲಿ ಇಂಥ ಒಂದು ಭೇಟಿಯ ನಂತರ ಅವರು ಸ್ಕಂದಾಶ್ರಮಕ್ಕೆ ಹಿಂದಿರುಗಲಿಲ್ಲ. ಬೆಟ್ಟದ ಬುಡದಲ್ಲಿ ಸಮಾಧಿಯ ಪಕ್ಕದಲ್ಲೇ ಉಳಿದರು. ಹೀಗೆ ಈ ಸ್ಥಳವು ತದನಂತರದಲ್ಲಿ ಅವರ ಶಾಶ್ವತ ನಿವಾಸವಾಯಿತು ಮತ್ತು ಈಗ ಪ್ರಸಿದ್ಧವಾಗಿರುವ ಶ್ರೀರಮಣಾಶ್ರಮವಾಗಿ ಬೆಳೆಯಿತು.

ಹೀಗೆ ಅನೌಪಚಾರಿಕವಾಗಿ ಅಸ್ತಿತ್ವಕ್ಕೆ ಬಂದ ಆಶ್ರಮವು ಒಂದು ಹುಲ್ಲು ಜೋಪಡಿಯಿಂದ ಪ್ರಾರಂಭವಾಯಿತು. ಆದರೆ ಅದು ಈಗ ಅನೇಕ ಕಟ್ಟಡಗಳ ಸಾಕಷ್ಟು ದೊಡ್ಡ ತಂಡವಾಗಿ ಬೆಳೆದಿದೆ. ಅನೇಕ ಸಾಧಕರ ಪ್ರಕಾರ, ಅವುಗಳಲ್ಲಿ ಬಹಳ ಮುಖ್ಯವಾದುದು ಹಳೆಯ ಹಜಾರ. ಅಲ್ಲಿ ಮಹರ್ಷಿ ಇಪ್ಪತ್ತು ವರ್ಷಗಳಿಗೂ ಮೀರಿ ದಿನವಿಡೀ ತಮ್ಮ ಮಂಚದ ಮೇಲೆ ಕುಳಿತಿರುತ್ತಿದ್ದರು. ಅನುರಣಿಸುವ ಮೌನವೊಂದು ಅಲ್ಲಿ ''ಮಾತುಗಳಿಗೆ ಮೀರಿದ ಶಕ್ತಿ ಮತ್ತು ನಿಷ್ಪೃಷ್ಟತೆಗಳಿಂದ'' ನಮ್ಮ ಹೃದಯವನ್ನು ತಟ್ಟುತ್ತದೆ.

ಮಹರ್ಷಿಗಳ ಜೀವಿತಕಾಲದಲ್ಲಿ ಆದ ಇತರ ಕಟ್ಟಡಗಳು ಅಡಿಗೆ ಮನೆ, ದೊಡ್ಡ ಊಟದ ಅಂಗಳ, ಗೋಶಾಲೆ ಮತ್ತು ಮಾತೆಯ ಸಮಾಧಿಯ ಮೇಲೆ ಕಟ್ಟಿದ ಸುಂದರ ದೇವಾಲಯ. ಆಶ್ರಮವನ್ನು ಕಟ್ಟುವುದಕ್ಕೆ ಮತ್ತು ಅದರ ಕಾರ್ಯಕ್ರಮಗಳ ವ್ಯವಸ್ಥೆಗೆ ಮುಖ್ಯವಾಗಿ ಕಾರಣರಾದವರು ಮಹರ್ಷಿಯ ತಮ್ಮ, ಸ್ವಾಮಿ ನಿರಂಜನಾನಂದರು. ಇವರು ಚಿನ್ನಸ್ವಾಮಿ ಎಂದೂ ಪರಿಚಿತರಾಗಿದ್ದರು. ಕಾರ್ಯಕ್ರಮಗಳನ್ನು ಅವರು ಎಷ್ಟು ಸಮರ್ಥವಾಗಿ ವ್ಯವಸ್ಥೆ ಮಾಡಿದ್ದರೆಂದರೆ ಅವು ಅಂದಿನಿಂದಲೂ ನಿಲ್ಲದೆ, ಸುಲಲಿತವಾಗಿ, ಸುವ್ಯವಸ್ಥಿತ ರೀತಿಯಲ್ಲಿ ನಡೆದುಕೊಂಡು ಹೋಗುತ್ತಿವೆ. 1953ರಲ್ಲಿ ಚಿನ್ನಸ್ವಾಮಿಗಳ ನಿಧನದ ತರುವಾಯ ಆಶ್ರಮಕ್ಕೆ ಹೊಸದಾಗಿ ಸೇರಿಸಿದ ಕಟ್ಟಡಗಳೆಂದರೆ ಮಹರ್ಷಿಗಳ ಸಮಾಧಿಯ ಮೇಲಿನ ದೇವಾಲಯ (1967) ಮತ್ತು 1970ರಲ್ಲಿ ಮುಗಿಸಿದ ಅದರ ಸುತ್ತಣ ವಿಶಾಲವಾದ, ಬೆಳಕು ಗಾಳಿಗಳಿಂದ ತುಂಬಿದ, ಧ್ಯಾನಾಂಗಣ.

ಮಹರ್ಷಿಗಳಿಗೂ ಪರ್ವತಕ್ಕೂ ಇದ್ದ ಸುದೀರ್ಘ ಹಾಗೂ ನಿಕಟ ಸಂಬಂಧವು (ಬೆಟ್ಟದ

ಹತ್ತಿರದ ಮತ್ತು ಅದರ ಮೇಲಿನ ಇತರ ಜಾಗಗಳಲ್ಲಿ 26 ವರ್ಷಗಳನ್ನು ಕಳೆದ ತರುವಾಯ ಆಶ್ರಮದಲ್ಲಿ 28 ವರ್ಷಗಳ ನಿರಂತರ ವಾಸ) ಪ್ರಾಚೀನ ಸಂಪ್ರದಾಯಕ್ಕೂ ಮಹರ್ಷಿಗಳ ಮುಖ್ಯ ಬೋಧನೆಯಾಗಿದ್ದ ಶುದ್ಧ ಅದ್ವೈತಕ್ಕೂ ಬಲವಾದ ಜೀವಂತ ಕೊಂಡಿಯನ್ನು ಸ್ಥಾಪಿಸಿದೆ. ಆ ಪರ್ವತವು ಶಿವನ ಸಾಕಾರ ರೂಪ, ಇಂದ್ರಿಯಾತೀತ ಜ್ಞಾನದ ಪ್ರತ್ಯಕ್ಷ ಸಂಕೇತ ಎಂಬ ಹಳೆಯ ನಂಬಿಕೆಗೆ ಆ ಸ್ಥಳದ ಬಗ್ಗೆ ಮಹರ್ಷಿಗಳಿಗೆ ಇದ್ದ ಗಾಢವಾದ ಪ್ರೀತಿ ಮತ್ತು ಯಾವನೇ ಗಂಭೀರ ಅನ್ವೇಷಕನಿಗೆ ಮೋಕ್ಷದ ದರ್ಶನವನ್ನು, ಶಾಶ್ವತ ಶುದ್ಧ ಜ್ಞಾನದ ಹ್ರಸ್ವಾನುಭವವನ್ನು ನೀಡಲು ಆತ್ಮಾನುಸ್ಮೃತಿಯ ಶ್ರದ್ಧಾ ಪೂರ್ವಕವಾದ ಒಂದೇ ಒಂದು ಪ್ರಯತ್ನ ಸಾಕು ಎಂದು ಪದೇ ಪದೇ ಅವರು ನೀಡುತ್ತಿದ್ದ ಆಶ್ವಾಸನೆ ಮತ್ತಷ್ಟು ಪುಷ್ಟಿ ನೀಡಿದವು.

ಬೆಟ್ಟದ ದಕ್ಷಿಣ ತಪ್ಪಲಿನಲ್ಲಿದ್ದ ಆಶ್ರಮದಲ್ಲಿ ವಾಸಮಾಡಲು ಅವರು ಬಂದ ಮೇಲೆ, ಜನರಿಗೆ ದರ್ಶನ ಕೊಡುವುದು ಮತ್ತು ಬೆಟ್ಟದ ಮೋಕ್ಷ ಸಂದೇಶವನ್ನು ಮೌನದ ಅಥವಾ ಚಿಕ್ಕ ಭಾಷಣದ ಮೂಲಕ ತಿಳಿಸುವುದಷ್ಟೇ ತಮ್ಮ ಬದುಕಿನ ಏಕೈಕ ಕಾರ್ಯವೆಂದು ಮಹರ್ಷಿ ಸ್ಪಷ್ಟಪಡಿಸಿದರು. ಆಧ್ಯಾತ್ಮಿಕ ವಿಕಾಸದ ಎಲ್ಲ ಹಂತಗಳಲ್ಲಿದ್ದ ಅಸಂಖ್ಯಾತ ಅನ್ವೇಷಕರು ದೂರದ ಮತ್ತು ಹತ್ತಿರದ ಎಡೆಗಳಿಂದ ಅವರ ಬಳಿಗೆ ಬಂದರು. ಅವರ ಸಾನ್ನಿಧ್ಯದಲ್ಲಿ ಮನಸ್ಸಿನ ಶಾಂತಿ, ವೈಶದ್ಯ ಮತ್ತು ಧೈರ್ಯ ಪಡೆದರು. ದರ್ಶನ, ನೋಡುವ ಮತ್ತು ನೋಡಲ್ಪಡುವ, ಕೇಳುವ ಮತ್ತು ಕೆಲವು ಸಲ ದೃಷ್ಟಿಯಿಂದ, ಮುಗುಳು ನಗೆಯಿಂದ, ಸನ್ನೆಯಿಂದ ಉತ್ತರ ನೀಡುವ ಮನಸ್ಸು-ಇವು ಅವರ ಅನುಗ್ರಹದ ಉತ್ತಮೋತ್ತಮ ವರವಾಗಿದ್ದವು. ಎಲ್ಲರಿಗೂ ಎಲ್ಲ ಕಾಲದಲ್ಲಿಯೂ ತಾವು ದೊರೆಯುವಂತೆ ಅವರು ಏರ್ಪಾಡು ಮಾಡಿಕೊಂಡಿದ್ದರು. ವಾಸ್ತವದಲ್ಲಿ, ಅವರು ಸ್ಕಂದಾಶ್ರಮವನ್ನು ಬಿಟ್ಟು, ಬೆಟ್ಟದ ಬುಡದಲ್ಲಿ ಬೆಂಗಳೂರಿಗೆ ಹೋಗುವ ಹೆದ್ದಾರಿಯಲ್ಲಿದ್ದ ಆಶ್ರಮದಲ್ಲಿ ವಾಸಿಸಲು ಇಷ್ಟಪಟ್ಟಿದ್ದಕ್ಕೆ ಕಾರಣ ಆ ಸ್ಥಳ ಹೆಚ್ಚು ಸುಲಭವಾಗಿ ದೊರೆಯುವಂತಹದು ಎಂಬುದಾಗಿ ಕಾಣುತ್ತದೆ.

ಹಿಂದಿನ ದಿನಗಳಲ್ಲಿ ಅವರು ಪದೇ ಪದೇ ಗಿರಿಪ್ರದಕ್ಷಿಣೆ ಮಾಡುತ್ತಿದ್ದರು. ಅದನ್ನು ತಮ್ಮ ಶಿಷ್ಯರಿಗೂ ಶಿಫಾರಸು ಮಾಡಿದ್ದರು. ಏಕೆಂದರೆ ಐದು ಮುಖದ ಆ ದೊಡ್ಡ ಬೆಟ್ಟದ ವಿವಿಧ ರೂಪಗಳನ್ನು ವಿಭಿನ್ನ ಕೋನಗಳಿಂದ ಮತ್ತು ವಿಭಿನ್ನ ಕಾಲಗಳಲ್ಲಿ ನೋಡಲು ಅದು ಅವಕಾಶ ನೀಡಿತ್ತು. ಅದರ ಪರಿಣಾಮ ಉಲ್ಲಾಸಕಾರಿಯಾಗಿತ್ತು. ಅವರ ಪ್ರಕಾರ, ನಿಜವಾದ ಪ್ರದಕ್ಷಿಣೆ ಎಂದರೆ ಆತ್ಮನಿಂದ ಆತ್ಮನ ಪ್ರದಕ್ಷಿಣೆ. ''ಕೋಟ್ಯಂತರ ಬ್ರಹ್ಮಾಂಡಗಳು ನಮ್ಮೊಳಗೆ ಸುತ್ತುತ್ತಿರುತ್ತವೆ'' ಎಂಬ ಸತ್ಯವನ್ನು ಅದು ಪ್ರತ್ಯಕ್ಷವಾಗಿ ನೆನಪಿಗೆ ತರುತ್ತದೆ.

1926ರಲ್ಲಿ ಅವರು ಬೆಟ್ಟದ ಸುತ್ತ ನಡೆಯುವುದನ್ನು ನಿಲ್ಲಿಸಿದರು. ಕೆಲವು ವರ್ಷಗಳ ತರುವಾಯ ಅಡಿಗೆಮನೆಯಲ್ಲಿ ಕೆಲಸ ಮಾಡುವುದನ್ನು ನಿಲ್ಲಿಸಿದರು, ಏಕೆಂದರೆ ಹಜಾರದಲ್ಲಿ ಇಲ್ಲದಿರುವುದು ಅವರಿಗೆ ಇಷ್ಟವಾಗಲಿಲ್ಲ. ಅವರ ಸ್ನಾನದ ಮತ್ತು ಊಟದ, ಬೆಳಗಿನ ಮತ್ತು ಸಂಜೆಯ ತಿರುಗಾಟದ, ಅಲ್ಪ ವಿಶ್ರಾಂತಿಯ ಅವಧಿ-ಇವುಗಳ ವೇಳಾಪಟ್ಟಿ ಎಲ್ಲರಿಗೂ ತಿಳಿದಿತ್ತು ಮತ್ತು ಅದನ್ನು ಕಟ್ಟುನಿಟ್ಟಾಗಿ ಪಾಲಿಸಲಾಗುತ್ತಿತ್ತು. ಅವರಿಗೆ ಮತ್ತು ಆಶ್ರಮಕ್ಕೆ ಸಂಬಂಧಿಸಿದ ಎಲ್ಲವೂ ಚೊಕ್ಕಟವಾಗಿತ್ತು, ಅಚ್ಚುಕಟ್ಟಾಗಿತ್ತು ಮತ್ತು ಮೊದಲೇ

ಊಹಿಸಬಹುದಾಗಿತ್ತು. ನಾಡಿನ ಇತರ ಭಾಗಗಳ ಜನರಿಗೆ ಅವರ ದರ್ಶನ ದೊರೆಯುವಂತಾಗಲು ಅವರು ಭಾರತದ ತೀರ್ಥಕ್ಷೇತ್ರಗಳಲ್ಲಿ ಪ್ರವಾಸಮಾಡಬೇಕೆಂದು ತಿಳಿಸಿದಾಗ, ಅವರು ಆ ಪ್ರಸ್ತಾಪವನ್ನು ನಗುತ್ತ ತಳ್ಳಿಹಾಕಿ ಹೀಗೆಂದರು: ''ನಾನು ಪ್ರವಾಸ ಹೋದಲ್ಲಿ, ಬಟ್ಟೆ ತುಂಡನ್ನು ಸುತ್ತಿಕೊಂಡಿರುವ ತಿರುಕನನ್ನು ಯಾರು ತಾನೆ ಗಮನಿಸುತ್ತಾರೆ? 'ನಮ್ಮ ಪ್ರಸಿದ್ಧ ರಮಣಮಹರ್ಷಿ ಇಲ್ಲಿ ಬರುತ್ತಿದ್ದಾರೆ' ಎಂದು ಘೋಷಣೆ ಕೂಗುತ್ತಿರುವ ಪರಿವಾರ ನನ್ನ ಜೊತೆಗೆ ಇರಬೇಕೇ?''

ಅವರ ಕೊನೆಯ ಕಾಯಿಲೆಯಲ್ಲಿ ತಮ್ಮ ಬಳಿ ಬಂದವರೆಲ್ಲರಿಗೂ ತಮ್ಮ ದರ್ಶನ ದೊರಕಲೇಬೇಕೆಂದು ಕಟ್ಟ ಕಡೆಯವರೆಗೂ ಹೇಳುತ್ತಿದ್ದರು. ಸಾವಿರಾರು ಜನರಿಗೆ ಅವರಲ್ಲಿ ಪ್ರೀತಿ ಹುಟ್ಟಲು ಕಾರಣವಾದ ಗುಣಗಳಲ್ಲಿ, ಪ್ರಾಯಶಃ ಅತ್ಯಂತ ಆಕರ್ಷಕವಾಗಿದ್ದುದು ಅವರ ಸೌಲಭ್ಯ. ಸಿಗಲು ಅವರು ಅಷ್ಟು ಸುಲಭರೂ, ನಮ್ರರೂ, ನಿಗರ್ವಿಗಳೂ ಆಗಿದ್ದರು. ಅವರ ಸಹಜತೆ, ವ್ಯವಹಾರದ ಪೂರ್ಣ ಸಹಜತೆ ಮತ್ತು ಎಲ್ಲ ಸಂದರ್ಭದಲ್ಲೂ ಎಲ್ಲ ರೀತಿಯಲ್ಲೂ ಇತರರೊಂದಿಗೆ ತಾವು ಸಮಾನ ಎಂಬ ಪಟ್ಟು ಅಷ್ಟೇ ಆಕರ್ಷಕವಾಗಿತ್ತು. ಅವರ ಜೀವನರೀತಿ ಎಷ್ಟು ಸಹಜ ಮತ್ತು ಬಿಗುಮಾನವಿಲ್ಲದ್ದು ಆಗಿತ್ತೆಂದರೆ ಹೊಸಬರು ತಕ್ಷಣವೇ ಅವರ ಜೊತೆಯಲ್ಲಿ ಸರಾಗವಾಗಿ ಇರತೊಡಗುತ್ತಿದ್ದರು. ತಮಗಾಗಿ ಅವರು ಯಾವುದೇ ವಿಶೇಷ ಸವಲತ್ತನ್ನಾಗಲಿ ಅಧಿಕಾರವನ್ನಾಗಲಿ ಕೇಳುತ್ತಿರಲಿಲ್ಲ. ನಮ್ಮ ಮೆಚ್ಚಿಗೆಗಾಗಿ ಅವರು ಬೀಜವೊಂದರಿಂದ ಕೆಲವೇ ನಿಮಿಷಗಳಲ್ಲಿ ಸೃಷ್ಟಿಸಿದ ಮಂತ್ರದ ಮಾವಿನ ಹಣ್ಣನ್ನು ನಮ್ಮಮರಿಗೆ ಪ್ರದರ್ಶಿಸುತ್ತಿರಲಿಲ್ಲ. ಅದರ ಬದಲು ಅನೇಕ ವರ್ಷಗಳ ಸಹಜ ಬೆಳವಣಿಗೆಯ ಅನಂತರ ನಿಜವಾದ ಹಣ್ಣೊಂದನ್ನು ಬಿಟ್ಟ ನಿಜವಾದ ಮರವೊಂದರ ಪರಿಚಿತ ರಹಸ್ಯವನ್ನು ನಮ್ಮ ಮೆಚ್ಚುಗೆಗಾಗಿ ಮುಂದಿಡುತ್ತಿದ್ದರು. ಅವರ ದಿನಗಟ್ಟಲೆಯ ವ್ಯವಹಾರಗಳು ಎಷ್ಟು ಸಾಮಾನ್ಯ, ಅವರ ನಡೆನುಡಿ ಎಷ್ಟು ಸರಳವಾಗಿದ್ದುವೆಂದರೆ, ಭೇಟಿಗಾರನೊಬ್ಬ ಒಮ್ಮೆ ದೇವರಾಜ ಮುದಲಿಯಾರರನ್ನು ಹೀಗೆ ಆಕ್ಷೇಪಿಸಿದ:

''ನಿಮ್ಮ ಈ ಭಗವಾನರಲ್ಲಿ ಅವರೊಬ್ಬ ಜೀವನ್ಮುಕ್ತ ಎಂದು ನೀವು ಅಂದು-ಕೊಳ್ಳುವಂತೆ ಇರುವುದಾದರೂ ಏನು? ಉಳಿದ ನಮ್ಮಂತೆಯೇ ಅವರೂ ಊಟ ಮಾಡುತ್ತಾರೆ, ನಿದ್ದೆ ಮಾಡುತ್ತಾರೆ ಮತ್ತು ಇತರ ಎಲ್ಲವನ್ನೂ ಮಾಡುತ್ತಾರೆ.'' ಜೀವನ್ಮುಕ್ತನನ್ನು ಬೇರ್ಪಡಿಸಿ ತಿಳಿಸುವ ಬಾಹ್ಯ ಲಕ್ಷಣಗಳು ಯಾವುವೂ ಇಲ್ಲ ಮತ್ತು ಜ್ಞಾನಿಯೊಬ್ಬನನ್ನು ಗುರುತಿಸಲು ಮತ್ತೊಬ್ಬ ಜ್ಞಾನಿಯೇ ಬೇಕು ಎಂದು ಮುದಲಿಯಾರ್ ವಿವರಿಸಿದರು. ನಿಜದಲ್ಲಿ ಮಹರ್ಷಿ ಒಬ್ಬಂಟಿಗರಾಗಿಯೋ ಗುಂಪಿನಲ್ಲಿಯೋ ಯಾವುದೋ ಒಂದು ಕೆಲಸವನ್ನು ಮಾಡುವುದರಲ್ಲಿ ನಿರತರಾಗಿದ್ದಾಗ ಅವರನ್ನು ಕಂಡ ಅಪರಿಚಿತರು ಅವರನ್ನು ಇಟ್ಟಿಗೆ ಕೆಲಸದವನೆಂದೋ ಅಡಿಗೆಮನೆ ಪರಿಚಾರಿಕನೆಂದೋ ಭಾವಿಸಿ ಪ್ರಸಿದ್ಧ ಸ್ವಾಮಿಗಳನ್ನು ಎಲ್ಲಿ ನೋಡಬಹುದು ಎಂದು ಶುದ್ಧ ಸರಳತೆಯಿಂದ ಅವರನ್ನೇ ವಿಚಾರಿಸಿದ ಸಂದರ್ಭಗಳೂ ಇದ್ದವು. ತಮ್ಮನ್ನು ನಿರ್ದೇಶಿಸಿಕೊಳ್ಳುವಾಗ ಅವರು 1896ರ ಆಗಸ್ಟಿನಲ್ಲಿ ಮನೆಬಿಟ್ಟು ಬರುವಾಗ ಬರೆದಿದ್ದ ಕಾಗದದಲ್ಲಿ ಬಳಸಿದ್ದ ಮತ್ತು ಅನೇಕ ಸಂನ್ಯಾಸಿಗಳು ತಮ್ಮ ಬಗ್ಗೆ ಹೇಳಿಕೊಳ್ಳುವಾಗ ಬಳಸಲು ಇಚ್ಛಿಸುವ, ಬುದ್ಧಿಪೂರ್ವಕವಾದ ನಿರಹಂಕಾರ ಸೂಚಕವಾದ, 'ಅದು' ಎನ್ನುವುದರ ಬದಲು 'ನಾನು' ಎನ್ನುತ್ತಿದ್ದುದು ಅವರ ಸಹಜತೆಯ ಒಂದು ಚಿಕ್ಕ ಆದರೆ ಅರ್ಥಪೂರ್ಣವಾದ

ಗುರುತಾಗಿತ್ತು. ಮಹರ್ಷಿ ತಮ್ಮನ್ನು 'ನಾನು' ಎನ್ನುತ್ತಿದ್ದರು. ಆದರೆ ಇತರರು ಅವರ ಬಗ್ಗೆ ಮಾತನಾಡುವಾಗ ಮತ್ತು ಅವರನ್ನೇ ಸಂಬೋಧಿಸುವಾಗ ಸಹ ವ್ಯಕ್ತಿಗಳಿಗೆ 'ಅವು' ಎನ್ನುವ ನಿರ್ಬಂಧಕ್ಕೇ ಕಟ್ಟುಬಿದ್ದಿದ್ದರು. ಪ್ರಾಣಿಗಳು ಮತ್ತು ಮಕ್ಕಳು ಅವರನ್ನು ತಮ್ಮ ವರ್ಗಕ್ಕೆ ಸೇರಿದ ಒಬ್ಬರನ್ನಾಗಿ, ನಿಸರ್ಗದ ಒಂದು ಪ್ರಾಣಿಯಾಗಿ ಸುಲಭವಾಗಿ ಸ್ವೀಕರಿಸಿದವು. ಆದರೆ ಅವರನ್ನು 'ಭಗವಾನ್' ಎಂದು ಕರೆದು ಮಾನವ ಸಂಪ್ರದಾಯವು ಅವರನ್ನು ತನ್ನಿಂದ ಮೇಲೆಯೇ ಆಗಲಿ, ದೂರವಾಗಿ ಇರಿಸಿತು.

ಬದುಕನ್ನು ಸರಳವಾಗಿಸುವುದು, ವೆಚ್ಚವನ್ನು ಕಡಿಮೆ ಮಾಡುವುದು, ದುಂದುಗಾರಿಕೆ ಮತ್ತು ಪೋಲುಗಳನ್ನು ತ್ಯಜಿಸುವುದು ಇವನ್ನು ಅವರು ಆಶ್ರಮವಾಸಿಗಳಿಗೆ ಉಪದೇಶಕ್ಕಿಂತ ಹೆಚ್ಚಾಗಿ ಆಚರಣೆಯ ಮೂಲಕ ಕಲಿಸಿದರು. ಅಂಚೆಯಲ್ಲಿ ಬಂದ ಕಾಗದಗಳ ಲಕೋಟೆ ಅಥವಾ ಸುತ್ತುಕಾಗದವನ್ನು ಬರೆಯಲು ಅಥವಾ ಬೇರೆ ಬಳಕೆಗಳಿಗಾಗಿ ತೆಗೆದಿರಿಸುತ್ತಿದ್ದರು. ತೆಂಗಿನ ಚಿಪ್ಪುಗಳಿಂದ ಬಟ್ಟಲು ಮತ್ತು ಚಮಚಗಳನ್ನು ಮಾಡಿ, ಉಜ್ಜಿ ಕರಿಮರದಂತೆ ಹೊಳೆಯುವಂತೆ ಮಾಡುತ್ತಿದ್ದರು. "ಇವೇ ನಮ್ಮ ಬೆಳ್ಳಿಯ ಬಟ್ಟಲು ಮತ್ತು ಚಿನ್ನದ ಚಮಚಗಳು" ಎಂದು ಹೇಳಿ ಅವನ್ನು ಸರಿಯಾಗಿ ಇಟ್ಟುಕೊಂಡು ಜಾಗರೂಕತೆಯಿಂದ ಬಳಸುವಂತೆ ಪರಿಚಾರಕರಿಗೆ ತಿಳಿಸುತ್ತಿದ್ದರು. ಕಿತ್ತಳೆ ಹಣ್ಣಿನ ಸಿಪ್ಪೆಗಳನ್ನು ಉಪ್ಪಿನಕಾಯಿ ಮಾಡಲು ಮತ್ತು ಒಣಗಿಹೋದ ಗುಲಾಬಿ ದಳಗಳನ್ನು ಪಾಯಸಕ್ಕೆ ರುಚಿಕಟ್ಟಲು ಶೇಖರಿಸಲಾಗುತ್ತಿತ್ತು.

ಹಸ್ತಪ್ರತಿಗಳು ಮತ್ತು ಕರಡಚ್ಚುಗಳನ್ನು ಅವರು ಎಚ್ಚರದಿಂದ ಪರಿಶೀಲಿಸುತ್ತಿದ್ದರು; ಲಕ್ಷಣವಾದ ಬರವಣಿಗೆಯಲ್ಲಿ ಪದ್ಯಗಳನ್ನು ಶುದ್ಧವಾಗಿ ನಕಲು ಮಾಡುತ್ತಿದ್ದರು; ಕಸುಬಿನವರ ಕೌಶಲದಿಂದ ಪುಸ್ತಕಗಳಿಗೆ ರಟ್ಟುಕಟ್ಟುತ್ತಿದ್ದರು; ತರಕಾರಿ ಕತ್ತರಿಸುತ್ತಿದ್ದರು; ಊಟದೆಲೆ ಹಚ್ಚುತ್ತಿದ್ದರು ಮತ್ತು ಅಡಿಗೆಯಲ್ಲಿ ಸಹಾಯ ಮಾಡುತ್ತಿದ್ದರು. ಹೀಗೆ ಅವರು ಕೆಲಸದ ಗೌರವ ಮತ್ತು ಸರಳತೆಯ ಸೌಂದರ್ಯಕ್ಕೆ ನಿದರ್ಶನವಾಗಿದ್ದರು. ಕರ್ಮವು ಅವರಿಗೆ ಯಾವುದೋ ಒಂದು ವಿಶೇಷವಾದ ಧಾರ್ಮಿಕ ಕ್ರಿಯೆಯಾಗಿರದೆ ನಮ್ಮೆಲ್ಲರ ಸಾಮಾನ್ಯ ಬದುಕಿನ ಅನುದಿನದ ಕೆಲಸಕಾರ್ಯವಾಗಿದ್ದಿತು.

ವೆಲ್ಲೂರಿನ ಕಾಲೇಜೊಂದರ ತೆಲುಗು ಅಧ್ಯಾಪಕ ಶ್ರೀ ರಂಗಾಚಾರಿ ಒಂದು ಪ್ರಸಂಗ ವನ್ನು ವರ್ಣಿಸಿದ್ದಾರೆ. ನಿಷ್ಕಾಮಕರ್ಮ ಎಂದರೆ ಏನು ಎಂಬುದನ್ನು ವಿವರಿಸುವಂತೆ ಅವರು ಮಹರ್ಷಿಗಳನ್ನು ಕೇಳಿದರು. ಅದಕ್ಕೆ ಉತ್ತರವೇನೂ ಬರಲಿಲ್ಲ. ಸ್ವಲ್ಪ ಹೊತ್ತಿನ ಬಳಿಕ ಮಹರ್ಷಿ ಬೆಟ್ಟವನ್ನು ಹತ್ತಿ ಹೋದರು. ಅವರನ್ನು ಈ ಅಧ್ಯಾಪಕರೂ ಸೇರಿದಂತೆ ಕೆಲವು ಭಕ್ತರು ಅನುಸರಿಸಿದರು. ದಾರಿಯಲ್ಲಿ ಒಂದು ದಪ್ಪ ಬಲವಾದ ಮುಳ್ಳಿನ ಕೊಂಬೆ ಬಿದ್ದಿತ್ತು. ಮಹರ್ಷಿ ಅದನ್ನು ಎತ್ತಿಕೊಂಡು ಸವರಲು ಪ್ರಾರಂಭಿಸಿದರು. ಮುಳ್ಳುಗಳನ್ನು ಕತ್ತರಿಸಿ, ಗಂಟುಗಳನ್ನು ನಯ ಮಾಡಿ, ಒರಟು ಎಲೆಯಿಂದ ಅದರ ಮೇಲ್ಮೈಯನ್ನು ಉಜ್ಜಿ ಹೊಳಪು ಬರಿಸಿದರು. ಗಂಟೆಗಳ ಕಾಲ ಜಾಗರೂಕತೆಯಿಂದ ಕಷ್ಟಪಟ್ಟು ಮಾಡಿದ ಕೆಲಸದ ಫಲವಾಗಿ ಒಂದು ಸುಂದರವಾದ ನಡೆಗೋಲು ಸಿದ್ಧವಾಯಿತು. ತನ್ನ ಕೊಕ್ಕೆ ಕೋಲನ್ನು ಕಳೆದುಕೊಂಡು ಸಪ್ಪೆಮೋರೆ ಹಾಕಿಕೊಂಡು ದಾರಿಯಲ್ಲಿ ಹೋಗುತ್ತಿದ್ದ ಕುರುಬರ ಹುಡುಗನೊಬ್ಬನಿಗೆ ಮಹರ್ಷಿ ಅದನ್ನು ನೀಡಿದರು. ಬೋಧನೆಯ ಕಲೆಯಲ್ಲಿ ತಾವೊಂದು ಹೊಸಪಾಠವನ್ನು

ಕಲಿತುದುದಾಗಿ ಆ ಅಧ್ಯಾಪಕ ಒಪ್ಪಿಕೊಂಡರು. ಏಕೆಂದರೆ ಮಹರ್ಷಿಗಳ ಸರಳವಾದ ಈ ಪ್ರಾಯೋಗಿಕ ಪ್ರದರ್ಶನ ಅಧ್ಯಾಪಕರ ಶ್ರದ್ಧಾಪೂರ್ವಕ ಪ್ರಶ್ನೆಗೆ ಸಂಪೂರ್ಣವಾದ ಉತ್ತರವಾಗಿದ್ದಿತು.

ಆಶ್ರಮವಾಸಿಗಳ ಹಾಗೂ ಸಂದರ್ಶಕರ ಸಂಖ್ಯೆ ವರ್ಷದಿಂದ ವರ್ಷಕ್ಕೆ ಏರುತ್ತಾ ಹೋದಂತೆ, ಆಶ್ರಮವೂ ವಿಸ್ತಾರವಾಗಬೇಕಾಯಿತು. ಮಹರ್ಷಿ ಸ್ಕಂದಾಶ್ರಮದಲ್ಲಿ ಇದ್ದಾಗಲೇ ಕ್ರಮವಾದ ಅಡಿಗೆಮನೆಯೊಂದನ್ನು ನಡೆಸಲಾಗಿತ್ತು. ಯುವ ಸನ್ಯಾಸಿಯ ಆಶ್ರಮವು ಭಕ್ತರಿಗೆ ರುಚಿರುಚಿಯಾದ ಸಿಹಿತಿಂಡಿಗಳನ್ನು ನೀಡುತ್ತಿತ್ತು ಎಂದು ಮಹರ್ಷಿಗಳ ಹಳೆ ಸ್ನೇಹಿತ ಶೇಷಾದ್ರಿಸ್ವಾಮಿ ತಮಾಷೆಯಾಗಿ ಹೇಳುತ್ತಿದ್ದರು. ಅವರ 'ಪ್ರಸಾದ' ರುಚಿಯಾದ ಆರೋಗ್ಯಕರವಾದ ಆಹಾರ ಹಾಗೂ ದೈವಾನುಗ್ರಹ ಎರಡನ್ನೂ ಸೂಚಿಸುತ್ತದೆ ಮತ್ತು ರಮಣಾಶ್ರಮದ ಎರಡು ಅಗ್ನಿಗಳೂ-ಮಹರ್ಷಿಗಳು ಮತ್ತು ಅಡಿಗೆ ಮನೆಯ ಬೆಂಕಿ-ಎಲ್ಲ ಆಗಂತುಕರ ಹೃದಯಗಳನ್ನೂ ಸಂತೋಷಪಡಿಸುತ್ತಾ ಒಂದೇ ಬಗೆಯ ಪ್ರಕಾಶದಿಂದ ಸದಾ ಜ್ವಲಿಸುತ್ತಿದ್ದವು ಎಂದು ಇತರರೂ ನುಡಿದಿದ್ದಾರೆ. ಭೌತಾತೀತ ಎನ್ನುವುದು ಒಂದು ವ್ಯತಿರಿಕ್ತ ವಸ್ತುವಲ್ಲ; ಭೌತವನ್ನು ತುಂಬುವ ಮತ್ತು ರೂಪಿಸುವ ಒಂದು ಅರಿವು ಅದು.

ವಿಶಾಲವಾದ ಧ್ಯಾನಮಂದಿರ ಮತ್ತು ಭೋಜನಶಾಲೆಗಳನ್ನು ಒಳಗೊಂಡಿದ್ದ ಹೊಸ ಆಶ್ರಮದಲ್ಲಿ ಉಚ್ಚವರ್ಗಗಳಿಗೆ ಸೇರಿದ ಸಂದರ್ಶಕರು ಮಹರ್ಷಿಗಳ ಹತ್ತಿರ ಮುಂದಿನ ಸಾಲನ್ನು ಹಿಡಿಯಲು ಪ್ರಾರಂಭಿಸಿದರು. ಆದರೆ ಹಿಂದಿನಂತೆಯೇ ಈಗಲೂ ಅವರು ದೀನದಲಿತರನ್ನು ಗುರುತಿಸಿ ಮಾತನಾಡಿಸಲು ಮತ್ತು ಅವರನ್ನು ಸಂಕೋಚ ತೊರೆದು ಸಹಜವಾಗಿರುವಂತೆ ಮಾಡಲು ಉದ್ದೇಶಪೂರ್ವಕವಾಗಿ ಶ್ರಮಿಸುತ್ತಿದ್ದರು. ದೇವಸ್ಥಾನದ ಉತ್ಸವವೊಂದರ ಸಂದರ್ಭದಲ್ಲಿ ಆಶ್ರಮದಲ್ಲಿ ಹಂಚಲು ಭಕ್ಷ್ಯಾದಿಗಳು ಸಿಹಿತಿಂಡಿಗಳನ್ನು ರಾಶಿಗಟ್ಟಲೆ ತಂದರು. ಆ ಸಮಯಕ್ಕೆ ಸರಿಯಾಗಿ ಒಬ್ಬ ಮುದುಕಿ ಕೋಲಿನಿಂದ ದಾರಿಯನ್ನು ತಡವರಿಸುತ್ತ, ಕೈಯಲ್ಲಿ ಬಾಳೆಯ ಎಲೆಯ ಮೇಲೆ ಕೆಲವು ದೋಸೆಗಳನ್ನು ಹಿಡಿದುಕೊಂಡು ಒಳಕ್ಕೆ ಬಂದಳು. ಅವನ್ನು ಅವಳು ನೇರವಾಗಿ ಮಹರ್ಷಿಗಳಿಗೆ ಕೊಡುವುದನ್ನು ತಪ್ಪಿಸಲು ಕೆಲವರು ಪರಿಚಾರಕರು ಪ್ರಯತ್ನಿಸುತ್ತಿದ್ದಂತೆಯೇ, ಮಹರ್ಷಿ ತಮ್ಮ ಕೈ ನೀಡಿ ದೋಸೆಗಳನ್ನು ತೆಗೆದುಕೊಂಡು, ವಿಶ್ವಾಸದಿಂದ ಆಕೆಯ ಕ್ಷೇಮಸಮಾಚಾರಗಳನ್ನು ವಿಚಾರಿಸಿ, ಸುತ್ತಲಿದ್ದ-ವರಿಗೆ ಹೀಗೆ ಹೇಳಿದರು: ''ಪಾಪ, ಈ ಬಡ ಮುದುಕಿ ತನಗೆ ಏನು ಸಾಧ್ಯವೋ ಅದನ್ನು ತಂದಿದ್ದಾಳೆ. ನಾನು ಬೆಟ್ಟದ ಮೇಲಿದ್ದಾಗ, ಇವಳು ಮತ್ತು ಇವಳ ಗಂಡ ನನ್ನನ್ನು ನೋಡಲು ಬರುತ್ತಿದ್ದರು. ಆಗಿಂದ್ದಾಗ್ಗೆ ಏನಾದರೂ ತಿನ್ನಲು ತರುತ್ತಿದ್ದರು. ಇವಳ ಗಂಡ ಮೊದಲು ಸತ್ತು ಹೋದ; ಬಳಿಕ ಇವಳ ಒಡಹುಟ್ಟಿದವನೂ ತೀರಿಕೊಂಡ. ಅಂದಿನಿಂದ ಇವಳು ಅಲ್ಲಿ ಇಲ್ಲಿ ವಾಸಮಾಡುತ್ತ, ಈ ದೋಸೆಗಳನ್ನು ಮಾಡಿ, ಮಾರಿ ಜೀವನ ಮಾಡುತ್ತಿದ್ದಾಳೆ. ನನ್ನ ತಾಯಿಯ ಸಮಾಧಿಯ ಹತ್ತಿರ ನಾನು ಕುಳಿತುಕೊಳ್ಳಲು ಜಗುಲಿಯನ್ನು ಕಟ್ಟಿಸಿ, ಅದಕ್ಕೆ ತಾಳೆಗರಿಗಳ ಚಾವಣಿಯನ್ನು ಹಾಕಿಸಿದಳು ಇವಳೇ. ಅದಕ್ಕೆ ಮೊದಲು ನಾನು ಗಿಡವೊಂದರ ಕೆಳಗೆ ಕುಳಿತಿರುತ್ತಿದ್ದೆ. ವಯಸ್ಸಾದುದರಿಂದ ಈಗ ಇವಳು ಬಹಳ ಬರುತ್ತಿಲ್ಲ.'' ಅನಂತರ ಅವರು ದೇವಸ್ಥಾನದ ಭಕ್ಷ್ಯಗಳನ್ನು ತೊರೆದು, ಮುದುಕಿ ತಂದುಕೊಟ್ಟ ದಪ್ಪ ಹಳಸಲು ದೋಸೆಯನ್ನು ಚಪ್ಪರಿಸಿಕೊಂಡು ತಿಂದರು.

ಊಟದ ವೇಳೆಯಲ್ಲಿ ಮಹರ್ಷಿ ಭೋಜನಶಾಲೆಯನ್ನು ವಿಭಾಗಮಾಡಿದ್ದ ಅಡ್ಡಗೋಡೆಯ ಮುಂದೆ ಕುಳಿತಿರುತ್ತಿದ್ದರು. ಈ ರೀತಿ ಅವರು ತಮ್ಮ ಬಲಭಾಗದಲ್ಲಿ ಕುಳಿತಿರುತ್ತಿದ್ದ ಕೆಲವೇ ಮಂದಿ ವೈದಿಕ ಬ್ರಾಹ್ಮಣರಿಗೂ ಮತ್ತು ಅವರ ಎಡಗಡೆ ಕುಳಿತಿರುತ್ತಿದ್ದ ಇತರರ ದೊಡ್ಡ ಗುಂಪಿಗೂ ಅಭಿಮುಖರಾಗಿರುತ್ತಿದ್ದರು. ಸನಾತನಿಗಳ ಮನಸ್ಸಿಗೆ ನೋವುಂಟು ಮಾಡಲು ಅಥವಾ ಆಂತರಿಕ ಪಕ್ವತೆಯಿಲ್ಲದೆ ಬಾಹ್ಯ ಬದಲಾವಣೆಯನ್ನು ಮಾತ್ರ ಬಲಾತ್ಕಾರವಾಗಿ ತರುವ ''ಸಾಮಾಜಿಕ ಸುಧಾರಣೆ''ಯನ್ನು ಪುರಸ್ಕರಿಸಲು ಅವರು ಇಚ್ಛಿಸಲಿಲ್ಲ. ಸ್ವಂತದಲ್ಲಿ ಅವರು ಅಸ್ಪೃಶ್ಯರ ಮತ್ತು ಕೆಳಜಾತಿಗಳ ಜೊತೆ, ಹಾಗೆಯೇ ಯಾವುದೇ ಜಾತಿಯೂ ಇಲ್ಲದ ವಿದೇಶೀಯರ ಜೊತೆ ನಿಸ್ಸಂಕೋಚವಾಗಿ ಬೆರೆಯುತ್ತಿದ್ದರು. ಅವರ ಸ್ವಂತ ಶುಶ್ರೂಷೆಯಲ್ಲಿ ತೊಡಗಿದ್ದವರು ಮತ್ತು ಅವರಿಗೆ ವಸ್ತ್ರ ಅಥವಾ ನೀರು ಕೊಡುತ್ತಿದ್ದವರು ಯಾವುದೇ ವಿಶಿಷ್ಟ ಜಾತಿಗೆ ಸೇರಿದವರಾಗಿರಲಿಲ್ಲ. ಜೊತೆಗೆ ಅವರು ಉಪದೇಶ ನೀಡಿದುದಾಗಿ ತಿಳಿದುಬಂದಿರುವ ಒಂದೇ ಒಂದು ಸಂದರ್ಭದಲ್ಲಿ, ಅದನ್ನು ಪಡೆದವನು ಒಬ್ಬ ಅಸ್ಪೃಶ್ಯ ಎಂಬುದನ್ನು ಗಮನಿಸಬೇಕು. ಆಶ್ರಮಕ್ಕೆ ಪ್ರದಕ್ಷಿಣೆ ಹಾಕುತ್ತಿದ್ದ ಈ ನಮ್ರ ಭಕ್ತ ಒಮ್ಮೆ ಮಹರ್ಷಿಗಳನ್ನು ಅದರ ಬಾಗಿಲಲ್ಲಿ ಕಂಡ. ಅವರಿಗೆ ಅಡ್ಡಬಿದ್ದು ಉಪದೇಶವನ್ನು ಕೋರಿದ. ಆ ಬಡವನ ಬಗ್ಗೆ ಕನಿಕರ ತುಂಬಿ, ಮಹರ್ಷಿ ಅವನಿಗೆ, ''ಶಿವ, ಶಿವ ಎನ್ನುತ್ತಿರು, ಅದು ನಿನ್ನನ್ನು ಕಾಪಾಡುತ್ತದೆ'' ಎಂದು ಹೇಳಿದರು.

ವೇದ ಪಾರಾಯಣ, ಭಕ್ತಿಗೀತೆಗಳು, ಮೌನಧ್ಯಾನ ಮತ್ತು ಸಂದರ್ಶಕರೊಡನೆ ಗಂಭೀರವಾದ ಮಾತುಕತೆ ಈ ದೈನಂದಿನ ಕಾರ್ಯಕ್ರಮದ ನಡುವೆ ಅನೇಕವೇಳೆ ಮಹರ್ಷಿಗಳ ತಮಾಷೆಯೂ ಸೇರಿರುತ್ತಿತ್ತು. ಅದರಲ್ಲಿ ಅವರ ಹಳೆ ಭಕ್ತರೂ ಭಾಗವಹಿಸುತ್ತಿದ್ದರು. ಒಮ್ಮೆ ''ರಮಣ ಸದ್ಗುರು, ರಾಯನೆ'' ಎಂಬ ನುಡಿಯನ್ನು ಸಾಮೂಹಿಕವಾಗಿ ಹಾಡುತ್ತಿದ್ದಾಗ ಮಹರ್ಷಿಯೂ ಇತರರ ಜೊತೆ ಆ ನುಡಿಯನ್ನು ಹಾಡುತ್ತ ತಾಳಹಾಕಲು ಪ್ರಾರಂಭಿಸಿದರು. ಪ್ರತಿಯೊಬ್ಬರ ಹೃದಯದಲ್ಲೂ ಇರುವ ನಿಜವಾದ ಗುರುವಿನ ಗುಣಗಳನ್ನು ಹಾಡುವಲ್ಲಿ ಕಣ್ಣುಕಿವಿಗಳಿಗೆ ಗೋಚರನಾದ ವ್ಯಕ್ತಿಯೂ ಇತರರೊಡನೆ ತನ್ನ ದನಿಯನ್ನು ಕೂಡಿಸ-ಬಹುದೆಂದು ಅವರು ತರುವಾಯ ವಿವರಿಸಿದರು. ಇನ್ನೊಂದು ಸಂದರ್ಭದಲ್ಲಿ, ಯಾವುದೋ ತೈಲವನ್ನು ತಮ್ಮ ಮಂಡಿಗೆ ಉಜ್ಜುವ ಕೆಲಸದಲ್ಲಿ ತಮ್ಮ ಪರಿಚಾರಕರೊಂದಿಗೆ ತಾವೂ ಸರದಿ ವಹಿಸುತ್ತ ಅವರು ''ನಾನು ನನಗೂ ಸಹ ಏಕೆ ಸ್ವಲ್ಪ ಪುಣ್ಯ ಗಳಿಸಿಕೊಳ್ಳಬಾರದು?'' ಎಂದು ಕೇಳಿದರು. ಒಂದು ಸಲ, ಬಾಲ್ಯದಲ್ಲಿ ಅವರೊಂದಿಗೆ ಆಟವಾಡುತ್ತಿದ್ದ ತಿರುಚುಳಿ ಹೆಂಗಸೊಬ್ಬರು ಆಶ್ರಮಕ್ಕೆ ಬಂದು, ದೇವರಿಗೋ ಎಂಬಂತೆ ತೆಂಗಿನಕಾಯನ್ನು ಒಡೆದು ಅವರಿಗೆ ಅರ್ಪಿಸಲು ಅದರ ಜುಟ್ಟನ್ನು ಬಿಡಿಸಲು ಕಷ್ಟಪಡುತ್ತಿದ್ದಾಗ ಅವರು ಕಾಯಿಯನ್ನು ಆಕೆಯ ಕೈಗಳಿಂದ ತೆಗೆದುಕೊಂಡು ಅದರ ನಾರನ್ನು ತೆಗೆದು ತಾವೇ ಅದನ್ನು ಒಡೆದುಕೊಂಡರು. ಇದು ಅಲ್ಲಿದ್ದವರೆಲ್ಲರಿಗೂ ವಿನೋದ ಉಂಟು ಮಾಡಿತು. ಭಕ್ತರೊಬ್ಬರಿಗೆ ಸಹಾಯ ನೀಡುವುದರಲ್ಲಿ ತಪ್ಪೇನಿದೆ?

ಅನೇಕ ವರ್ಷಗಳಿಂದ ಭಕ್ತೆಯಾಗಿದ್ದ ಒಬ್ಬ ಮುದಲಿಯಾರ್ ಅಜ್ಜಿ ಪ್ರತಿದಿನವೂ ಮಹರ್ಷಿಗಳಿಗೆ ಊಟ ತರುತ್ತಿದ್ದಳು. ಒಂದು ದಿನ ಅವರು ತಾವು ತಿನ್ನಲು ಆಗುವುದ-ಕ್ಕಿಂತಲೂ ಹೆಚ್ಚಾಗಿ ಆಕೆ ಆಹಾರ ಬಡಿಸುತ್ತಿರುವುದಾಗಿ ಹೇಳಿದರು. ತಾನು ಅಂಥದೇನನ್ನೂ

ಮಾಡುತ್ತಿಲ್ಲವೆಂದು ಆಕೆ ಬಹಳ ಸಲಿಗೆಯಿಂದ ತಿಳಿಸಿ, ಇನ್ನೊಂದು ಹಿಡಿ ಅನ್ನವನ್ನು ಅವರ ಎಲೆಯ ಮೇಲೆ ತಳ್ಳುತ್ತ, ''ಅದೆಲ್ಲ ಮನಸ್ಸಿನ ಕಲ್ಪನೆ, ಅಲ್ಲವೆ?'' ಎಂದು ಕೇಳಿದಳು. ಮಹರ್ಷಿ ನಗುತ್ತ ತಮ್ಮ ಸೋಲನ್ನು ಒಪ್ಪಿಕೊಂಡರು. ''ಈಕೆ ನನ್ನ ಮಾತನ್ನು ನನಗೆ ತಿರುಗಿಸುತ್ತಿದ್ದಾಳೆ'' ಎಂದು ಪೆಚ್ಚು ಮೋರೆಯಿಂದ ನುಡಿದರು.

ಊಟದ ಹಜಾರದಲ್ಲಿ ಹಣ್ಣು ಮತ್ತು ವಿಶೇಷ ಭಕ್ಷ್ಯಗಳನ್ನು ಇತರರಿಗೆ ಮೊದಲು ಬಡಿಸಿ ಕೊನೆಯಲ್ಲಿ ಮಹರ್ಷಿಗಳಿಗೆ ಬಡಿಸಬೇಕಾಗಿತ್ತು. ಇದರಿಂದ ಎಲ್ಲರಿಗೂ ಸಮಾನವಾಗಿ ಅಡಿಗೆಯ ಪದಾರ್ಥ ವಿತರಣೆ ಆಗುತ್ತಿತ್ತು. ಅವರು ''ಆಕಸ್ಮಾತ್ತಾಗಿ ನನಗೆ ಏನೂ ಉಳಿಯದಿದ್ದಲ್ಲಿ ಅದೇನೂ ಪರವಾಗಿಲ್ಲ. ಇಲ್ಲಿರುವ ಎಲ್ಲರೂ ಊಟಮಾಡಿದರೆ ನಾನು ಊಟ ಮಾಡಿದಂತೆಯೇ'' ಎನ್ನುತ್ತಿದ್ದರು. ಹಣ್ಣು, ಬಾದಾಮಿ ಮೊದಲಾದ ವಿಶೇಷ ಆಹಾರವನ್ನು ತೆಗೆದುಕೊಳ್ಳುವಂತೆ ಸೂಚಿಸಿದಾಗ ಅವರು ಅದನ್ನು ನಿರಾಕರಿಸುತ್ತ, ''ನಾನೊಬ್ಬ ದರಿದ್ರ ನಾರಾಯಣ. ನನಗೆ ಅದನ್ನು ಕೊಳ್ಳುವ ಶಕ್ತಿಯೆಲ್ಲಿ? ನಾನೊಬ್ಬನೇ ವ್ಯಕ್ತಿಯೇ? ನನ್ನದು ಎಷ್ಟು ದೊಡ್ಡ ಸಂಸಾರ ಎನ್ನುವುದನ್ನು ನೋಡಿ, ಇವರೆಲ್ಲರಿಗೂ ಹಣ್ಣು, ಬಾದಾಮಿ ಮೊದಲಾದವು ಸಿಗುವುದು ಹೇಗೆ?'' ಎನ್ನುತ್ತಿದ್ದರು.

ಪುರಿ ಶಂಕರಚಾರ್ಯರು ಆಶ್ರಮಕ್ಕೆ ಭೇಟಿಯಿತ್ತ ಸಂದರ್ಭದಲ್ಲಿ ಸಾಂಪ್ರದಾಯಿಕ ಉಡುಗೊರೆಯಾಗಿ ಜರಿಶಾಲು ಮತ್ತು 116 ರೂಪಾಯಿ ಹಣವನ್ನು ನೀಡಲು ಬಯಸಿದಾಗ, ಆ ಹಣವನ್ನು ಹಿಂತೆಗೆದುಕೊಳ್ಳುವಂತೆ ಅವರನ್ನು ಒಪ್ಪಿಸಲಾಯಿತು. ಆದರೆ ಶಾಲನ್ನು ಸ್ವೀಕರಿಸುವಂತೆ ಮಹರ್ಷಿಯನ್ನು ಒಪ್ಪಿಸಲಾಯಿತು. ಆದರೂ ತರುವಾಯ ಅವರು ಶಾಲಿನ ಜರಿ ಅಂಚನ್ನು ಹರಿದು ಹಾಕಿ, ಅಂಚುಗಳನ್ನು ಹೊಲಿಸಿ, ಚಳಿಗಾಲದಲ್ಲಿ ಅದನ್ನು ಹೊದೆಯಲು ಬಳಸುತ್ತಿದ್ದರು.

ಆಂಧ್ರದ ದಂಪತಿಗಳೊಬ್ಬರು ಆಶ್ರಮದಲ್ಲಿ ಎರಡು ತಿಂಗಳು ವಾಸವಾಗಿದ್ದರು. ಹೆಂಡತಿ ಮನೆಗೆ ವಾಪಸಾಗಬೇಕೆಂದರೆ ಗಂಡನು ಅದಕ್ಕೆ ಒಪ್ಪದೆ ಹೋದಾಗ ಮಹರ್ಷಿಗಳು, ''ಅಯ್ಯೋ, ನಿನ್ನ ಸಂಸಾರವನ್ನು ತೊರೆದು ಎಲ್ಲಿಗೆ ಹೋಗಬಲ್ಲೆ? ಆಕಾಶಕ್ಕೆ ಹಾರಿ ಹೋಗುತ್ತೀಯಾ? ಏನೇ ಆಗಲಿ, ಈ ಭೂಮಿಯ ಮೇಲೆಯೇ ಇರಬೇಕಾಗಿದೆ. ನೀನು ಎಲ್ಲಿರುತ್ತೀಯೋ, ಅಲ್ಲಿ ಸಂಸಾರವಿರುತ್ತದೆ. ನಾನು ಎಲ್ಲವನ್ನೂ ತ್ಯಜಿಸುತ್ತಿದ್ದೇನೆ ಎಂದುಕೊಂಡು ನಾನಿಲ್ಲಿಗೆ ಬಂದೆ. ಆದರೆ, ನೋಡು, ಈಗ ಎಷ್ಟು ದೊಡ್ಡ ಸಂಸಾರ ಇದೆ. ನಿನ್ನ ಸಂಸಾರಕ್ಕಿಂತ ಅದು ನೂರರಷ್ಟು ದೊಡ್ಡದಾಗಿದೆ'' ಎಂದರು. ಇನ್ನೊಮ್ಮೆ ಅವರು ವ್ಯಸನದಿಂದ ನುಡಿದರು: ''ನನ್ನ ತಾಯಿ ತೀರಿಕೊಂಡಾಗ, ನಾನು ಬಂಧನದಿಂದ ತಪ್ಪಿಸಿಕೊಂಡೆ ಮತ್ತು ಒಂದಲ್ಲ ಒಂದು ಗುಹೆಯಲ್ಲಿ ಏಕಾಂಗಿಯಾಗಿ ಜೀವಿಸಬಹುದು ಎಂದು ಭಾವಿಸಿದ್ದೆ. ಆದರೆ ವಾಸ್ತವವಾಗಿ ನಾನು ಈಗ ಇನ್ನೂ ಹೆಚ್ಚಿನ ಬಂಧನದಲ್ಲಿದ್ದೇನೆ. ಹೊರಗೆ ಹೋಗಲೂ ನನಗೆ ಅವಕಾಶವಿಲ್ಲ.'' ಸೂರಿ ನಾಗಮ್ಮ ನುಡಿದಂತೆ, ಇದಕ್ಕೆ ಕಾರಣ. ''ಅವರಿಗಿದ್ದ ತಾಯಿ ಒಬ್ಬಳೇ ಒಬ್ಬಳು, ಮಕ್ಕಳಾದರೋ ಸಾವಿರಾರು.'' ಅನಂತರದ ಸಂದರ್ಭ ವೊಂದರಲ್ಲಿ (1945) ಅವರು: ''ಸ್ವಾಮಿಪಟ್ಟ ಬಹಳ ತೊಡಕಿನ ವೃತ್ತಿ, ನಾನು ಇದನ್ನು ಐವತ್ತು ವರ್ಷಗಳ ಅನುಭವದಿಂದ ಹೇಳುತ್ತಿದ್ದೇನೆ. ಅವರು ನನ್ನ ಸುತ್ತಲೂ ಮರದ ಕಟಕಟೆ ಹಾಕಿಬಿಟ್ಟಿದ್ದಾರೆ. ಅದನ್ನು ನಾನು ಹಾಯವಂತಿಲ್ಲ: ಸರಿದಿಯ ಮೇಲೆ ನನ್ನನ್ನು ಕಾಯಲು

ವಿಶೇಷ ಜನರನ್ನು ನೇಮಿಸಿದ್ದಾರೆ. ನನಗೆ ಬೇಕಾದಂತೆ ನಾನು ಓಡಾಡುವಂತಿಲ್ಲ. ಇದಕ್ಕೂ ಸೆರೆಮನೆಯಲ್ಲಿರುವುದಕ್ಕೂ ಏನು ವ್ಯತ್ಯಾಸ?'' ಎಂದು ಗೋಳಾಡಿದರು.

# ಅಧ್ಯಾಯ 7

# ರಮಣಾಶ್ರಮ: ಸಾನ್ನಿಧ್ಯದ ಶಕ್ತಿ

ಪಶ್ಚಿಮ ಖಂಡದಲ್ಲಿ ಮಹರ್ಷಿಗಳ ಕೀರ್ತಿ ಮತ್ತು ಸಂದೇಶಗಳನ್ನು ಹರಡಲು ಬಹಳ ಶ್ರಮಿಸಿದವರು ಆಶ್ರಮಕ್ಕೆ ಭೇಟಿಯಿತ್ತ ಪಾಲ್ ಬ್ರಂಟನ್. ಈತನನ್ನು ಮಹರ್ಷಿಗಳ ಬಳಿಗೆ ಕಳುಹಿಸಿದವರು ಕಂಚಿಯ ಶಂಕರಾಚಾರ್ಯರಾದ ಶ್ರೀ ಚಂದ್ರಶೇಖರ ಸರಸ್ವತಿ ಮಹಾಸ್ವಾಮಿಗಳಂತಹ ದೊಡ್ಡ ಆಧ್ಯಾತ್ಮಿಕ ಗುರುಗಳು ಎಂಬುದು ಗಮನಿಸಬೇಕಾದ ಸಂಗತಿ. ಮಹರ್ಷಿಗಳ ಮೌನ ಸಾನ್ನಿಧ್ಯ ತನ್ನ ಮೇಲೆ ಬೀರಿದ ಪ್ರಭಾವವನ್ನು ಪಾಲ್ ಬ್ರಂಟನ್ ಹೀಗೆ ವರ್ಣಿಸುತ್ತಾನೆ: ''ನಾನು ನನ್ನ ದೃಷ್ಟಿಯನ್ನು ಅವರಿಂದ ಬೇರೆಡೆಗೆ ತಿರುಗಿಸಲಾರೆ. ಈ ವಿಚಿತ್ರವಾದ ಆಕರ್ಷಣೆ ನನ್ನನ್ನು ಹೆಚ್ಚು ಭದ್ರವಾಗಿ ಹಿಡಿಯುತ್ತಿದ್ದಂತೆ ಪ್ರಾರಂಭದಲ್ಲಿ ನನಗೆ ಉಂಟಾದ ದಿಗ್ಭ್ರಮೆಯ ಮತ್ತು ನನ್ನನ್ನು ಸಂಪೂರ್ಣವಾಗಿ ಅವರು ಉಪೇಕ್ಷಿಸಿದುದ-ರಿಂದ ನನಗುಂಟಾದ ಗೊಂದಲ ನಿಧಾನವಾಗಿ ಅದೃಶ್ಯವಾಗುತ್ತದೆ. ಆದರೂ ನನ್ನ ಮನಸ್ಸಿನೊಳಗೆ ಜರುಗುತ್ತಿರುವ ನಿಶ್ಶಬ್ದವಾದ ಪ್ರತಿರೋಧಿಸಲಾಗದ ಬದಲಾವಣೆಯ ಅರಿವು ನನಗೆ ಈ ಅಸಾಧಾರಣ ದೃಶ್ಯದ ಎರಡನೆ ಗಂಟೆಯವರೆಗೆ ಆಗುವುದಿಲ್ಲ. ರೈಲಿನಲ್ಲಿ ನಾನು ಅಷ್ಟು ಸೂಕ್ಷ್ಮ ನಿಷ್ಪೃಷ್ಟತೆಯಿಂದ ತಯಾರಿಸಿದ್ದ ಪ್ರಶ್ನೆಗಳು ಒಂದೊಂದಾಗಿ ಕಳಚಿ ಬೀಳುತ್ತವೆ. ಏಕೆಂದರೆ ಇದುವರೆಗೆ ನನ್ನನ್ನು ಕಾಡಿದ್ದ ಸಮಸ್ಯೆಗಳನ್ನು ಪರಿಹರಿಸುವುದು ಈಗ ಅಂಥ ಮಹತ್ವದ್ದಾಗಿ ಕಾಣಿಸುವುದಿಲ್ಲ. ಈಗ ನನಗೆ ಅರಿವಾಗುತ್ತಿರುವುದು ಶಾಂತಿಯ ನದಿಯೊಂದು ನನ್ನ ಬಳಿ ಒಂದೇ ಸಮನಾಗಿ ಹರಿಯುತ್ತಿದೆ, ನನ್ನ ಇರವಿನ ಒಳ ಪ್ರದೇಶಗಳಿಗೆ ಮಹಾಶಾಂತಿಯೊಂದು ನುಗ್ಗುತ್ತಿದೆ ಮತ್ತು ಆಲೋಚನೆಗಳು ಕಾಡಿದ್ದ ನನ್ನ ಮಿದುಳು ಸ್ವಲ್ಪ ವಿಶ್ರಾಂತಿಯನ್ನು ಪಡೆಯಲು ಪ್ರಾರಂಭಿಸಿದೆ ಎಂಬುದಷ್ಟೇ.'' ಸಿದ್ಧಾಂತಕ್ಕಿಂತಲೂ ಜೀವಂತ ವ್ಯಕ್ತಿಯ ಮಹತ್ವ ಹೆಚ್ಚಿನದು ಎಂಬುದು ಹಿಂದೂ ಸಂಪ್ರದಾಯದ ಒಂದು ಅಂಶ. ಇಂಗ್ಲಿಷ್ ಪತ್ರಕರ್ತ ದೃಢೀಕರಿಸಿದ್ದು ಈ ಅನುಭವವನ್ನೇ. ಇತ್ತೀಚೆಗೆ ಇದನ್ನು ಕಂಚಿ ಆಚಾರ್ಯರು ಸ್ವತಃ ಹೀಗೆ ಸ್ಥಿರಪಡಿಸಿದ್ದಾರೆ: ''ಯಾವುದೇ ಧರ್ಮ ತನ್ನ ಸಿದ್ಧಾಂತಗಳಿಂದಾಗಿ ಹರಡುವುದಿಲ್ಲ. ಜನ ಸಿದ್ಧಾಂತಕ್ಕೆ ಹೆಚ್ಚು ಗಮನ ಕೊಡುವುದಿಲ್ಲ. ಕರುಣೆ ಮತ್ತು ಶಾಂತಿಗಳಿಂದ ತುಂಬಿದ್ದು, ಜೀವನ ಮತ್ತು ಆಚಾರ ವ್ಯವಹಾರಗಳಲ್ಲಿ ಅತ್ಯುತ್ತಮನಾದ ವ್ಯಕ್ತಿಯೊಬ್ಬನು ಕಾಣಿಸಿಕೊಂಡಾಗ, ಅವನನ್ನು ಕಂಡ ಕ್ಷಣವೇ ಜನ ಅವನನ್ನು ನಂಬುತ್ತಾರೆ. ಆದರೆ ಸಿದ್ಧಾಂತವೊಂದು ಎಷ್ಟೇ ಸರಿಯಾಗಿರಲಿ ಅಥವಾ ಸತ್ಯವಾಗಿರಲಿ, ಅದರ ಪ್ರತಿಪಾದಕರು ಆಚಾರದಲ್ಲಿ ಅದನ್ನು ಪಾಲಿಸದಿದ್ದಲ್ಲಿ ಸಾಮಾನ್ಯ ಜನಕ್ಕೆ ಅದು ಸ್ವಲ್ಪವೂ ಹಿಡಿಸುವುದಿಲ್ಲ.'' ಮಹರ್ಷಿಗಳು ಪ್ರತಿಯೊಂದು ನಡೆನುಡಿಯಲ್ಲಿಯೂ ಅದನ್ನು ತೋರಿಸುವುದರ ಮೂಲಕ ಅದನ್ನು ಹರಡಿದರು.

ಮಹರ್ಷಿ ತನಗೆ ಇದನ್ನು ಹೇಳಿದುದಾಗಿ ಬ್ರಂಟನ್ ಉಲ್ಲೇಖಿಸುತ್ತಾನೆ: "ಎಲ್ಲ ಮಾನವರೂ ದುಃಖದ ಸೋಂಕಿಲ್ಲದ ಸುಖವನ್ನು ಸದಾ ಅಪೇಕ್ಷಿಸುತ್ತಿರುತ್ತಾರೆ. ಈ ಪ್ರವೃತ್ತಿ ಸರಿಯಾದುದೇ... ಆದರೆ ಅವರು ತಮ್ಮನ್ನೇ ಎಲ್ಲಕ್ಕಿಂತ ಹೆಚ್ಚು ಪ್ರೀತಿಸುತ್ತಾರೆ... ಒಂದಲ್ಲ ಒಂದು ಸಾಧನದ ಮೂಲಕ, ಮದ್ಯಪಾನದ ಮೂಲಕ ಅಥವಾ ಮತದ ಮೂಲಕ, ಅವರು ಸುಖಗಳನ್ನು ಪಡೆಯಲು ಸದಾ ಹಾತೊರೆಯುತ್ತಾರೆ... ಮಾನವನ ನಿಜಸ್ವರೂಪವೇ ಸುಖ. ಸುಖಕ್ಕಾಗಿ ಅವನ ಅನ್ವೇಷಣೆ ಅವನ ನಿಜಸ್ವರೂಪದ ಅಪ್ರಜ್ಞಾಪೂರ್ವಕ ಅನ್ವೇಷಣೆಯಾಗಿರುತ್ತದೆ. ನೀನು ಮಾನಸಿಕವಾಗಿ 'ನಾನು' ಎಂಬ ಸೂತ್ರವನ್ನು ಅದು ನಿನ್ನನ್ನು ಹಿಂದಕ್ಕೆ ಅದರ ಮೂಲದವರೆಗೆ ಒಯ್ಯುವ ತನಕ ಅನುಸರಿಸಿದಲ್ಲಿ, ಅದು ಮೊದಲು ಕಾಣಸಿಕೊಳ್ಳುವ ಭಾವನೆಯಾಗಿರುವಂತೆಯೇ ಕಾಣದಾಗುವ ಕೊನೆಯ ಭಾವನೆಯೂ ಆಗಿರುತ್ತದೆ ಎಂಬುದನ್ನು ಕಂಡುಕೊಳ್ಳುತ್ತೀಯೆ...ಮಾನವನ ಬಹಳ ದೊಡ್ಡ ತಪ್ಪೆಂದರೆ ತಾನು ಸ್ವರೂಪತಃ ದುರ್ಬಲ, ಸ್ವಭಾವತಃ ಕೆಟ್ಟವನು ಎಂದುಕೊಳ್ಳುವುದು. ಪ್ರತಿಯೊಬ್ಬ ವ್ಯಕ್ತಿಯೂ ಅವನ ನಿಜ ಸ್ವರೂಪದಲ್ಲಿ ದೈವಾಂಶ ಮತ್ತು ಶಕ್ತ. ಅವನಲ್ಲಿ ದುರ್ಬಲ-ವಾಗಿರುವುದು ಅವನ ಅಭ್ಯಾಸಗಳು, ಆಸೆಗಳು ಮತ್ತು ಆಲೋಚನೆಗಳೇ ವಿನಾ ಅವನೇ ಅಲ್ಲ."

ಬ್ರಂಟನ್‌ನ ಗ್ರಂಥವನ್ನು ಓದಿ 1935ರಲ್ಲಿ ತಿರುವಣ್ಣಾಮಲೆಗೆ ಬಂದ ಮೇಜರ್ ಚಾಡ್ವಿಕ್ ಮಹರ್ಷಿಗಳನ್ನು ಮೊದಲ ಬಾರಿಗೆ ಕಂಡಾಗ ತನ್ನಲ್ಲಾದ ಪ್ರತಿಕ್ರಿಯೆಗಳನ್ನು ಹೀಗೆ ನಿರೂಪಿಸಿದ್ದಾನೆ: "ಅವರ ಸಾನ್ನಿಧ್ಯದ, ಅವರ ಅನುಗ್ರಹದ ಪರಮ ಶಾಂತಿಯ ಅರಿವು ನನಗೆ ಒದಗಿತು. ಅವರನ್ನು ಮೊದಲಬಾರಿಗೆ ಭೇಟಿಮಾಡುತ್ತಿದ್ದೇನೆ ಎಂದು ಅನಿಸಲಿಲ್ಲ. ಎಂದಿನಿಂದಲೂ ಅವರು ನನಗೆ ಪರಿಚಿತರಾಗಿದ್ದರು ಎಂದು ಕಂಡಿತು.... ಅವರು ನಿಮ್ಮದೇ ಭಾವನೆಗಳನ್ನು ಪ್ರತಿಫಲಿಸುವ ಒಂದು ಕನ್ನಡಿಯಂತಿದ್ದರು. ನೀವು ಸಂಕೋಚ ಮತ್ತು ಭಯಗಳಿಂದ ಕೂಡಿದವರಾಗಿದ್ದರೆ, ಅವರು ಜನಗಳೊಡನೆ ಬೆರೆಯದೆ ದೂರವಾಗಿರುವ ವ್ಯಕ್ತಿಯಂತೆ ಕಾಣುತ್ತಿದ್ದರು. ಅದರ ಬದಲು ಅವರ ಸಾನ್ನಿಧ್ಯದ ಸರ್ವವ್ಯಾಪ್ತಿ ಪ್ರೀತಿವಿಶ್ವಾಸಕ್ಕೆ ನೀವು ಸಂಪೂರ್ಣವಾಗಿ ಸಹಜವಾದ ಪ್ರತಿಕ್ರಿಯೆ ತೋರಿದ್ದಲ್ಲಿ, ಅವರು ನಿಮ್ಮನ್ನು ತಮ್ಮವರಲ್ಲಿ ಒಬ್ಬರನ್ನಾಗಿ ಕಾಣುತ್ತಿದ್ದರು." ಮನಸ್ಸು ಎನ್ನುವುದು ಭಾವನೆಗಳಿಂದ ಕಲ್ಪಿತವಾದುದು ಮತ್ತು ಎಲ್ಲ ಭಾವನೆಗಳ ಮೂಲ 'ನಾನು' ಎಂಬ ಭಾವನೆ ಎಂಬುದನ್ನು ಮಹರ್ಷಿಗಳಿಂದ ಅರಿತ ಚಾಡ್ವಿಕ್ ತನ್ನ 'ಅಹಂ' ಕಾರವು ತನ್ನನ್ನು ಕಾಡಲು ಎಂದೆಂದಿಗೂ ಹಿಂದಕ್ಕೆ ಬರದೆ ನೆಮ್ಮದಿಯಿಂದ ನೆಲಸುವಂತಾಗಲು ಅದಕ್ಕೆ ಒಂದು ಸಣ್ಣ ಸಮಾಧಿಯನ್ನು ಕಟ್ಟಿಕೊಟ್ಟು, ತನ್ನ 'ಅಹಂ' ಕಾರದ ಸಾವು ಮತ್ತು ಅದರ ಸಮಾಧಿಗೆ ಒಂದು ನಾಟಕೀಯ ರೂಪವನ್ನು ಇತ್ತನು. ಅವನು ಆಶ್ರಮದ ಕಾಯಂ ನಿವಾಸಿಯಾಗಿ, ವೇದಪಾರಾಯಣ ಮತ್ತು ದೇವಾಲಯದ ಪೂಜಾಕರ್ಮಗಳನ್ನು ವ್ಯವಸ್ಥೆ ಮಾಡುವಲ್ಲಿ ಬಹಳ ಆಸಕ್ತಿ ವಹಿಸಿದನು.

ಕಾಲೇಜಿನಲ್ಲಿ ಉಪಾಧ್ಯಾಯರಾಗಿದ್ದ ಕೆ. ಸುಬ್ರಹ್ಮಣ್ಯಂ 1940ರಲ್ಲಿ ಮಹರ್ಷಿಗಳೊಡನೆ ತಮಗಾದ ಪ್ರಥಮ ಸಂದರ್ಶನವನ್ನು ತಮ್ಮ ಬದುಕಿನಲ್ಲೇ ಅತ್ಯಂತ ಪ್ರಭಾವ-ಶಾಲಿಯಾದ ಅನುಭವವೆಂದು ವರ್ಣಿಸುತ್ತಾರೆ: "ಮನಸ್ಸು ತಾನು ಇದ್ದೇನೆಂಬುದನ್ನು ಅಸ್ಪಷ್ಟವಾಗಿ ಸಹ ಸೂಚಿಸುವುದಕ್ಕೆ ಮೊದಲೇ ನಿಶ್ಚಲವಾಗಿಬಿಟ್ಟಿತು. ಅದರ ಸ್ಥಾನದಲ್ಲಿ

ಕೇವಲ ಶಾಂತಿಯಿಂದ ಕೂಡಿದ್ದ ಭಗವಾನರ ಮೌನಜ್ಞಾನ ನೆಲಸಿತ್ತು. ನಾವು ಇದುವರೆಗೆ ಯಾವುದನ್ನು 'ಮೌನ' ಎಂದು ಕರೆದಿದ್ದೆವೋ ಅದು ಬೇರೆಯಾಗಿತ್ತು. ಅದು ಪ್ರಾಯಶಃ ಮುಂದೆ ಆಡಬೇಕಾಗಿರುವ ಮಾತಿಗಾಗಿ ಸದ್ಯದಲ್ಲಿ ಮುಗಿದುಹೋಗಿರುವ ಚೈತನ್ಯವನ್ನು ತುಂಬಿಕೊಳ್ಳಲು ಮಾತಾಡುವುದರಿಂದ ವಿರಮಿಸುವುದು ಅಥವಾ ಒಂದು ಬಗೆಯ ಆಂತರಿಕ ಮಾತು, ತಡೆದು ತಡೆದು ಬರುವ ಆದರೆ ಅವುಗಳ ಉಚ್ಚಾರಣೆ ಮಾತ್ರ ಇತರರಿಗೆ ಕೇಳಿಸದ ಆಲೋಚನೆಗಳ ಒಂದು ಸರಣಿ ಆಗಿದ್ದಿತು. ಆ ಕ್ಷಣ ಅದೃಶ್ಯವಾಯಿತು. ಆದರೆ ನನ್ನ ಆತ್ಮ ಫಲವಂತವಾಯಿತು. ಅಲ್ಲಿಂದಾಚೆಗೆ ಮೌನ ಮತ್ತು ಏಕಾಂತತೆ ನನಗೆ ದಿಗಿಲು ಉಂಟುಮಾಡಲಾಗದಾದವು. ನಿರ್ವಾಣ, ಶೂನ್ಯತೆ ಎಂಬ ಶಬ್ದಗಳನ್ನು ಹೆದರಿಕೆಯ ಗಾಬರಿಯಿಂದಲ್ಲದೆ ಪೂಜ್ಯಭಾವನೆಯಿಂದ ಪರಿಗ್ರಹಿಸುವಂತಾಯಿತು.''

ಒಡೆದ ಮನಸ್ಸು ಮತ್ತು ಕದಡಿದ ಹೃದಯಗಳ ಹೆಂಗಸರು ಮತ್ತು ಗಂಡಸರು ಮಹರ್ಷಿಗಳ ಸಮ್ಮುಖದಲ್ಲಿ ಶಾಂತಿಯನ್ನು ಪಡೆದರೆ, ಪಕ್ಷಿಗಳು ಮತ್ತು ಪ್ರಾಣಿಗಳು ಅವರೊಡನೆ ಸಂಪೂರ್ಣ ಸಲಿಗೆಯಿಂದಿದ್ದವು. ಬೆಟ್ಟದ ಮೇಲಿನ ವಿವಿಧ ಗುಹೆಗಳಲ್ಲಿ ಅವರು ವಾಸಿಸುತ್ತಿದ್ದಾಗ, ಕೆಲವು ವೇಳೆ ಹಾವುಗಳು ಮತ್ತು ಚೇಳುಗಳು ಹೆದರಿಕೆಯನ್ನು ಹುಟ್ಟಿಸದೆ ಅಥವಾ ಪಡದೆ, ಯಾವ ಅಪಾಯವನ್ನೂ ಮಾಡದೆ ಅವರ ಮೈಮೇಲೆ ಹರಿದಾಡುತ್ತಿದ್ದವು. ರಮಣಾಶ್ರಮದಲ್ಲಿ ವಿಶಿಷ್ಟವಾದ ಅಕ್ಕರೆಯ ಸ್ಥಾನವನ್ನು ಪಡೆದಿದ್ದ ಲಕ್ಷ್ಮಿ ಎಂಬ ಹಸುವಿನ ಜೊತೆಗೆ, ಅಳಿಲು, ಗುಬ್ಬಚ್ಚಿ, ನವಿಲು, ನಾಯಿ ಮತ್ತು ಕಪಿಗಳ ಒಂದು ದೊಡ್ಡ ಗುಂಪೇ ಆಶ್ರಮವನ್ನು ತಮ್ಮ ಮನೆಯೆಂದೆಣಿಸಿ ಅಲ್ಲಿನ ಇತರ ನಿವಾಸಿಗಳು ಅಥವಾ ಸಂದರ್ಶಕರಂತೆಯೇ ಮಹರ್ಷಿಗಳ ಕರುಣಾಕಟಾಕ್ಷವನ್ನು ಪಡೆದಿದ್ದವು. ಕೆಲವು ಸಲ ಆಶ್ರಮದ ಮುದ್ದು ಪ್ರಾಣಿಯೊಂದು ತೀರಿಕೊಂಡಾಗ ಅದನ್ನು ಭೂಮಿಯಲ್ಲಿ ಹೂಳಿ, ಪ್ರೀತಿಯ ಸ್ಮಾರಕವಾಗಿ ಅದರ ಮೇಲೊಂದು ಚಿಕ್ಕ ಸಮಾಧಿಯನ್ನು ಕಟ್ಟಲಾಗುತ್ತಿತ್ತು.

ಒಂದು ಸಲ ಬೆಂಗಳೂರಿನ ಭಕ್ತರೊಬ್ಬರು ಪಾರಿವಾಳದ ಜೋಡಿಯೊಂದನ್ನು ಕಾಣಿಕೆಯಾಗಿ ತಂದರು. ಆಶ್ರಮದ ಕೆಲಸಕಾರ್ಯಗಳ ಜೊತೆಗೆ ಪಾರಿವಾಳಗಳನ್ನು ನೋಡಿಕೊಳ್ಳುವುದು, ಅವಕ್ಕೆ ಆಹಾರ ನೀಡುವುದು, ಅವನ್ನು ಬೆಕ್ಕುಗಳಿಂದ ಕಾಪಾಡುವುದು ಮುಂತಾದವನ್ನು ಸೇರಿಸಲು ಮಹರ್ಷಿಗಳಿಗೆ ಮನಸ್ಸಿಲ್ಲದಿದ್ದರೂ ಆ ಕಾಣಿಕೆಯನ್ನು ಸ್ವೀಕರಿಸುವಂತೆ ಅವರನ್ನು ಒತ್ತಾಯಪಡಿಸಲಾಯಿತು. ಅವರು ಪಾರಿವಾಳಗಳನ್ನು ಕೈಗೆ ತೆಗೆದುಕೊಂಡು, ಸ್ವಲ್ಪ ಹೊತ್ತು ಅವನ್ನು ಪ್ರೀತಿಯಿಂದ ಮುದ್ದಿಸಿ, ಮೌನವಾಗಿ ಸಮಾಧಿಯನ್ನು ಹೊಕ್ಕರು. ಪಂಜರವೊಂದನ್ನು ಹುಡುಕಿ ತರಲು ಸುಮಾರು ಒಂದು ಗಂಟೆಯ ಕಾಲ ಬೇಕಾಯಿತು. ಅಷ್ಟು ಹೊತ್ತು ಆ ಪಾರಿವಾಳಗಳು, ತಾವೂ ಸಮಾಧಿಯಲ್ಲಿರುವ ಯೋಗಿಗಳ ಒಂದು ಜೋಡಿಯೋ ಎಂಬಂತೆ, ಮಹರ್ಷಿಗಳ ತೊಡೆಯ ಮೇಲೆ ಅಲುಗಾಡದೆ ಕುಳಿತಿದ್ದವು. ಅವರು ಹೀಗೆಂದರು ''ಯಾರಿಗೆ ಗೊತ್ತು? ಬರುತ್ತಾರೆ, ಆದರೆ ವಾಪಸು ಹೋಗಲು ಒಪ್ಪುವುದಿಲ್ಲ... ಈಗಿರುವುದು ನನಗೆ ಸಾಲದು ಎಂಬಂತೆ, ಇನ್ನೊಂದು ಸಂಸಾರ ಬಂದು ನನ್ನನ್ನು ಕೂಡಿಕೊಂಡಿತು.''

ಪ್ರಾಣಿಗಳು ಸ್ನೇಹಿತರು ಮಾತ್ರವಲ್ಲ, ಗುರುಗಳೂ ಆಗಬೇಕು. ಅವರು ಒಮ್ಮೆ ಹೇಳಿದರು: ''ಈ ಅಳಿಲುಗಳ ವಿಷಯದಲ್ಲಿ ಒಂದು ವಿಶೇಷವಿದೆ. ಅವುಗಳ ಮುಂದೆ ನೀವು

ಎಷ್ಟೇ ಆಹಾರವಿಡಿ. ಅವು ತಮಗೆ ಬೇಕಾದಷ್ಟನ್ನು ಮಾತ್ರ ತಿಂದು, ಉಳಿದುದನ್ನು ಅಂತೆಯೇ ಬಿಡುತ್ತವೆ. ಇಲಿ ಅಂತಲ್ಲ. ತನಗೆ ಸಿಕ್ಕಿದ ಎಲ್ಲವನ್ನೂ ತೆಗೆದುಕೊಂಡು ಹೋಗಿ ತನ್ನ ಬಿಲದಲ್ಲಿ ಅದನ್ನು ಸಂಗ್ರಹಿಸಿಡುತ್ತದೆ.'' ಅಲ್ಲಿದ್ದವರಲ್ಲಿ ಒಬ್ಬರು ಅಂದರು: ''ಪ್ರಾಯಶಃ ಅಳಿಲು ಹೆಚ್ಚು ಬುದ್ಧಿವಂತ ಪ್ರಾಣಿಯಲ್ಲ ಎನ್ನಬಹುದು, ಏಕೆಂದರೆ ಅದು ಭವಿಷ್ಯತ್ತಿಗಾಗಿ ಯೋಜನೆ ಅಥವಾ ಏರ್ಪಾಡು ಮಾಡಿಕೊಳ್ಳುವುದಿಲ್ಲ. ಅದರ ಬದಲು ವರ್ತಮಾನ ಕಾಲಕ್ಕೆ ಮಾತ್ರ ಬದುಕುತ್ತದೆ.'' ''ಹೌದು'' ಎಂದು ಮಹರ್ಷಿ ಉತ್ತರ ನೀಡಿದರು. ''ನಾವು ಯೋಜನೆ ಹಾಕಿಕೊಂಡು ಕಾರ್ಪಣ್ಯದಿಂದ ಜೀವನ ನಡೆಸುವುದು ಬುದ್ಧಿವಂತಿಕೆ ಎಂಬುದು ನಮ್ಮ ಭಾವನೆ. ಆದರೆ ನೋಡಿ, ಯೋಜನೆಯನ್ನು ಹಾಕದೆ ಮತ್ತು ಕೂಡಿಡದೆ ಎಷ್ಟೊಂದು ಪ್ರಾಣಿಗಳು ಮತ್ತು ಪಕ್ಷಿಗಳು ಈ ಪ್ರಪಂಚದಲ್ಲಿ ಬದುಕುತ್ತವೆ. ಕಪಿಗಳು ಕೂಡ ಮನೆಗಳನ್ನು ಕಟ್ಟುವುದಿಲ್ಲ ಅಥವಾ ಪದಾರ್ಥಗಳನ್ನು ಸಂಗ್ರಹಿಸಿಡುವುದಿಲ್ಲ. ಅವು ತಮಗೆ ದೊರಕಿದ್ದನ್ನು ತಿಂದು, ರಾತ್ರಿಯಾದಾಗ ಹೋಗಿ ಮರಗಳ ಮೇಲೆ ಕೂರುತ್ತವೆ. ಅವು ಪೂರ್ತಿ ಸುಖವಾಗಿವೆ.'' ಇನ್ನೊಂದು ಸಂದರ್ಭದಲ್ಲಿ ಅವರು ಹೀಗೆಂದರು: ''ಎಲ್ಲಕ್ಕೂ ಸಾಕಾಗುವಷ್ಟು ಆಹಾರವಿರುವಾಗ ಕಪಿಗಳು ಪರಸ್ಪರ ಕಾದಾಡುವುದಿಲ್ಲ ಅಥವಾ ಕಚ್ಚಾಡುವುದಿಲ್ಲ. ತೊಂದರೆ ಉದ್ಭವಿಸುವುದು ಕೊರತೆಯಿದ್ದಾಗ ಮಾತ್ರವೇ.''

ಮಹರ್ಷಿಗಳಿಗೆ ಪಕ್ಷಿಗಳ ಮತ್ತು ಪ್ರಾಣಿಗಳ ಭಾಷೆ ಅರ್ಥವಾಗುತ್ತಿತ್ತು ಎಂದು ಭಾವಿಸಲು ಆಧಾರವಿದೆ. ಮದ್ರಾಸಿನ ನಿವೃತ್ತ ಮುಖ್ಯ ನ್ಯಾಯಾಧೀಶ ಶ್ರೀ ಅನಂತ ನಾರಾಯಣನ್ ಹೀಗೆ ಬರೆಯುತ್ತಾರೆ:

''ಬರವಣಿಗೆಯಲ್ಲಿ ನಿರತರಾಗಿದ್ದ ಭಗವಾನರು ಬರೆಯುವ ಸಾಮಗ್ರಿ ಮತ್ತು ಕನ್ನಡಕಗಳನ್ನು ಒತ್ತಟ್ಟಿಗಿಟ್ಟು, ಪರಿಚಾರಕರನ್ನು ಕರೆಯುತ್ತಾರೆ.

'ಗುಬ್ಬಚ್ಚಿಗಳ ಜೋಡಿ ಈಗ ತಾನೆ ನನ್ನ ಬಳಿಗೆ ಬಂದು ತಮ್ಮ ಗೂಡನ್ನು ಬೇರೆಡೆಗೆ ಸಾಗಿಸಲಾಗಿದೆ ಎಂದು ದೂರಿತ್ತಿವೆ. ನಾನು ಕತ್ತೆತ್ತಿ ನೋಡಿದರೆ, ಅವುಗಳ ಗೂಡು ಅಲ್ಲಿಲ್ಲ.... ಮಾಧವ, ಗುಬ್ಬಚ್ಚಿಗಳ ಗೂಡನ್ನು ಯಾರಾದರೂ ತೆಗೆದುಹಾಕಿದರೇ?'

ಭಗವಾನರ ಮಂಚದ ಮೇಲೆ ಅವು ತಪ್ಪದೆ ಗೂಡು ಕಟ್ಟುತ್ತಿದ್ದುದು ದೊಡ್ಡ ಫಜೀತಿಯಾಗಿದ್ದುದರಿಂದ, ತಾನು ಹಾಗೆ ಮಾಡಿದುದಾಗಿ ಪರಿಚಾರಕ ಹೇಳುತ್ತಾನೆ. ಭಗವಾನರು ಅನ್ನುತ್ತಾರೆ: 'ಅದೇ ಮತ್ತೆ. ಆದ್ದರಿಂದಲೇ ಗುಬ್ಬಚ್ಚಿಗಳು ದೂರಿತ್ತಿದ್ದು. ಪಾಪಾ, ಪುಟ್ಟ ಹಕ್ಕಿಗಳು...'

ಪ್ರೇಮದಲ್ಲಿರುವವನಿಗೆ ಎಲ್ಲ ವಸ್ತುಗಳೂ ಪ್ರಕಟವಾಗಿರುತ್ತವೆ. ಜ್ಞಾನಿಯಾದ ಆತನೊಂದಿಗೆ ಎಲ್ಲ ಪ್ರಾಣಿಗಳೂ ಪಕ್ಷಿಗಳೂ ಪರಸ್ಪರ ಮಾತನಾಡುತ್ತವೆ.''

ಒಂದು ಸಂದರ್ಭದಲ್ಲಿ ಕಾಶ್ಮೀರಿ ಸೇವಕನೊಬ್ಬ ಮಹರ್ಷಿಗಳು ತನ್ನೊಡನೆ ತನ್ನ ತಾಯಿ ನುಡಿಯಲ್ಲಿ ಮಾತನಾಡಿದರು ಎಂದು ಗಂಭೀರವಾಗಿ ತನ್ನ ದಣಿಗೆ ತಿಳಿಸಿದ. ಇದು ಸತ್ಯವೋ ಭ್ರಾಂತಿಯೋ ಆಗಿರಲಿ, ಮಹರ್ಷಿಗಳು ಪ್ರಾಸಂಗಿಕವಾಗಿ ಗಳಿಸಿದ ಸಂಸ್ಕೃತ, ಮಲೆಯಾಳ ಮತ್ತು ತೆಲುಗು ಭಾಷೆಗಳ ಜ್ಞಾನವಂತೂ ನಿಜವಾಗಿ ಆಶ್ಚರ್ಯಕರವಾಗಿತ್ತು. ಅವರು ಇಂಗ್ಲೀಷಿನಲ್ಲಿ ಮಾತನಾಡುವುದು ಅಪರೂಪವಾಗಿದ್ದರೂ ಭಾಷೆಯನ್ನು ಅವರು ಚೆನ್ನಾಗಿಯೇ ಅರ್ಥ ಮಾಡಿಕೊಳ್ಳುತ್ತಿದ್ದರು ಮತ್ತು ಅವಶ್ಯಕತೆ ಒದಗಿದಾಗ "regressus

ad infinitum" ಮತ್ತು "automatic divine activity" ಮುಂತಾದ ಪದಗುಚ್ಛಗಳನ್ನು ಅತ್ಯಂತ ಉಚಿತವಾಗಿ ಬಳಸುತ್ತಿದ್ದರು. ಇಂಗ್ಲಿಷ್ ಬೈಬಲಿನಲ್ಲಿ ಮತ್ತು ಶೇಕ್ಸ್‌ಪಿಯರ್, ವರ್ಡ್ಸ್‌ವರ್ತ್, ಶೆಲ್ಲಿ ಮತ್ತು ಕೀಟ್ಸ್ ಇವರ ಗ್ರಂಥಗಳಲ್ಲಿ ಅಭಿವ್ಯಕ್ತವಾಗಿರುವ ಸಾರ್ವಕಾಲಿಕ ದಾರ್ಶನಿಕ ನುಡಿಗಳನ್ನು ಆಸಕ್ತಿ ಮತ್ತು ಮೆಚ್ಚುಗೆಯಿಂದ ಆಲಿಸುತ್ತಿದ್ದರು. ಮೊದಲನೆ ಕೊರಿಂತಿಯನ್ಸ್‌ನ ಹದಿಮೂರನೆಯ ಅಧ್ಯಾಯದಲ್ಲಿ ಬರುವ ಪ್ರೇಮವನ್ನು ಕುರಿತ ಆವೇಶದ ಬರವಣಿಗೆ ಮಹಾತ್ಮ ಗಾಂಧೀ ಅವರಿಗೆ ಮಾಡಿದಂತೆಯೇ, ಮಹರ್ಷಿಯನ್ನು ಗಾಢವಾಗಿ ತಟ್ಟಿತು. ಕ್ರಿಸ್ತ ಶ್ರೋತೃಗಳಂತೆಯೇ ಕ್ರಿಸ್ತೇತರ ಶ್ರೋತೃಗಳಿಗಾಗಿ ಅವರು ಬೈಬಲಿನಿಂದ ಈ ಕೆಳಗಿನ ಮುಖ್ಯ ಉಕ್ತಿಗಳನ್ನು ಪದೇ ಪದೇ ಉಲ್ಲೇಖಿಸುತ್ತಿದ್ದರು.

ಸುಮ್ಮನಿರಿ, ನಾನೇ ಭಗವಂತನೆಂದು ಅರಿಯಿರಿ-Psalms, XLVI,10

ನಾನು ನಾನೇ-Exodus III. 14

ಭಗವಂತನ ಲೋಕ ನಿಮ್ಮೊಳಗೇ ಇದೆ-St, Duke, XVII, 21

ಅಬ್ರಹಾಂ ಇದ್ದುದಕ್ಕಿಂತ ಮುಂಚೆ ನಾನಿದ್ದೇನೆ-St John, V111, 58.

ನಾನು ಮತ್ತು ನನ್ನ ತಂದೆ ಇಬ್ಬರೂ ಒಬ್ಬರೇ-St, John, X, 30

ನೈಟಿಂಗೇಲನ್ನು ಕುರಿತ ಕೀಟ್ಸನ ಗೀತದ ಮೇಲೆ ಅವರ ವ್ಯಾಖ್ಯಾನ ಹೀಗಿತ್ತು: ''ಮೊದಲನೆ ಪದ್ಯದಲ್ಲಿನ ಹಕ್ಕಿ ಹಣ್ಣು ತಿಂದು ಗೀತ ಹಾಡುವ ಜೀವ. ಏಳನೆಯ ಪದ್ಯದಲ್ಲಿನ 'ಮರಣಕ್ಕೊಳಪಡದೇ ಹುಟ್ಟಿದ ಅಮರ ಪಕ್ಷಿ' ಸಾಕ್ಷಿ ಪಕ್ಷಿ, ಚೈತನ್ಯದ ಸಂಕೇತ.'' ಮೇಲಿನ ಶಕ್ತಿಗೆ ಸಂಪೂರ್ಣ ಶರಣಾಗತಿ ಮತ್ತು ವಿಧೇಯತೆಗಳೇ ಇಸ್ಲಾಂ ಧರ್ಮದ ನಿಜವಾದ ಹೆಸರು ಮತ್ತು ಮುಖ್ಯ ಉಪದೇಶ ಎಂದು ಹೊಗಳಿದರು. ಅಲಹಾಬಾದ್ ವಿಶ್ವ ವಿದ್ಯಾನಿಲಯದ ಡಾ॥ ಎಂ. ಹಫೀಜ್ ಸಯ್ಯದ್‌ರ ಮೇಲೆ ಮಹರ್ಷಿಗಳ ಸಾನ್ನಿಧ್ಯ ಮತ್ತು ಮಾತುಗಳ ಪ್ರಭಾವ ಸಯ್ಯದ್‌ರ ಸ್ವಂತ ಧರ್ಮವನ್ನು ಸಮರ್ಥಿಸಿ ಸಮೃದ್ಧ ಗೊಳಿಸುವುದಾಗಿತ್ತು. ಅದರ ಜೊತೆಗೆ ಆಧುನಿಕ ವೈಜ್ಞಾನಿಕ, ಮುಖ್ಯವಾಗಿ ಮನೋವೈಜ್ಞಾನಿಕ, ಆಲೋಚನಾವಿಧಾನಗಳಿಗೆ ಅನುಗುಣವಾಗಿತ್ತು. ಡಾ॥ ಸಯ್ಯದ್ ಹೇಳುತ್ತಾರೆ:

''ಅವರ ಅನುದಿನದ ನಡವಳಿಕೆಯಲ್ಲಿ ಸ್ಪಷ್ಟವಾಗಿ ಪ್ರತಿಫಲಿಸುವ ಅವರ ನಿರಾಡಂಬರವಾದ, ಸರಳವಾದ, ಅಕ್ಲಿಷ್ಟವಾದ ತತ್ತ್ವಜ್ಞಾನವು ಬದುಕಿನ ರಹಸ್ಯವನ್ನು ತೆರೆಯುವ ಒಂದು ಕೀಲಿಯಾಗಿದೆ ಮತ್ತು ಇಂದು ನಮ್ಮನ್ನು ಎದುರಿಸುತ್ತಿರುವ ಕೆಲವು ಸಂಕೀರ್ಣ ಸಾಮಾಜಿಕ, ರಾಜಕೀಯ, ಧಾರ್ಮಿಕ ಹಾಗೂ ಆರ್ಥಿಕ ಸಮಸ್ಯೆಗಳನ್ನು ಪ್ರಾಯೋಗಿಕ ರೀತಿಯಲ್ಲಿ ಬಗೆಹರಿಸುತ್ತದೆ. ಆದರೆ ಅರುಣಾಚಲದ ಮಹರ್ಷಿ ಒಬ್ಬ ಶಾಸ್ತ್ರಾಂಧ ಉಪದೇಶಕರಾಗಲಿ, ಮತೀಯ ಪ್ರಚಾರಕರಾಗಲಿ, ಸುಧಾರಕರಾಗಲಿ ಆಗಿಲ್ಲ. ತರ್ಕವನ್ನು ಆತ್ಮಗತ ಮಾಡಿಕೊಂಡ, ಪ್ರಜ್ಞಪ್ರತಿಭೆಯ ಸಹಾಯದಿಂದ ಅಜ್ಞಾತದ ಸೀಮೆಯನ್ನು ಅನ್ವೇಷಿಸುವ ಮೂಲಕ ಸತ್ಯವನ್ನು ಅರಸುವ ವೈಜ್ಞಾನಿಕ ವಿಧಾನವನ್ನು ಅನುಸರಿಸಿರುವ, ಒಬ್ಬ ನಿಜವಾದ ಆಧ್ಯಾತ್ಮಿಕ ವಿಜ್ಞಾನಿ ಅವರು. ತಮ್ಮ ಸ್ವಂತ ಪ್ರಯತ್ನದಿಂದ ಹಾಗೂ ತೀವ್ರ ಆತ್ಮಶೋಧನೆಯಿಂದ ಆತ್ಮಸಾಕ್ಷಾತ್ಕಾರ ಪಡೆದರು. ಆಧುನಿಕ ವಿಜ್ಞಾನಿಯೊಬ್ಬನು ಒಂದು ಸತ್ಯವನ್ನು ಕಂಡು ಹಿಡಿಯುವುದು ಕೇವಲ ತನಗಾಗಿ ಆಗಿರದೆ, ಯಾವುದೇ ಜನಾಂಗ ಅಥವಾ ರಾಷ್ಟ್ರದ ಪರಿಗಣನೆಯಿಲ್ಲದೆ ಇಡೀ ಮಾನವಕುಲದ ಪ್ರಯೋಜನಕ್ಕಾಗಿ ಆಗಿರುತ್ತದೆ.

ಅವನು ತನ್ನ ಜ್ಞಾನವನ್ನು ಅದರಲ್ಲಿ ಆಸಕ್ತಿಯಿರುವವರೊಡನೆ ಹಂಚಿಕೊಳ್ಳುತ್ತಾನೆ. ಈ ವಿಜ್ಞಾನಿಯಂತೆಯೇ, ಶ್ರೀ ಮಹರ್ಷಿಗಳು ತಾವು ತಾಳ್ಮೆಯಿಂದ ನಡೆಸಿದ ಶೋಧನೆ ಮತ್ತು ಅನ್ವೇಷಣೆಗಳ ಫಲವನ್ನು ತಮ್ಮ ಶಿಷ್ಯರಿಗೆ ಹಾಗೂ ಆ ವಿಷಯದಲ್ಲಿ ತೀವ್ರ ಆಸಕ್ತಿಯಿರುವ ಅಭ್ಯಾಸಿಗಳಿಗೆ ನೀಡುತ್ತಾರೆ. ಪೀಳಿಗೆಯಿಂದ ಪೀಳಿಗೆಗೆ ಆಧ್ಯಾತ್ಮಿಕ ಜ್ಞಾನದ ದೀವಿಗೆಯನ್ನು ಜ್ವಲಂತವಾಗಿ ಇಟ್ಟಿರುವಂತಾಗಲು ಅವರು ಹಾಗೆ ಮಾಡುತ್ತಾರೆ.''

ಅದ್ವೈತ ಮತ್ತು ಬೌದ್ಧ ಧರ್ಮಗಳ ಮೇಲೆ ವಿಪುಲವಾಗಿ ಹಾಗೂ ನಿಷ್ಕೃಷ್ಟವಾಗಿ ಬರೆದಿರುವ ವೈ ವು ವೈ (ಟೆರೆನ್ಸ್ ಗ್ರೇ) ಆಧುನಿಕ ಯುಗದಲ್ಲಿ ಈ ಎರಡೂ ಮಾರ್ಗಗಳ ಸಂಗಮವನ್ನು ಮಹರ್ಷಿಗಳಲ್ಲಿ ಕಂಡನು. ಅವನು ಹೀಗೆನ್ನುತ್ತಾನೆ:

''ನಮ್ಮ ಕಾಲಕ್ಕೇ ಸೇರಿದ್ದು, ಅರ್ಧ ಶತಮಾನ ಕಾಲ ಜೀವಿಸಿ, ಎಲ್ಲರಿಗೂ ಎಲ್ಲ ಕಾಲದಲ್ಲಿಯೂ ಲಭ್ಯರಾಗಿದ್ದು, ಪ್ರತ್ಯಕ್ಷ ಅವತಾರದ ವ್ಯಕ್ತಿಗೆ ಮಾತ್ರ ಸಾಧ್ಯವಾಗಿರುವಂತೆ ಭಗವಂತನೊಡನೆ ಸಂಪೂರ್ಣ ತಾದಾತ್ಮ್ಯ ಸ್ಥಿತಿಯಲ್ಲಿದ್ದಾರೆ ಎಂದು ಯಾರೇ ಆಗಲಿ ಯುಕ್ತಿ ಯುಕ್ತವಾಗಿ ತೋರಿಸಬಲ್ಲ ಬೇರೊಬ್ಬ ವ್ಯಕ್ತಿ ಯಾರಿದ್ದಾರೆ? ವೈಯುಕ್ತಿಕವಾಗಿ ನಮ್ಮಲ್ಲಿ ನೂರಾರು ಮಂದಿ ಅವರನ್ನು ಅಂತೆ ಕಂಡಿದ್ದೆವು. ಇದನ್ನೇ ಬೇರೆ ಯಾರ ವಿಷಯದಲ್ಲಿ ಹೇಳಲು ಸಾಧ್ಯ? ಅಂಥ ಸಮಕಾಲೀನರೊಬ್ಬರನ್ನು ಪಡೆದಿದ್ದುದು ಮತ್ತು ಅವರ ಮಾತು ಹಾಗೂ ಬದುಕನ್ನು ಧಾರ್ಮಿಕ ಗ್ರಂಥಗಳು ನಮಗೆ ಒದಗಿಸಿರುವ ಪ್ರಾಚೀನ ಮಹರ್ಷಿಗಳ ಮಾತು ಮತ್ತು ವರ್ಣನೆಗಳೊಡನೆ ಹೋಲಿಸುವುದು ಎಷ್ಟು ಅದ್ಭುತದ ಸಂಗತಿ? ಆ ಮಾತುಗಳನ್ನು ಮತ್ತು ಧಾರ್ಮಿಕ ಗ್ರಂಥಗಳನ್ನು ಪರೀಕ್ಷಿಸಿ, ಅವು ಕನಸೋ ಭ್ರಾಂತಿಯೋ ಅಲ್ಲವೆಂದು ನಾವೇ ಕಂಡುಕೊಳ್ಳುವುದು ಭಗವಾನರಲ್ಲಿ ಮಾತ್ರವೇ.''

ಆರ್ಥರ್ ಆಸ್ಬರ್ನ್ 1945ರಲ್ಲಿ ತಿರುವಣ್ಣಾಮಲೆಗೆ ಬಂದು ಆಶ್ರಮಕ್ಕೆ ಸೇರಿದರು. ಅವಕ್ಕೆ ಮೊದಲೇ ಅವರ ಹೆಂಡತಿ ಮತ್ತು ಮಕ್ಕಳು ಅಲ್ಲಿ ವಾಸವಾಗಿದ್ದರು. ಅನಂತರದಲ್ಲಿ ಅವರು ಮಹರ್ಷಿಗಳ ಜೀವನ ಮತ್ತು ಉಪದೇಶಗಳ ಬಗ್ಗೆ ವಿಪುಲವಾಗಿ ಮತ್ತು ಸೂಕ್ಷ್ಮ ದೃಷ್ಟಿಯಿಂದ ಬರೆದರು. 1964ರಲ್ಲಿ ಪರ್ವತಪಥ' (Mountain Path)ಎಂಬ ತ್ರೈಮಾಸಿಕವನ್ನು ಪ್ರಾರಂಭಿಸಿ, 1970ರಲ್ಲಿ ಅವರ ಮರಣದವರೆಗೆ ಅದನ್ನು ನಡೆಸಿದರು. ಮಹರ್ಷಿಯೊಡನೆ ಅವರ ಮೊದಲ ಭೇಟಿ ಅವರ ಮೇಲೆ ''ಹೆಚ್ಚಿನ ಪರಿಣಾಮವನ್ನೇನೂ ಮಾಡಲಿಲ್ಲ. ನಿಜವಾಗಿ ಅವರ ಛಾಯಚಿತ್ರಗಳು ಮಾಡಿದ್ದಕ್ಕಿಂತಲೂ ಬಹಳ ಕಡಿಮೆಯದಾಗಿತ್ತು.'' ಆಸ್ಬರ್ನ್‌ಗೆ ಇದು ಆಶ್ಚರ್ಯವನ್ನುಂಟುಮಾಡಿತು. ಅನೇಕ ವಾರಗಳ ತರುವಾಯ, ಒಂದು ಸಂಜೆ ''ಭಗವಾನರು ತಮ್ಮ ಮಂಚದ ಮೇಲೆ ಒರಗಿದ್ದರು. ಅವರ ಮುಂದೆ ಮೊದಲ ಸಾಲಿನಲ್ಲಿ ನಾನು ಕುಳಿತಿದ್ದೆ. ಕಿರಿದು ಮಾಡಿದ ಅವರ ಕಣ್ಣುಗಳು ನನ್ನೊಳಕ್ಕೆ ನಿಕಟವಾಗಿ, ವರ್ಣಿಸಲಾಗದಷ್ಟು ತೀವ್ರವಾಗಿ, ಕೊರೆದುಕೊಂಡು ನುಗ್ಗಿದವು. ಅನಂತರ ನಿಶ್ಚಲತೆ, ಆಳವಾದ ಶಾಂತಿ, ಅವರ್ಣನೀಯವಾದ ಒಂದು ಹಗುರತೆ ಮತ್ತು ಆನಂದ. ನನ್ನಲ್ಲಿ ಚೈತನ್ಯ ತುಂಬಿ ನನ್ನ ಮನೋಭಾವವನ್ನು ಬದಲಾಯಿಸಿದುದು ದೃಷ್ಟಿದೀಕ್ಷೆ ಎನ್ನುವುದು ನನಗೆ ಮೊದಲು ತಿಳಿಯಲಿಲ್ಲ. ಇತರ ಭಕ್ತರಿಗೂ ಅದೇ ಬಗೆಯ ಅನುಭವ ಆಗಿತ್ತು ಮತ್ತು ಅವರ ವಿಷಯದಲ್ಲಿಯೂ ಅದು ಭಗವಾನರ ನಿರ್ದೇಶನದಲ್ಲಿ ಸಾಧನಾ ಕ್ರಿಯೆಯ ಪ್ರಾರಂಭವನ್ನು ಸೂಚಿಸಿತ್ತು ಎನ್ನುವುದು ನನಗೆ ಗೊತ್ತಾದುದೂ ಅನಂತರದಲ್ಲಿಯೇ.''

ಮಹರ್ಷಿಗಳ-ಸಾನಿಧ್ಯ ನೀಡಿದ ಶಾಂತಿಯ ಅನುಭವಕ್ಕೆ ಎಷ್ಟೋ ಮಂದಿ ಭಕ್ತರು ಸಾಕ್ಷ್ಯ ಒದಗಿಸಿದ್ದಾರೆ. ತಮತಮಗೆ ನಿಷ್ಠೆ ತೋರಬೇಕೆಂದು ಅನೇಕ ಆಧ್ಯಾತ್ಮಿಕ ಗುರುಗಳು ಕೇಳುತ್ತಿರುವಾಗ ಅವರಲ್ಲಿ ಯಾರನ್ನು ಅನುಸರಿಸಬೇಕು ಎಂದು ಸಂದರ್ಶಕರೊಬ್ಬರು ಕೇಳಿದಾಗ ಮಹರ್ಷಿಗಳು ''ನಿನಗೆ ಯಾವ ಗುರುವಿನಿಂದ ಶಾಂತಿ ಲಭಿಸುತ್ತದೆಯೋ ಅವರನ್ನು ಪರಿಗ್ರಹಿಸು'' ಎಂದರು. ಈ ಉತ್ತರ ಅವರ ಪ್ರಭಾವಕ್ಕೆ ಅನುಗುಣವಾಗಿತ್ತು. ಮಹರ್ಷಿಗಳಿಗೆ ತತ್ತ್ವರಾಯನ ಕತೆ ಬಹಳ ಪ್ರಿಯವಾಗಿತ್ತು. ಅವನು ತನ್ನ ಗುರುವಿನ ಗೌರವಾರ್ಥವಾಗಿ ಒಂದು ಭರಣಿಯನ್ನು ಬರೆದನು. ಆ ಕೃತಿಯನ್ನು ಕೇಳಲು ಪಂಡಿತರ ಸಭೆಯೊಂದನ್ನು ಕರೆದರು. ಒಂದು ಸಾವಿರ ಆನೆಗಳನ್ನು ಕೊಂದ ಯೋಧನೊಬ್ಬನ ಗೌರವಾರ್ಥವಾಗಿ ಮಾತ್ರ ಭರಣಿಯನ್ನು ಹಾಡಬಹುದೇ ವಿನಾ ಸಂನ್ಯಾಸಿಯೊಬ್ಬನ ಗೌರವಾರ್ಥವಾಗಿ ಖಂಡಿತವಾಗಿ ಅಲ್ಲ ಎಂದು ಪಂಡಿತರು ಆಕ್ಷೇಪವೆತ್ತಿದರು. ಆಗ ಆ ಕವಿಯು ''ಹಾಗಾದರೆ ನಾವೆಲ್ಲ ನಮ್ಮ ಗುರುಗಳ ಬಳಿಗೆ ಹೋಗೋಣ. ಅವರ ಸಮ್ಮುಖದಲ್ಲಿ ಈ ವಿಷಯವನ್ನು ತೀರ್ಮಾನಿಸೋಣ'' ಎಂದನು. ಅವರು ಆ ಗುರುವಿನ ಬಳಿಗೆ ಹೋಗಿ ಕುಳಿತರು. ಕವಿ ಪಂಡಿತರ ಆಕ್ಷೇಪವನ್ನು ತಿಳಿಸಿದ. ಗುರುಗಳು ಮೌನವಾಗಿ ಕುಳಿತರು. ಇತರರೂ ಹಾಗೆಯೇ ಮಾಡಿದರು. ಹೀಗೆ ದಿನಗಳು ಕಳೆದವು. ಅವರಲ್ಲಿ ಯಾರಿಗೂ ಯಾವುದೇ ಆಲೋಚನೆಯೂ ಹೊಳೆಯಲೇ ಇಲ್ಲ. ಈ ದೀರ್ಘ ಅಧಿವೇಶನದ ಕೊನೆಯಲ್ಲಿ ಗುರು ತಮ್ಮ ಮನಸ್ಸನ್ನು ಸ್ವಲ್ಪವೇ ಸ್ವಲ್ಪ ಚಲಿಸಿದರು. ''ನಮ್ಮ ಅಂಹಂಕಾರಗಳೆಂಬ ಮದಿಸಿದ ಆನೆಗಳನ್ನು ಅಡಗಿಸಿದ ಈ ವ್ಯಕ್ತಿಯ ಬಲದ ಮುಂದೆ ಸಾವಿರ ಆನೆಗಳನ್ನು ಗೆಲ್ಲುವುದು ಏನೇನೂ ಅಲ್ಲ'' ಎಂದು ಸಭೆ ಒಕ್ಕೊರಲಿನಿಂದ ಘೋಷಿಸಿತು. ಅವನ 'ಭರಣಿ'ಯನ್ನು ಓದಲು ಪ್ರಾರಂಭಿಸುವಂತೆ ಅವರು ತತ್ತ್ವರಾಯನಿಗೆ ಹೇಳಿದರು.

ಆತ್ಮದ ಏಕತೆ ಮತ್ತು ಅಮರತ್ವಗಳನ್ನು ಕುರಿತು ಮಹರ್ಷಿಗಳ ಉಪದೇಶದ ಬೆಳಕಿನಲ್ಲಿ, ದೈಹಿಕವಾಗಿ ಅವರ ಇರವು ಅಥವಾ ಸಾವು, ನಿಷ್ಕೃಷ್ಟವಾಗಿ ಹೇಳಬೇಕಾದರೆ, ಅಮುಖ್ಯ ಸಂಗತಿಯಾಗಿತ್ತು. ಆದರೆ ದೃಢನಿಶ್ಚಯದ ಅದ್ವೈತಿಗಳಲ್ಲೂ ಪ್ರೀತಿ ಮತ್ತು ಆಸೆಗಳ ಸೆಳೆತದಿಂದ ಹೊರಗಿರುವವರು ವಿರಳವೇ. ಮಹರ್ಷಿಗಳು ಶರೀರಸ್ಥರಾಗಿಯೇ ಇದ್ದುಕೊಂಡು ಎಲ್ಲರಿಗೂ ಲಭ್ಯರಾಗಿರಲಿ ಎಂದು ಅಪೇಕ್ಷಿಸುತ್ತಿದ್ದ ಅವರ ಭಕ್ತರು 1949ರ ಫೆಬ್ರವರಿಯಲ್ಲಿ ಅವರ ಕೊನೆಯ ಕಾಯಿಲೆ ಕಾಣಿಸಿಕೊಂಡಾಗ ಬಹಳ ಚಿಂತಾಕ್ರಾಂತರಾದರು. ಆಗ ಅವರ ಎಡಮೊಳಕೈಯ ಮೇಲೆ ಕ್ಯಾನ್ಸರ್ ಗಡ್ಡೆಯೊಂದು ಎದ್ದು ಮೇಲುಗಡೆಗೆ ಹಬ್ಬಲು ಪ್ರಾರಂಭಿಸಿತು. ಪ್ರಕೃತಿ ತನ್ನ ಹಾದಿ ಹಿಡಿಯಲಿ ಎಂದು ಮಹರ್ಷಿಗಳು ಅಪೇಕ್ಷಿಸಿದರು. ಆದರೆ ಶಸ್ತ್ರಚಿಕಿತ್ಸೆಗಳಿಗೆ ಒಳಪಡುವಂತೆ ಅವರನ್ನು ಒಲಿಸಲಾಯಿತು. ಅನೇಕ ತಿಂಗಳುಗಳಿಂದ ಇದ್ದ ಯಾತನೆ ಬಹಳ ತೀವ್ರವಾಗಿದ್ದಿರಬೇಕೆಂಬುದು ವೈದ್ಯರಿಗೆ ತಿಳಿದಿದ್ದಿತು. ಯಾರೇ ಆಗಲಿ ಆ ನೋವನ್ನು ಅಷ್ಟು ನಿರ್ಲಿಪ್ತರಾಗಿ ಸಹಿಸಿದ್ದು ಎಂತು ಮತ್ತು ಇಷ್ಟು ಒಳ್ಳೆಯವರಿಗೆ ಇಂಥ ಯಾತನೆ ಏಕೆ ಬರಬೇಕು ಎಂದು ವೈದ್ಯರೂ, ಎಷ್ಟೋ ಮಂದಿ ಇತರರೂ ಆಶ್ಚರ್ಯಪಟ್ಟರು. 'ಎಷ್ಟೋ ಜನಗಳ ಪಾಪಗಳನ್ನು ವಹಿಸಿಕೊಂಡ ಕರುಣೆಗೆ ಬೆಲೆ ತೆರಬೇಕಾಯಿತು' ಎಂದು ಕೆಲವರು ಭಾವಿಸಿದರು. ಆದರೆ ಅಂತ್ಯ ಒದಗಿ ಅವರಿಗೆ ಶಮನವಾಗಲೆಂದು ಯಾರೂ ಬಯಸಲಿಲ್ಲ. ನಿಧಾನವಾಗಿ ಮತ್ತು ಯಾತನಾಪೂರ್ವಕವಾಗಿ

ದೇಹ ಕ್ಷಯಿಸುತ್ತಿರಲು ಆ ಮೂಲಕ ಅವರು 1896ರ ಜುಲೈನಲ್ಲಿ ಜರುಗಿದ ನಾಟಕವನ್ನು ಸಾರ್ವಜನಿಕವಾಗಿ ಪುನಃ ಅಭಿನಯಿಸಿದರು. ಸರ್ವರಿಗೂ ಸಮಾನವಾದ ಮರ್ತ್ಯತೆಯಲ್ಲಿ ಅವರ ದೇಹವು ಅವರ ಭಕ್ತರೊಡನೆ ಪಾಲುಗೊಂಡಿರುವಂತೆಯೇ, ಅವರ ಭಕ್ತರ ಚೈತನ್ಯವು ತಮ್ಮೊಡನೆ ಪಾರಮಾರ್ಥಿಕ ಸತ್ಯದ ಆನಂದದಲ್ಲಿ ಭಾಗಿಯಾಗಬಹುದು ಎಂಬುದನ್ನು ಅವರು ತಮ್ಮ ಭಕ್ತರಿಗೆ ಬೋಧಿಸಿದರು. ವಿಯೋಗದ ಭಾವನೆಯಿಂದ ದಿಕ್ಕುಗೆಟ್ಟಂತಾಗಿದ್ದವರಿಗೆ: ''ನಾನು ಹೊರಟು ಹೋಗುತ್ತಿಲ್ಲ. ನಾನು ಹೋಗಬಹುದಾದರೂ ಎಲ್ಲಿಗೆ? ನಾನು ಇಲ್ಲಿಯೇ ಇದ್ದೇನೆ'' ಎಂದು ಹೇಳುತ್ತಿದ್ದರು. ಹುಟ್ಟು ಮತ್ತು ಸಾವು ಶರೀರಕ್ಕೆ ಕಾಲದೇಶಗಳನ್ನು ಒಳಗೊಂಡು, ಅವಕ್ಕೆ ಅತೀತವಾಗಿರುವ ನಾನು ಎಂಬ ಚೈತನ್ಯಕ್ಕೆ ಬರುವುದು ಎನ್ನುವುದಾಗಲಿ ಹೋಗುವುದು ಎನ್ನುವುದಾಗಲಿ ಇಲ್ಲ, ಸಂಯೋಗವಾಗಲಿ ವಿಯೋಗವಾಗಲಿ ಇಲ್ಲ.

1950ರ ಏಪ್ರಿಲ್ 14ರಂದು ಅಂತ್ಯ ಒದಗಿತು. ಆಶ್ರಮದ ಹತ್ತಿರ ತನ್ನ ಕುಟೀರದ ಮುಂದೆ ನಿಂತಿದ್ದ ಶ್ರೀ ಕಾರ್ತಿಯೆ-ಬ್ರಾಸ್ಸೆನ್ ಎಂಬ ಫ್ರೆಂಚ್ ಛಾಯಾಗ್ರಾಹಕ ಆಕಾಶದಲ್ಲಿ ಉಜ್ವಲವಾಗಿ ಬೆಳಗುತ್ತಿದ್ದ ಒಂದು ಉಲ್ಕೆಯನ್ನು ಕಂಡ. ಅದು ದಕ್ಷಿಣದಿಂದ ಬಂದು ಆಕಾಶದಲ್ಲಿ ಉತ್ತರದ ಕಡೆಗೆ ನಿಧಾನವಾಗಿ ಸರಿದು ಅರುಣಾಚಲದ ಶಿಖರದ ಹಿಂದುಗಡೆ ಮರೆಯಾಯಿತು. ಅವನು ತನ್ನ ಗಡಿಯಾರ ನೋಡಿದ. ಆಗ ರಾತ್ರಿ 8.47 ಆಗಿತ್ತು. ಮಹರ್ಷಿ ತಮ್ಮ ಕೊನೆಯ ಉಸಿರು ಎಳೆದದ್ದು ಆ ಗಳಿಗೆಯಲ್ಲಿಯೇ. ಆಕಾಶದಲ್ಲಿ ಪ್ರಕಾಶಮಾನವಾದ ಆ ಉಲ್ಕೆ ಕಾಣಿಸಿಕೊಂಡದ್ದನ್ನು ದಕ್ಷಿಣ ಭಾರತದಲ್ಲೆಲ್ಲ ಅನೇಕರು ನೋಡಿದರು. ಪತ್ರಿಕೆಗಳೂ ಅದನ್ನು ವ್ಯಾಪಕವಾಗಿ ಪ್ರಚಾರಮಾಡಿದವು. ಅದನ್ನು ಕಂಡು ಮದ್ರಾಸು ಮತ್ತು ಇತರೆಡೆಗಳಲ್ಲಿನ ಕೆಲವು ಭಕ್ತರು ಅದರ ಸೂಚನೆಯನ್ನು ಗ್ರಹಿಸಿ, ಸಮಾಧಿಯ ಕಾಲಕ್ಕೆ ತಿರುವಣ್ಣಾಮಲೆಯಲ್ಲಿರಲು ಕಾರುಗಳಲ್ಲಿ ಹೊರಟರು.

ರಮಣರು ಅಷ್ಟು ದೀರ್ಘಕಾಲ ವಾಸಿಸಿದ್ದ ಮತ್ತು ಅವರ ಅವಶೇಷಗಳು ಸಮಾಧಿಯಾಗಿರುವ ಸ್ಥಳದಲ್ಲಿ ಶ್ರೀರಮಣರ ಸಾನ್ನಿಧ್ಯದ ಶಕ್ತಿಯನ್ನು ಇಂದಿಗೂ ರಮಣಾಶ್ರಮಕ್ಕೆ ಬರುವ ಅನೇಕ, ಸಂದರ್ಶಕರು ಅನುಭವಿಸುವುದನ್ನು ಗಮನಿಸಿದ ಚಾಡ್ವಿಕ್ ಹೀಗೆ ಹೇಳುತ್ತಾನೆ; ''ಖಂಡಿತವಾಗಿಯೂ ಇದು ಸಹಜವಾದುದೇ. ಯಾವುದೇ ಅಪವಾದವಿಲ್ಲದೆ, ಇದು ಪ್ರಪಂಚದ ಎಲ್ಲ ಮಹಾನ್ ಧರ್ಮಗಳ ಪದ್ಧತಿಯಾಗಿಲ್ಲವೇ? ಮುಸ್ಲಿಮರು ಸಂತರ ಗೋರಿಗಳನ್ನು ಗೌರವಿಸುತ್ತಾರೆ. ಯಾವುದೋ ಅವಶೇಷಕ್ಕೆ ಗೌರವ ಸಲ್ಲಿಸಲು ಬೌದ್ಧರು ದೀರ್ಘ ಯಾತ್ರೆ ಹೋಗುತ್ತಾರೆ. ಇದಕ್ಕೆ ಒಳ್ಳೆಯ ಆಧಾರವಿದೆ ಎಂದು ಅನಿಸದ ಹೊರತು, ಜನ ಇಷ್ಟೆಲ್ಲ ತೊಂದರೆ ತೆಗೆದುಕೊಳ್ಳುವುದಿಲ್ಲ.''

ಮಹರ್ಷಿಗಳ ಜೀವಿತಕಾಲದಲ್ಲಿ ಅವರನ್ನು ನೋಡದಿದ್ದರೂ ಅವರ ಹೆಸರು ಮತ್ತು ಭಾವ ಚಿತ್ರಗಳಿಂದ ಆಕರ್ಷಿತರಾದ ಎಷ್ಟೋ ಜನರಿಗೆ-ಅಂಥವರ ಸಂಖ್ಯೆ ನೂರಾರು-ಅವರ ಸಾನ್ನಿಧ್ಯದ ಶಕ್ತಿಯ ಅರಿವಾಗಿದೆ. ಅನೇಕ ಸಲ ಅವರೇ ಅಂದಂತೆ, ನಿಜವಾದ ಗುರು ಎಲ್ಲೆಲ್ಲೂ ಇರುತ್ತಾನೆ, ಏಕೆಂದರೆ ಅವನು ಅರಿವಿನಲ್ಲಿರುವ ಆತ್ಮನಿಗಿಂತ ಬೇರೆಯಲ್ಲ. ಪ್ರತಿ ವ್ಯಕ್ತಿಯ ಹೃದಯದಲ್ಲಿರುವ ಸದ್ವಸ್ತುವಿನ ಆನಂದಾನುಭವವನ್ನು ಹೊರತು ಮಹರ್ಷಿ ತಮ್ಮ ವಿಷಯದಲ್ಲಿ ವಿಶೇಷವಾದ ಅಥವಾ ಅಲೌಕಿಕದ ಯಾವುದೇ ಒಂದನ್ನೂ ಹೇಳಿಕೊಳ್ಳು ತ್ತಿರಲಿಲ್ಲ. ಕವಿ ಹೊಗಳಿದ ''ನೈಸರ್ಗಿಕ ಮಾಂತ್ರಿಕತೆ''ಯನ್ನು, ಕೇವಲ ಮಾನವ-

ನಾಗಿರುವುದರ ಗಾರುಡಿತನವನ್ನು ಅವರು ಸಂಪೂರ್ಣವಾಗಿ ಮೂರ್ತೀಕರಿಸಿದರು.

''ಯಾವ ತಿರುಕನೂ ಅವರು ತನ್ನನ್ನು ಕೀಳಾಗಿ ಕಂಡರೆಂದು, ಯಾವ ಶ್ರೀಮಂತನೂ ಅವರನ್ನು ದುರಹಂಕಾರಿಯೆಂದು ಎಂದೂ ಭಾವಿಸಲಿಲ್ಲ.'' ಉಳಿದ ನಮ್ಮೆಲ್ಲರಿಗಿಂತಲೂ ಅವರು ಹೆಚ್ಚಿನ ಮಾನವರು, ಹೆಚ್ಚು ಪೂರ್ಣವಾಗಿ ಮತ್ತು ಸಹಜವಾಗಿ ಮಾನವರು ಆಗಿದ್ದರು. ಈ ರೀತಿ ಮಾನವನಾಗಿರುವುದೇ ನಿಜವಾಗಿ ದೇವರಾಗಿರುವುದು ಎಂಬುದನ್ನು ತೋರಿಸಿದರು. ಮನುಷ್ಯರ ನಡುವೆ ಮನುಷ್ಯರಾಗಿ ಮತ್ತು ಎಲ್ಲ ಜನರಲ್ಲೂ ಇರುವ ಪುರುಷನಾಗಿ, ಚೈತನ್ಯವಾಗಿ ಅವರು ಎರಡೂ ಬಗೆಯಲ್ಲಿ ಅರ್ಧ ಶತಮಾನದ ನಿರಹಂಕಾರದ ಬಾಳುವೆಯ ಮೂಲಕ 'ಧರ್ಮವು ದೇವತ್ವದ ಅವತರಣವಲ್ಲ, ಅದು ಮಾನವತ್ವದ ಸಾಫಲ್ಯ' ಎಂದ ಟಾಗೋರರ ಈ ವಾದವನ್ನು ಸಮರ್ಥಿಸಿದರು: ''ಮಾನವ ತರ್ಕವಾದ ಸಾರ್ವತ್ರಿಕ ತರ್ಕದಲ್ಲಿ ನಮ್ಮ ಜ್ಞಾನವನ್ನು ವಿಮುಕ್ತಿಗೊಳಿಸುವುದು ವಿಜ್ಞಾನ ಆಗಿರುವಂತೆ, ಯಾವ ಭೇದವೂ ಇಲ್ಲದೆ ಮಾನವನೇ ಆಗಿರುವ ಸರ್ವಾತ್ಮಕ ಪುರುಷನಲ್ಲಿ ನಮ್ಮ ಪ್ರತ್ಯೇಕ ವ್ಯಕ್ತಿತ್ವವನ್ನು ವಿಮುಕ್ತಿಗೊಳಿಸುವುದು ಧರ್ಮ.''

# ಭಾಗ II -ಗುರು

## ಅಧ್ಯಾಯ 8

## ಸಂಕಲಿತ ಕೃತಿಗಳು: ಗದ್ಯಗ್ರಂಥಗಳು

*ಸಾಟರ್ಡೇ ಈವಿನಿಂಗ್ ಪೋಸ್ಟ್* ಎಂಬ ಪತ್ರಿಕೆಯಲ್ಲಿ ''ದೇವರೊಬ್ಬನು ಸಾಯುವುದನ್ನು ಕಂಡೆ'' ಎಂಬ ದೀರ್ಘ ಕಥನವೊಂದರಲ್ಲಿ ಅಮೇರಿಕದ ಒಬ್ಬ ಸುದ್ದಿಗಾರ ''ಉನ್ಮಾದದಿಂದ ಹುಚ್ಚೆದ್ದ ಭಾರಿ ನೂಕುನುಗ್ಗಲಿನ ಜನಜಂಗುಳಿಯನ್ನು ಮತ್ತು ಅರುಣಾಚಲ ಶಿವ! ಅರುಣಾಚಲ ಶಿವ! ಎಂಬ ಕಿವಿಗಡಚಿಕ್ಕುವ ಅಸಹನೀಯ ಪ್ರಚಂಡ ಉದ್ಘೋಷವನ್ನು'' ವರ್ಣಿಸಿದ. ಮತ್ತು ''ಈ ಉನ್ಮಾದ ಅದರ ತುದಿ ತಲುಪಿದಾಗ ಮತ್ತು ಆ ಚಿಕ್ಕಕೋಣೆಯಲ್ಲಿನ ಫ್ಯಾನು ಓಡುವುದು ನಿಂತಾಗ, ಒಂದು ಉಲ್ಕೆ ಬಾನಿನಲ್ಲಿ ಹೊನ್ನ ಹಾದಿಯೊಂದನ್ನು ಕಡಿದುಕೊಂಡು ಹೋಯಿತು ಮತ್ತು ಭಗವಾನ್ ಶ್ರೀರಮಣಮಹರ್ಷಿ ಕೊನೆಯುಸಿರೆಳೆದ ಕ್ಷಣದಲ್ಲಿ ಅದು ಶ್ರೀ ಅರುಣಾಚಲದ ಮೇಲೆ ಅದೃಶ್ಯವಾಯಿತು'' ಎಂದು ವರದಿ ಮಾಡಿದ.

ಪವಾಡಗಳ ಬಗ್ಗೆ ಅಸಹನೆ ತೋರಿಸಿ, ಅರಸನನ್ನೂ ತಿರುಕನನ್ನೂ ಸಮಾನವಾಗಿ ಕಂಡು, 1896ರಲ್ಲಿ ಆದ ತಮ್ಮ ಪುನರ್ಜನ್ಮದಿಂದ ಹಿಡಿದು 1950ರಲ್ಲಿ ಈ ಪ್ರಪಂಚದಿಂದ ನಿರ್ಗಮಿಸಿದವರೆಗಿನ ಐವತ್ನಾಲ್ಕು ವರ್ಷಗಳ ಕಾಲವೂ ಸಂಪೂರ್ಣ ಸಮಾನತೆಯ ಆನಂದ ಮತ್ತು ಆಚರಣಗಳೇ ಪರಮಶ್ರೇಷ್ಠವಾದುದು ಎಂಬ ಅದ್ವೈತ ತತ್ತ್ವವನ್ನು ಬೋಧಿಸಿದ ವ್ಯಕ್ತಿಯ ಮರಣವನ್ನು ಈ ರೀತಿ ಪ್ರಕಟಿಸಿದ್ದು ಒಂದು ವಿಚಿತ್ರವಾದ ಯೋಗಾಯೋಗ.

ಆದರೆ ಮಹರ್ಷಿಗಳ ಜೀವನಕತೆಯನ್ನು ರಚಿಸಿದ 'ಕಾಕತಾಳೀಯ ಘಟನೆಗಳ' ಸರಣಿಯಲ್ಲಿ ಸಪ್ರಮಾಣದ ಮತ್ತು ವ್ಯಾಪಕವಾಗಿ ಪ್ರಚಾರಗೊಂಡ ಈ ಸಂಗತಿಯೇ ಕೊನೆಯದೂ ಅತ್ಯಂತ ಮಹತ್ವದ್ದೂ ಆಗಿತ್ತು ಎನ್ನಬಹುದು. ಗಾಂಧೀ ಮತ್ತು ಕೃಷ್ಣಮೂರ್ತಿಗಳ ಸಮಕಾಲೀನರಾಗಿದ್ದ ಮಹರ್ಷಿ ಆಧುನಿಕ ಭಾರತದ ಪುನರುಜ್ಜೀವನದ ಕಾಲದ ನಡುಹಗಲಿನಲ್ಲಿ ಕಾಣೆಸಿಕೊಂಡರು. ಅಂದಿಗೆ ಬಹು ಹಿಂದೆಯೇ ಆಗಬೇಕಾಗಿದ್ದ ಜೆಮ್-ಅದ್ವೈತದ ಪ್ರಚಾರ ಆಗಿತ್ತು. ಕ್ರಿಸ್‌ಮಸ್ ಅವಧಿಯಲ್ಲಿ ಅವರ ಜನನ ಮತ್ತು ಈಸ್ಟರ್ ಅವಧಿಯಲ್ಲಿ ಅವರ ಮರಣ ಸಂತ ಜಾನ್‌ನ ಸುವಾರ್ತೆಯ 14ನೆ ಅಧ್ಯಾಯದಲ್ಲಿ ಭರವಸೆ ನೀಡಿದ್ದ ಸತ್ಯಾತ್ಮವನ್ನು, ಆಂತರಿಕ ಪವಿತ್ರಾತ್ಮವನ್ನು ನಿರೀಕ್ಷಿಸುತ್ತಿದ್ದ ಅನೇಕ ಶ್ರದ್ಧಾಳುಗಳಿಗೆ ಅವರನ್ನು ಪ್ರಿಯರನ್ನಾಗಿ ಮಾಡಿದವು. ಅವರ ತಾಯಿಯೇ ಆಶ್ರಮದ ತಾಯಿಯಾದರು. ಅವರ ಸಮಾಧಿಯ ಮೇಲಣ ದೇವಾಲಯವು ತಾಯ್ತನದ ತತ್ತ್ವವನ್ನು ಒಳಗೊಂಡಿತ್ತು. ಅಳಗು ಎಂಬ ಆಕೆಯ ಹೆಸರು ಅಚ್ಚ ತಮಿಳು. ಸುಂದರ ಎಂಬ ಅವರ

ತಂದೆಯ ಹೆಸರು ಮತ್ತು ರಮಣ ಎಂಬ ಅವರ ಹೆಸರು ಸಾಮಾನ್ಯ ಸಂಸ್ಕೃತ ಪದಗಳು. ಆದರೆ ಅವೆಲ್ಲವೂ ಸೌಂದರ್ಯ ಎಂಬ ಒಂದೇ ಅರ್ಥವನ್ನು ಸೂಚಿಸಿದ್ದವು. ರಾಮನ ನಕ್ಷತ್ರವಾದ ಪುನರ್ವಸುವಿನಲ್ಲಿ, ಶಿವನಿಗೆ ಪವಿತ್ರವಾದ ಆರ್ದ್ರಾ ನಕ್ಷತದ ರಾತ್ರಿಯಲ್ಲಿ ಹುಟ್ಟಿ, ಬ್ರಹ್ಮಚರ್ಯದ ಹಾಗೂ ಭವಿಷ್ಯದ ದೇವತೆಯಾದ ಸ್ಕಂದನೆಂದು ಕವಿಗಳಿಂದ ಹೊಗಳಿಸಿಕೊಂಡ ಅವರು ಎಲ್ಲ ಪಂಥಗಳ, ಎಲ್ಲ ಸಂಪ್ರದಾಯಗಳ ಹಿಂದೂಗಳಿಗೂ ಸಮಾನವಾಗಿ ಗ್ರಾಹ್ಯರಾದರು. 1947ರಲ್ಲಿ ಭಾರತದ ಸ್ವಾತಂತ್ರ್ಯದ ದಿನ ಘೋಷಿಸಲ್ಪಟ್ಟು ಅದು ಬಂದಾಗ *ಶ್ರೀ ರಮಣಗೀತದ* ಅಭ್ಯಾಸಿಗಳು ಅದರ ಹತ್ತನೆಯ ಅಧ್ಯಾಯದಲ್ಲಿ ಸಂಘವಿದ್ಯೆಯನ್ನು ವಿವರಿಸಿದುದು 1917ರ ಅಗಸ್ಟ್ 15ರಂದು ಎನ್ನುವುದನ್ನು ಸ್ಮರಿಸಿಕೊಂಡರು. ಅದರಲ್ಲಿ ಅವರು ವ್ಯಕ್ತಿಗಳ ನಡುವೆ ಸೌಭ್ರಾತ್ರಕ್ಕಾಗಿ ಶಾಂತಿ ಮತ್ತು ಪರಿಶುದ್ಧತೆ, ಸಮಾಜದಲ್ಲಿ ಪ್ರಗತಿಗಾಗಿ ಶಕ್ತಿ ಮತ್ತು ಮಾನವಸಂಸಾರದಲ್ಲಿ ಸಾಮರಸ್ಯಕ್ಕಾಗಿ ಸಮಾನತೆ ಇವನ್ನು ಉಪದೇಶಿಸಿದ್ದರು. ಆದರೆ ಈ ಸರಳ ನಿಗರ್ವಿ ವ್ಯಕ್ತಿ ತನಗೆ ಅರಿವಿಲ್ಲದೆಯೇ ಒಬ್ಬ ಗುರುವಾಗಿ ಬಿಟ್ಟಿದ್ದು ಎಲ್ಲಕ್ಕೂ ಮಿಗಿಲಾದ ಆಕಸ್ಮಿಕ, ಅದೃಷ್ಟದ ಸಂಗತಿ. ಏಕೆಂದರೆ ಸಾಧಕರು ಅವರನ್ನು ಬೇಡಿ ಕಾಡಿ ಅವರಿಂದ ಪ್ರಶ್ನೆಗಳಿಗೆ ಉತ್ತರಗಳನ್ನು, ಗ್ರಂಥಗಳ ಸಂಗ್ರಹಗಳನ್ನು ಮತ್ತು ಪದ್ಯಗಳ ಅನುವಾದಗಳನ್ನು ಪಡೆದರು. ಅವನ್ನು ಕಾಪಾಡಲು ಸರಿಯಾದ ಜಾಗರೂಕತೆ ವಹಿಸಿದರು. ಅದರ ಫಲವಾಗಿ ನಾವಿಂದು ರಮಣಮಹರ್ಷಿಗಳ ಸಂಕಲಿತ ಕೃತಿಗಳಲ್ಲಿ ಆಧ್ಯಾತ್ಮವನ್ನು ಕುರಿತ ಒಂದು ಚಿಕ್ಕ ಆದರೆ ಸಮಗ್ರವಾದ ಕೈಪಿಡಿಯನ್ನು ಹೊಂದಿದ್ದೇವೆ. ಅದು ವೇದಾಂತಸಿದ್ಧಾಂತವನ್ನು ವಿಚಾರವಿಧಾನದೊಂದಿಗೆ ಸಮನ್ವಯಗೊಳಿಸಿದೆ. ಆಚರಣೆಯಲ್ಲಿ ಅದನ್ನು ಅವರು ಪರೀಕ್ಷಿಸಿ ನೋಡಿ, ಫಲಕಾರಿಯಾದುದನ್ನು ಕಂಡು, ಸಾಮಾನ್ಯ ಜನರ ಬಳಕೆಗಾಗಿ ಅದನ್ನು ಇನ್ನೂ ಪರಿಷ್ಕರಿಸಿ ಪರಿಪೂರ್ಣಮಾಡಿದ್ದರು.

ಯುವಕ ಸ್ವಾಮಿಯಿಂದ ಪ್ರಶ್ನೆಗಳಿಗೆ ಉತ್ತರಗಳನ್ನು ಪಡೆದು, ಕಾಗದದ ಹಾಳೆಗಳಲ್ಲಿ ಅವನ್ನು ಸಂಗ್ರಹಿಸಿಟ್ಟ ಮೊಟ್ಟಮೊದಲ ಸಾಧಕ ಗಂಭೀರಂ ಶೇಷಯ್ಯ. 1900ರಿಂದ 1902ರವರೆಗೆ ಈತ ವಿರೂಪಾಕ್ಷ ಗುಹೆಗೆ ಪದೇಪದೇ ಬರುತ್ತಿದ್ದ. ಶ್ರದ್ಧಾವಂತ ರಾಮಭಕ್ತನಾಗಿದ್ದ ಈತ ಯೋಗ, ವಿವೇಕಾನಂದರ ಉಪನ್ಯಾಸಗಳು ಮತ್ತು ರಾಮನು ಲಕ್ಷ್ಮಣನಿಗೆ ಅದ್ವೈತದ ತಿರುಳನ್ನು ಬೋಧಿಸುವ *ರಾಮಗೀತ* ಇವುಗಳನ್ನು ಅಭ್ಯಾಸಮಾಡಿದ್ದ. ಅವುಗಳ ಅಭಿಪ್ರಾಯಗಳನ್ನು ಅರ್ಥಮಾಡಿಕೊಳ್ಳುವುದರಲ್ಲಿ ಮತ್ತು ಅವನ್ನು ಪರಸ್ಪರ ಹೊಂದಿಸುವುದರಲ್ಲಿ ಕೆಲವು ತೊಡಕುಗಳನ್ನು ಕಂಡಿದ್ದ. ಸ್ವಾಮಿ ದಯೆಯಿಂದ ಆ ಗ್ರಂಥಗಳನ್ನು ಓದಿ, ಅಭಿಪ್ರಾಯಗಳನ್ನು ಸಂಗ್ರಹ ಮಾಡಿ, ಅವುಗಳ ಕ್ರಮವನ್ನು ಪುನರ್ರಚಿಸಿ, ಅವುಗಳನ್ನು ಕುರಿತ ಇನ್ನೂ ಮುಂದಿನ ಪ್ರಶ್ನೆಗಳಿಗೆ ಉತ್ತರ ನೀಡಿದರು. ಈ ಟಿಪ್ಪಣಿಗಳು 'ಆತ್ಮವಿಚಾರ' ಎಂಬ ಗ್ರಂಥಕ್ಕೆ ಆಧಾರವಾದವು. ಈ ಗ್ರಂಥ ಬಹಳವಾಗಿ, ಶೇಷಯ್ಯನಿಗೆ ಆಸಕ್ತಿಯಿದ್ದ ಮತ್ತು ಪರಿಚಯವಿದ್ದ, ಧ್ಯಾನ ಮತ್ತು ಪ್ರಾಣಾಯಾಮವನ್ನು ಕುರಿತಿದ್ದವು. ಸಾಧಕನು ತಾನೇ ಆರಿಸಿದ ಮಾರ್ಗದಲ್ಲಿ ಸಾಗಲು ಅವನಿಗೆ ಸಹಾಯ ಮಾಡುವುದರ ಜೊತೆಗೆ, ಸಾಗಲು ಅವನಿಗೆ ಮಹರ್ಷಿ ತಮ್ಮದೇ ವಿಶಿಷ್ಟವಾದ ಆತ್ಮವಿಚಾರದ ರೀತಿಯನ್ನು ಮುಂದಿಟ್ಟು ಅದನ್ನು ಸ್ವಲ್ಪ ದೀರ್ಘವಾಗಿ ವಿವರಿಸುತ್ತಾರೆ.'' ಶಾಶ್ವತವಾದ ಆನಂದದ ಸ್ಥಿತಿಯನ್ನು ಗಳಿಸುವ ಸಾಧನವಾಗಿ

'ನಾನು ಯಾರು?' ಎಂಬ ಅನ್ವೇಷಣೆಯ ಮೂಲಕ ಪ್ರತಿಯೊಬ್ಬನೂ ನನ್ನ ನಿಜಸ್ವರೂಪವನ್ನು ಪರೀಕ್ಷಿಸಬೇಕು ಮತ್ತು ಅರ್ಥಮಾಡಿಕೊಳ್ಳಬೇಕು.''

'' 'ಹೋಗುವುದು' ಮತ್ತು 'ಬರುವುದು' ಮೊದಲಾದ ಕ್ರಿಯೆಗಳು ದೇಹಕ್ಕೆ ಮಾತ್ರವೇ ಸೇರಿದವು. ಆದ್ದರಿಂದ, 'ನಾನು ಹೋದೆ, ನಾನು ಬಂದೆ' ಎಂದು ಯಾರಾದರೂ ಹೇಳಿದಾಗ ಅದು 'ದೇಹವೇ ನಾನು' ಎಂದಂತಾಗುತ್ತದೆ. ಆದರೆ ಹುಟ್ಟುವುದಕ್ಕೆ ಮೊದಲು ದೇಹ ಇರುವುದಿಲ್ಲ. ಅದು ಪಂಚಭೂತಗಳಿಂದ ಆಗಿರುತ್ತದೆ. ಗಾಢನಿದ್ರೆಯಲ್ಲಿ ಅದು ಇಲ್ಲದಾಗುತ್ತದೆ. ಸತ್ತಾಗ ಹೆಣವಾಗುತ್ತದೆ. ಆದ್ದರಿಂದ ದೇಹವನ್ನು 'ನಾನು' ಎಂಬ ಚೈತನ್ಯ ಎನ್ನಲಾಗುತ್ತದೆಯೇ? ಮರದ ಕೊರಡಿನಂತೆ ಜಡವಾಗಿರುವ ಈ ದೇಹ 'ನಾನು' 'ನಾನು' ಎಂದು ಹೊಳೆಯುತ್ತದೆ ಎನ್ನಲಾಗುವುದೇ? ಹೆಣದಂಥ ದೇಹವನ್ನು ಹೆಣವಾಗಿಯೇ ಮಾಡಿ, 'ನಾನು' ಎಂಬ ಪದವನ್ನು ಕೂಡ ಉಚ್ಚರಿಸದೆ ಪ್ರತಿಯೊಬ್ಬರೂ ಸೂಕ್ಷ್ಮವಾಗಿ ಈ ರೀತಿ ವಿಚಾರ ಮಾಡಬೇಕು; 'ನಾನು' ಎಂದು ಜಾಗೃತವಾಗುವುದು ಈಗ ಯಾವುದು? ಆಗ ಹೃದಯದಲ್ಲಿ 'ನಾನು' 'ನಾನು' ಎಂಬ ರೂಪದ ಒಂದು ಶಬ್ದರಹಿತ ಪ್ರಕಾಶವು ಸ್ಫುರಿಸುತ್ತದೆ. ಅಂದರೆ ಉಪಾಧಿಗೊಳಪಟ್ಟ ಮತ್ತು ಬಹುಸಂಖ್ಯಾಕವಾದ ಭಾವನೆಗಳು ಲಯ ಹೊಂದಿರುವುದರಿಂದ ಉಪಾಧಿರಹಿತವಾದ ಮತ್ತು ಏಕವಾದ ಶುದ್ಧಚೈತನ್ಯವು ತನ್ನಷ್ಟಕ್ಕೆ ತಾನೇ ಬೆಳಗುತ್ತದೆ. ಆ ಅನುಭವವನ್ನು ತ್ಯಜಿಸದೆ ನಾವು ನಿಶ್ಚಲವಾಗಿದ್ದಲ್ಲಿ, 'ದೇಹವೇ ನಾನು' ಎಂಬ ರೂಪದ ಅಹಂಕಾರ, ವ್ಯಕ್ತಿ ಭಾವನೆ ಸಂಪೂರ್ಣವಾಗಿ ನಾಶವಾಗುತ್ತದೆ. ಕಡೆಯಲ್ಲಿ, 'ನಾನು' ಎಂಬ ರೂಪದ ಕೊನೆಯ ಭಾವನೆ ಕೂಡ ಕರ್ಪೂರವನ್ನು ಉರಿಸುವ ಬೆಂಕಿಯಂತೆ ನಂದಿ ಹೋಗುತ್ತದೆ. ಇದು ಮಾತ್ರವೇ ಮೋಕ್ಷ ಎಂದು ಮಹರ್ಷಿಗಳೂ ಶಾಸ್ತ್ರಗಳೂ ಘೋಷಿಸುತ್ತವೆ''

ಮನಸ್ಸನ್ನು ಒಳಗಡೆಗೆ ತಿರುಗಿಸಿ ಹೃದಯದಲ್ಲಿ ಅದನ್ನು ಲೀನಗೊಳಿಸುವ ಒಂದು ವಿಧಾನವಾಗಿ 'ಸೋಹಂ' ಧ್ಯಾನದ ಬಗ್ಗೆ ಮಹರ್ಷಿ ಹೀಗೆ ವಿವರಿಸುತ್ತಾರೆ:

''ಯಾರಾದರೂ 'ನಾನು ಯಾರು?' ಎಂದು ವಿಚಾರ ಮಾಡುತ್ತಾ ಆ ವಿಚಾರದ ಸ್ಥಿತಿಯಲ್ಲೇ ಇರುವಾಗ ಆತ್ಮಸ್ವರೂಪವು 'ನಾನು' 'ನಾನು' ಎಂಬ ಸೂಕ್ಷ್ಮ ರೂಪದಲ್ಲಿ ಅಭಿವ್ಯಕ್ತವಾಗುತ್ತದ.''

ಧ್ಯಾನದ ಪರಾಕಾಷ್ಠೆ 'ನಾನು ಕೇವಲ ಶುದ್ಧ ಚೈತನ್ಯ' ಎಂಬ ರೂಪದಲ್ಲಿ ತಾಳಿರುತ್ತದೆ ಎಂದು ಸಾಧಿಸಲಾಗಿದೆ. ಜೊತೆಗೆ, ದೇಹವನ್ನು ಬದಿಗೆ ಸರಿಸಿ, ''ನಾನು ಯಾರು?'' ಎಂದು ಕೇಳಿಕೊಂಡಾಗ ಸಾಧಕನು ಆತ್ಮರೂಪದಲ್ಲಿ ಪ್ರಕಾಶಿಸುವ 'ನಾನು' ಎಂಬ ಸ್ಥಿತಿಯಲ್ಲಿ-ರುತ್ತಾನೆ ಎಂದೂ ವಿವರಿಸಲಾಗಿದೆ. ಯೋಗವು ಬಲಪ್ರಯೋಗದಿಂದ ತುಂಟಗೂಳಿಯನ್ನು ಹತೋಟಿಗೆ ತರುವ ಪ್ರಯತ್ನದಂತಿದ್ದರೆ, ಈ ಜ್ಞಾನವಿಚಾರವು ಅದಕ್ಕೆ ಹಸಿರುಹುಲ್ಲನ್ನು ತೋರಿಸಿ ಪುಸಲಾಯಿಸಿ ವಶಪಡಿಸಿಕೊಳ್ಳುವಂತಿರುತ್ತದೆ. ಆದ್ದರಿಂದಲೇ ಮಹಾತ್ಮರು ಇದನ್ನು ''ಅತ್ಯಂತ ಹತ್ತಿರವಾದ ಮತ್ತು ಅತ್ಯುತ್ತಮವಾದ ಮಾರ್ಗ'' ಎಂದು ಸಾರಿದ್ದಾರೆ.

ಪ್ರಶ್ನೆಗಳಿಗೆ ಮಹರ್ಷಿಗಳು ನೀಡಿದ ಉತ್ತರಗಳ ದಾಖಲೆಯಿಟ್ಟಿದ್ದ ಮತ್ತೊಬ್ಬ ಸಾಧಕ ಶಿವಪ್ರಕಾಶಂ ಪಿಳ್ಳೆ. ಈತ ತತ್ತ್ವಶಾಸ್ತ್ರವನ್ನು ಓದಿದ್ದ ಒಬ್ಬ ರೆವಿನ್ಯೂ ಅಧಿಕಾರಿ. ಈ ಉತ್ತರಗಳನ್ನು ಅವರು ಒಂದು ಕ್ರಮದಲ್ಲಿ ಜೋಡಿಸಿ 'ನಾನು ಯಾರು?' ಎಂಬ

ಪುಸ್ತಕರೂಪದಲ್ಲಿ ಪ್ರಕಟವಾಗಲು ಸಿದ್ಧಪಡಿಸಿದರು. ಈಗ ಗ್ರಂಥರೂಪದಲ್ಲಿಯೂ ಪ್ರಶ್ನೋತ್ತರ ರೂಪದಲ್ಲಿಯೂ ಸಿಗುವ ಈ ಚಿಕ್ಕ ಕೃತಿಯಿಂದ ಉಲ್ಲೇಖಗಳನ್ನು ಈ ಕೆಳಗೆ ಕೊಡಲಾಗಿದೆ. ಇವು ಮಹರ್ಷಿಗಳ ಮುಖ್ಯ ಉಪದೇಶವನ್ನೂ ಅವರ ಆತ್ಮವಿಚಾರ ವಿಧಾನವನ್ನೂ ಸ್ಪಷ್ಟವಾಗಿ ವಿವರಿಸುತ್ತವೆ:

ಶರೀರ, ಐದು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು, ಪ್ರಾಣ, ಮನಸ್ಸು ಮತ್ತು ನಿದ್ರೆಯ ಅಜ್ಞಾನ ಇವನ್ನು 'ಇದಲ್ಲ' 'ಇದಲ್ಲ' ಎಂದು ನಿರಾಕರಿಸಿದ ತರುವಾಯ, ಕಡೆಯಲ್ಲಿ ಏಕೈಕವಾಗಿ ಉಳಿಯುವ ಜ್ಞಾನವೇ 'ನಾನು' ಮತ್ತು ಅದರ ಸ್ವರೂಪ ಆನಂದ.

ಭಾವನೆಗಳಿಂದ ಬೇರೆಯಾಗಿ ಮನಸ್ಸು ಎನ್ನುವ ವಸ್ತುವೊಂದಿಲ್ಲ. ಆದ್ದರಿಂದ ಭಾವನೆಯೇ ಮನಸ್ಸಿನ ಮೂಲದ್ರವ್ಯ. ಕಲ್ಪನೆಗಳಿಂದ ಭಿನ್ನವಾಗಿ ಜಗತ್ತು ಎನ್ನುವ ಒಂದು ಸ್ವತಂತ್ರ ವಸ್ತುವಿಲ್ಲ. ಎಚ್ಚರದ ಮತ್ತು ಕನಸಿನ ಸ್ಥಿತಿಗಳಲ್ಲಿ, ಭಾವನೆಗಳಿರುತ್ತವೆ ಮತ್ತು ಒಂದು ಜಗತ್ತೂ ಇರುತ್ತದೆ. ಜೇಡವೊಂದು ಬಲೆಯ ನೂಲನ್ನು ತನ್ನಿಂದಲೇ ಹೊಮ್ಮಿಸಿ, ಮತ್ತೆ ತನ್ನೊಳಕ್ಕೇ ಅದನ್ನು ಸೆಳೆದುಕೊಳ್ಳುವಂತೆ, ಮನಸ್ಸು ಜಗತ್ತನ್ನು ತನ್ನೊಳಗಿಂದಲೇ ಹೊರ ಹರಿಸುತ್ತದೆ ಮತ್ತು ತನ್ನೊಳಗೇ ಅದನ್ನು ಪುನಃ ಲಯಗೊಳಿಸುತ್ತದೆ. ಮನಸ್ಸು ಆತ್ಮದಿಂದ ಹೊರಬಂದಾಗ ಜಗತ್ತು ಕಾಣಿಸಿಕೊಳ್ಳುತ್ತದೆ. ಮನಸ್ಸಿನ ಸ್ವರೂಪವನ್ನು ಕುರಿತು ಸಂತತವಾಗಿ ವಿಚಾರಮಾಡಿದಾಗ, ಆತ್ಮವನ್ನು (ಅವಶೇಷವಾಗಿ) ಉಳಿಸಿ ಮನಸ್ಸು ಲಯವಾಗುತ್ತದೆ. ಸ್ಥೂಲವಾದ ಯಾವುದೋ ಒಂದನ್ನು ಅವಲಂಬಿಸಿದ ವಿನಾ ಮನಸ್ಸು ಅಸ್ತಿತ್ವದಲ್ಲಿರುವುದಿಲ್ಲ. ಅದು ಸ್ವತಂತ್ರವಾಗಿ ಇರಲಾರದು. ಸೂಕ್ಷ್ಮ ಶರೀರ ಅಥವಾ ಜೀವ ಎನ್ನುವುದು ಮನಸ್ಸನ್ನೇ.

ಮನಸ್ಸಿನಲ್ಲಿ ಉದಿಸುವ ಭಾವನೆಗಳಲ್ಲೆಲ್ಲ ಮೊದಲನೆಯದು 'ನಾನು' ಎಂಬ ಭಾವನೆ. ಇದರ ಉದಯದ ತರುವಾಯವೇ ಇತರ ಭಾವನೆಗಳು ಉದಿಸುವುದು. ಉತ್ತಮ ಪುರುಷ ಸರ್ವನಾಮ ಕಾಣಿಸಿಕೊಂಡ ಅನಂತರವೇ ಮಧ್ಯಮ ಮತ್ತು ಪ್ರಥಮ ಪುರುಷ ಸರ್ವನಾಮಗಳು ದೃಶ್ಯವಾಗುವುದು. ಉತ್ತಮ ಪುರುಷ ಸರ್ವನಾಮವಿಲ್ಲದೆ ಮಧ್ಯಮ ಮತ್ತು ಪ್ರಥಮಗಳು ಇರಲಾರವು.

ಮನಸ್ಸನ್ನು ನಿಶ್ಚಲಗೊಳಿಸುವ ಸಾಧನ 'ನಾನು ಯಾರು?' ಎಂದು ವಿಚಾರ-ಮಾಡುವುದು. 'ನಾನು ಯಾರು?' ಎಂಬ ವಿಚಾರ ಇತರ ಎಲ್ಲ ಆಲೋಚನೆಗಳನ್ನೂ ನಾಶಪಡಿಸುತ್ತದೆ ಮತ್ತು ಉರಿಯುತ್ತಿರುವ ಬೆಂಕಿಯ ರಾಶಿಯನ್ನು ಕೆದಕಲು ಬಳಸುವ ಕೋಲಿನಂತೆ ಕೊನೆಯಲ್ಲಿ ತಾನೂ ನಾಶವಾಗುತ್ತದೆ. ಆಗ 'ಆತ್ಮ ಸಾಕ್ಷಾತ್ಕಾರ' ಉದಿಸುತ್ತದೆ.

ಇತರ ಭಾವನೆಗಳು ಉದಿಸಿದಾಗ ನಾವು ಅವನ್ನು ಅನುಸರಿಸಿ ಹೋಗಬಾರದು. ಅದರ ಬದಲು 'ಅವು ಯಾರಿಗೆ ಉದಿಸಿದವು?' ಎಂದು ವಿಚಾರ ಮಾಡಬೇಕು. ಭಾವನೆಗಳು ಎಷ್ಟು ಉದಿಸುತ್ತವೆ ಎನ್ನುವುದು ಮುಖ್ಯವಲ್ಲ. ಪ್ರತಿಯೊಂದು ಭಾವನೆಯೂ ಉದಿಸುತ್ತಿದ್ದಂತೆ, 'ಈ ಭಾವನೆ ಯಾರಿಗೆ ಉದಿಸಿದ್ದು?' ಎಂದು ನಾವು ಗಂಭೀರವಾಗಿ ಆಲೋಚಿಸಬೇಕು. ಉತ್ತರ 'ನನಗೆ' ಎಂದಿರುತ್ತದೆ. ಅನಂತರ 'ನಾನು ಯಾರು' ಎಂದು ಪ್ರಶ್ನೆ ಮಾಡಿಕೊಂಡರೆ, ಮನಸ್ಸು ತನ್ನ ಮೂಲಕ್ಕೆ ಹಿಂದಿರುಗುತ್ತದೆ ಮತ್ತು ಆಲೋಚನೆ ಅಡಗುತ್ತದೆ. ಪದೇಪದೇ ಈ ರೀತಿ ಅಭ್ಯಾಸ ಮಾಡಿದರೆ, ಮನಸ್ಸು ತನ್ನ ಮೂಲದಲ್ಲೇ ನೆಲೆಸಿರಲು ಕಲಿಯುತ್ತದೆ.

ಸೂಕ್ಷ್ಮ ರೂಪದಲ್ಲಿರುವ ಮನಸ್ಸು ಮಿದುಳಿನ ಮತ್ತು ಇಂದ್ರಿಯಗಳ ಮೂಲಕ ಹೊರಕ್ಕೆ ಹರಿದಾಗ ಸ್ಥೂಲ ನಾಮರೂಪಗಳು ಗೋಚರವಾಗುತ್ತವೆ. ಅದು ಹೃದಯದಲ್ಲೇ ನೆಲೆಸಿದಾಗ ನಾಮರೂಪಗಳು ಅದೃಶ್ಯವಾಗುತ್ತವೆ.ಮನಸ್ಸನ್ನು ಹೊರಕ್ಕೆ ಹೋಗಲು ಬಿಡದೆ ಹೃದಯದಲ್ಲೇ ಅದನ್ನು ಹಿಡಿದಿಟ್ಟಿರುವುದನ್ನು 'ಅಂತರ್ಮುಖತೆ' ಎನ್ನುತ್ತಾರೆ. ಮನಸ್ಸನ್ನು ಹೃದಯದಿಂದ ಹೊರಕ್ಕೆ ಹೋಗಲು ಬಿಡುವುದು 'ಬಹಿರ್ಮುಖತೆ.' ಹೀಗೆ, ಮನಸ್ಸು ಹೃದಯದಲ್ಲಿ ನೆಲೆಸಿದಾಗ, ಎಲ್ಲ ಭಾವನೆಗಳ ಮೂಲವಾದ 'ನಾನು' ಎಂಬುದು ಹೋಗಿಬಿಡುತ್ತದೆ ಮತ್ತು ಸರ್ವದಾ ಇರುವ ಆತ್ಮ ಪ್ರಕಾಶಿಸುತ್ತದೆ. ಯಾರೇ ಯಾವುದನ್ನೇ ಮಾಡಲಿ, ಅದನ್ನು 'ನಾನು' ಎಂಬ ಅಹಂಭಾವನೆ ಇಲ್ಲದೆ ಮಾಡಬೇಕು. ಅಂತೆ ಯಾರಾದರೂ ಆಚರಿಸಿದಲ್ಲಿ, ಅವರಿಗೆ ಎಲ್ಲವೂ ಶಿವ (ಭಗವತ್) ಸ್ವರೂಪವಾಗಿ ಕಾಣಿಸಿಕೊಳ್ಳುತ್ತದೆ.

ಮನಸ್ಸನ್ನು ಸಾಕಷ್ಟು ನಿಶ್ಚಲಗೊಳಿಸಲು ವಿಚಾರಗಳನ್ನು ಬಿಟ್ಟು ಬೇರೆ ವಿಧಾನವಿಲ್ಲ. ಪ್ರಾಣಾಯಾಮದ ಅಭ್ಯಾಸ, ದೇವರ ರೂಪಗಳ ಧ್ಯಾನ, ಮಂತ್ರಗಳ ಜಪ, ಆಹಾರದ ನಿಯಮ ಮುಂತಾದವು ಕೇವಲ ಸಹಾಯಸಾಮಗ್ರಿ ಮಾತ್ರವೇ. ಧ್ಯಾನ ಮತ್ತು ಜಪ ಮನಸ್ಸನ್ನು ಏಕಾಗ್ರ ಮಾಡುತ್ತವೆ. ಆನೆಯು ಸೊಂಡಿಲಿನಲ್ಲಿ ಹಿಡಿದಿರುವ ಸರಪಳಿ ಅದು ಬೇರೆಯದನ್ನು ಹಿಡಿಯುವುದನ್ನು ತಪ್ಪಿಸುವಂತೆ, ನಾಮ ಮತ್ತು ರೂಪ ಮನಸ್ಸನ್ನು ಆವರಿಸಿ ಅದು ನಿಶ್ಚಲವಾಗಿರುವಂತೆ ಮಾಡುತ್ತವೆ. ಹೀಗೆ ಏಕಾಗ್ರವಾಗಿ ಶಕ್ತಿಯುತವಾದ ಮನಸ್ಸಿಗೆ ಆತ್ಮವಿಚಾರ ಸುಲಭವಾಗುತ್ತದೆ. ಅಂತೆಯೇ ಸಾತ್ತ್ವಿಕವಾದ ಹಾಗೂ ಮಿತವಾದ ಆಹಾರ ಆತ್ಮವಿಚಾರಕ್ಕೆ ಸಹಾಯಮಾಡುತ್ತದೆ.

ಚಿರಕಾಲದ ವಾಸನೆಗಳು ಎಂದಾದರೂ ಲಯವಾಗಬಲ್ಲವೇ ಮತ್ತು ಶುದ್ಧ ಆತ್ಮರೂಪದಲ್ಲಿ ಇರಲು ಸಾಧ್ಯವೇ ಎಂಬ ಪ್ರಶ್ನೆಗೆ ಉತ್ತರ ಹೀಗಿದೆ:

''ಅದು ಸಾಧ್ಯವೇ ಅಲ್ಲವೇ ಎನ್ನುವ ಸಂದೇಹಕ್ಕೆ ಒಳಗಾಗದೆ ಸತತವಾಗಿ ಆತ್ಮದ ಧ್ಯಾನದಲ್ಲಿ ನಿರತರಾಗಬೇಕು. ತಾನೊಬ್ಬ ದೊಡ್ಡ ಪಾಪಿಯಾಗಿದ್ದರೂ, 'ಅಯ್ಯೋ! ನಾನೊಬ್ಬ ಪಾಪಿ, ನಾನು ಪಾರಾಗುವುದು ಹೇಗೆ?' ಎಂದು ಚಿಂತಿಸುತ್ತ ಅಳಬಾರದು. ಆತ್ಮನ ಧ್ಯಾನದಲ್ಲಿ ತೀವ್ರವಾಗಿ ಮಗ್ನವಾಗಿರಬೇಕು. ಆಗ ಖಂಡಿತವಾಗಿ ಯಶಸ್ಸು ಸಿಗುತ್ತದೆ.

''ಪ್ರಪಂಚದ ವಸ್ತುಗಳತ್ತ ಮತ್ತು ಇತರ ಜನರಿಗೆ ಸಂಬಂಧಿಸಿದ ವಿಷಯಗಳ ಕಡೆಗೆ ಮನಸ್ಸನ್ನು ಹರಿಯಬಿಡಬಾರದು. ಇತರ ಜನ ಎಷ್ಟೇ ಕೆಟ್ಟವರಾಗಿರಲಿ, ಅವರ ಬಗ್ಗೆ ದ್ವೇಷ ಹೊಂದಿರಬಾರದು. ಆಸೆ, ದ್ವೇಷ ಎರಡನ್ನೂ ತ್ಯಜಿಸಬೇಕು. ಇತರರಿಗೆ ಕೊಡುವುದೆಲ್ಲವೂ ನಮ್ಮ ಆತ್ಮಕ್ಕೆ ಕೊಡುವುದೇ ಆಗಿರುತ್ತದೆ. ಈ ಸತ್ಯವನ್ನು ಅರಿತಲ್ಲಿ ಯಾರು ತಾನೆ ಇತರರಿಗೆ ಯಾವುದನ್ನೇ ನಿರಾಕರಿಸುತ್ತಾರೆ? ವಿನಯದಿಂದ ನಾವು ನಡೆದುಕೊಳ್ಳುವವರೆಗೆ ನಮಗೆ ಒಳ್ಳೆಯದಾಗುತ್ತದೆ.

''ಮನಸ್ಸಿನಲ್ಲಿ ವಾಸನೆಗಳು ಇರುವವರೆಗೆ 'ನಾನು ಯಾರು' ಎಂಬ ವಿಚಾರ ಬೇಕಾಗುತ್ತದೆ. ಭಾವನೆಗಳು ಏಳುತ್ತಿದ್ದಂತೆಯೇ ಅವುಗಳ ಮೂಲಸ್ಥಾನದಲ್ಲಿ ಅಲ್ಲಿಯೇ ಮತ್ತು ಆಗಲೇ ಅವನ್ನು ವಿಚಾರದ ಮೂಲಕ ನಾಶಮಾಡಬೇಕು. ಕೋಟೆಯೊಳಗೆ ಶತ್ರುಗಳು ಇರುವ ತನಕ ಅವರು ಹೊರಗೆ ಹೊರಟು ದಾಳಿ ಮಾಡುತ್ತಿರುತ್ತಾರೆ. ಹೊರಕ್ಕೆ ಬರುತ್ತಿದ್ದಂತೆ ಅವರನ್ನು ನಾಶ ಮಾಡಿದಲ್ಲಿ, ಕೋಟೆ ನಮ್ಮ ಕೈವಶವಾಗುತ್ತದೆ.

ಭಾವನೆಗಳು ಏಳುತ್ತಿದ್ದಂತೆ ಅವುಗಳ ಮೂಲದಲ್ಲಿ ಅವನ್ನು ನಾಶಪಡಿಸುವುದೇ ನಿಸ್ಸಂಗತ್ವ. ನಡುವಿಗೊಂದು ಕಲ್ಲು ಕಟ್ಟಿಕೊಂಡು ಸಮುದ್ರದ ತಳಕ್ಕೆ ಮುಳುಗಿ ಅಲ್ಲಿ ಮುತ್ತುಗಳನ್ನು ಆರಿಸುವ ಮುತ್ತುಗಾಹಿಯಂತೆ, ನಾವೂ ತೀವ್ರ ನಿಸ್ಸಂಗತ್ವದಿಂದ ನಮ್ಮೊಳಕ್ಕೆ ಮುಳುಗಿ ಆತ್ಮಮೌಕ್ತಿಕವನ್ನು ಪಡೆಯಬೇಕು.

ನಾವು ಮನಸ್ಸನ್ನು ನಿಶ್ಚಲಗೊಳಿಸಬೇಕು. ಒಮ್ಮೆ ಇದನ್ನು ಅರ್ಥಮಾಡಿಕೊಂಡಲ್ಲಿ ಕೊನೆಯಿಲ್ಲದ ಓದಿನ ಅವಶ್ಯಕತೆ ಇರುವುದಿಲ್ಲ. ಆತ್ಮ ನಮ್ಮೊಳಗಿದೆಯೇ ವಿನಾ ಪುಸ್ತಕಗಳಲ್ಲಿಲ್ಲ. ಆತ್ಮ ವಿಚಾರಕ್ಕೆ ನಮ್ಮೊಳಗೆ ಹುಡುಕಬೇಕು. ನಮ್ಮ ಸ್ವಂತ ವಿವೇಕದ ಕಣ್ಣಿಂದ ಆತ್ಮವನ್ನು ಅರಿಯಬೇಕು. ವಾಸ್ತವದಲ್ಲಿ, ನಾವು ಕಲಿತಿರುವುದೆಲ್ಲವನ್ನೂ ಮರೆತುಬಿಡಬೇಕಾದ ಕಾಲವೊಂದು ಬರುತ್ತದೆ.

ಆನಂದ ಆತ್ಮದ ನಿಜಸ್ವರೂಪ. ಆನಂದ ಮತ್ತು ಆತ್ಮ ಭಿನ್ನವಲ್ಲ. ಪ್ರಪಂಚದ ಯಾವುದೇ ವಸ್ತುವಿನಲ್ಲಿ ಆನಂದವಿರುವುದಿಲ್ಲ. ಮನಸ್ಸು ಹೊರಕ್ಕೆ ಹರಿದಾಗ ಅದು ದುಃಖವನ್ನು ಅನುಭವಿಸುತ್ತದೆ. ಅಂತೆಯೇ ನಿದ್ರೆ, ಸಮಾಧಿ ಮತ್ತು ಮೂರ್ಛೆಯ ಸ್ಥಿತಿಗಳಲ್ಲಿ ಹಾಗೂ ಇಚ್ಛಿಸಿದ ವಸ್ತುವನ್ನು ಪಡೆದಾಗ ಅಥವಾ ದ್ವೇಷಿಸಿದ ವಸ್ತುವನ್ನು ಹೊರಹಾಕಿದಾಗ ಮನಸ್ಸು ಅಂತರ್ಮುಖವಾಗುತ್ತದೆ ಮತ್ತು ಶುದ್ಧ ಆತ್ಮಾನಂದವನ್ನು ಸವಿಯುತ್ತದೆ. ಹೀಗೆ ಪರ್ಯಾಯವಾಗಿ ಆತ್ಮದಿಂದ ಹೊರಕ್ಕೆ ಹೋಗುತ್ತ ಮತ್ತು ಅದಕ್ಕೆ ಮರಳಿ ಬರುತ್ತ ಮನಸ್ಸು ವಿಶ್ರಾಂತಿಯಿಲ್ಲದೆ ಚಲಿಸುತ್ತಿರುತ್ತದೆ. ಮರದ ನೆರಳಿನಲ್ಲಿ ಹಿತವಾಗಿರುತ್ತದೆ; ಹೊರಗೆ ಬಯಲಿನಲ್ಲಿ ಬಿಸಿಲು ಸುಡುತ್ತಿರುತ್ತದೆ. ದಡ್ಡ ವ್ಯಕ್ತಿ ನೆರಳಿನಿಂದ ಬಿಸಿಲಿಗೆ ಹೋಗುತ್ತ, ಅನಂತರ ಮತ್ತೆ ನೆರಳಿಗೆ ಬರುತ್ತಾ ಇರುತ್ತಾನೆ. ವಿವೇಕಿಯಾದವನು ಕಾಯಂ ಆಗಿ ನೆರಳಿನಲ್ಲಿರುತ್ತಾನೆ. ಸತ್ಯವನ್ನು ಅರಿತವನ ಮನಸ್ಸು ಬ್ರಹ್ಮವನ್ನು ಬಿಟ್ಟುಬರುವುದಿಲ್ಲ. ವಾಸ್ತವವಾಗಿ, ಜಗತ್ತು ಅದೃಶ್ಯವಾದಾಗ, ಅಂದರೆ ಯಾವ ಭಾವನೆಯೂ ಇಲ್ಲದಿರುವಾಗ, ಮನಸ್ಸು ಆನಂದವನ್ನು ಅನುಭವಿಸುತ್ತದೆ. ಜಗತ್ತು ದೃಶ್ಯವಾದಾಗ, ಅದು ದುಃಖ ಕ್ಕೊಳಗಾಗುತ್ತದೆ.''

*ಉಪದೇಶಮಂಜರಿ,* ಇದನ್ನು 'ಆಧ್ಯಾತ್ಮಿಕ ಬೋಧನೆ' ಎಂದೂ ಕರೆಯಲಾಗಿದೆ. ನಟೇಶ ಮುದಲಿಯಾರ್ ಹಾಕಿದ ಪ್ರಶ್ನೆಗಳಿಗೆ ಮಹರ್ಷಿ ಕೊಟ್ಟ ಉತ್ತರಗಳನ್ನು ಒಳಗೊಂಡಿದೆ. ಮುದಲಿಯಾರ್ ವೇದಾಂತ ಮತ್ತು ಸಿದ್ಧಾಂತ ಎರಡನ್ನೂ ಚೆನ್ನಾಗಿ ಓದಿದ್ದ ಒಬ್ಬ ಶಾಲಾಮಾಸ್ತರು. ನಟನಾನಂದ ಎಂಬ ಹೆಸರು ಹೊತ್ತು ಅವರು ಮಹರ್ಷಿಗಳ ಆಜನ್ಮ ಭಕ್ತರಾದರು. ಮುರುಗನಾರ್‌ರ ಮೇಲೆ ಒಂದು ಕವನಸಂಗ್ರಹವನ್ನು (1953) ಮತ್ತು ಮಹರ್ಷಿಗಳ ಬದುಕು ಬೋಧನೆಗಳ ಮೇಲೆ ರಮಣದರ್ಶನ (1957) ಎಂಬ ಪ್ರಬಂಧಗಳನ್ನು ಪ್ರಕಟಿಸಿದ್ದಾರೆ.

*ಉಪದೇಶಮಂಜರಿ* ನಾಲ್ಕು ಅಧ್ಯಾಯಗಳಾಗಿ-ಉಪದೇಶ, ಅಭ್ಯಾಸ, ತಾತ್ಕಾಲಿಕ ಅನುಭವ ಮತ್ತು ಶಾಶ್ವತಸಿದ್ಧಿ-ವಿಭಾಗಗೊಂಡಿದೆ. ಅದು ಮುಖ್ಯವಾಗಿ 'ಪ್ರೌಢ ಸಾಧಕ'ರಿಗಾಗಿ ರಚಿತವಾಗಿದ್ದರೂ ಎಲ್ಲ ಜಿಜ್ಞಾಸುಗಳಿಗೂ ಸಹಾಯಕವೆನಿಸುವ ನಿಷ್ಕೃಷ್ಟತೆ ಮತ್ತು ಸ್ಪಷ್ಟತೆಗಳಿಂದ ಕೂಡಿದೆ. ಈ ಮುಂದಿನ ಪ್ರಶ್ನೆಗಳು ಮತ್ತು ಉತ್ತರಗಳು ಇದಕ್ಕೆ ನಿದರ್ಶನವಾಗಿವೆ:

*ಭಕ್ತಿಯ ಹಾಗೂ ಶೈವಸಿದ್ಧಾಂತ ಮಾರ್ಗದ ಗುರಿ ಏನು?*

ಶುದ್ಧವಾದ ಮೂರು (ದೇಹ, ಮಾತು, ಮನಸ್ಸು) ಕರಣಗಳಿಂದ, ಭಗವಂತನ ದಾಸನಂತೆ, ಸ್ವಾರ್ಥರಹಿತ ಭಕ್ತಿಯಿಂದ ಮಾಡಿದ ನಮ್ಮ ಕರ್ಮಗಳೆಲ್ಲವೂ ಭಗವಂತನ ಕ್ರಿಯೆಗಳಾಗುತ್ತವೆ ಎಂಬ ಸತ್ಯವನ್ನು ಅರಿಯುವುದು ಮತ್ತು 'ನಾನು' 'ನನ್ನದು' ಎಂಬ ಭಾವನೆಯಿಂದ ಮುಕ್ತವಾಗಿ ಇರುವುದು. ಪರಾಭಕ್ತಿ ಅಥವಾ ಭಗವಂತನ ಸೇವೆಯಲ್ಲಿ ಇರುವುದು (ಇರೈ-ಪಣಿನಿಟ್ರಾಲ್) ಎಂದು ಶೈವಸಿದ್ಧಾಂತಿಗಳು ಕರೆಯುವ ತತ್ತ್ವವೂ ಇದೇ.

*ಜ್ಞಾನ ಮತ್ತು ವೇದಾಂತಗಳ ಗುರಿ ಏನು?*

'ನಾನು' ಎನ್ನುವುದು ಈಶ್ವರನಿಂದ ಬೇರೆಯಲ್ಲ ಎಂದು ಅರಿಯುವುದು ಮತ್ತು ನಾನು ಮಾಡುವವನು (ಕರ್ತೃತ್ವ, ಅಹಂಕಾರ) ಎಂಬ ಭಾವನೆಯಿಂದ ಮುಕ್ತವಾಗಿರುವುದು.

*ಭಕ್ತಿಯ ಗುರಿಯೂ ಜ್ಞಾನದ ಗುರಿಯೂ ಒಂದೇ ಆಗಿರುವುದು ಹೇಗೆ?*

ಮಾರ್ಗ ಯಾವುದೇ ಆಗಿರಲಿ, 'ನಾನು' ಮತ್ತು 'ನನ್ನದು' ಎಂಬ ಭಾವನೆಯ ನಾಶವೇ ಗುರಿ. ಇವು ಒಂದನ್ನೊಂದು ಆಶ್ರಯಿಸಿವೆ. ಅವುಗಳಲ್ಲಿ ಯಾವುದಾದರೂ ಒಂದರ ನಾಶ ಇನ್ನೊಂದರ ನಾಶವನ್ನು ತರುತ್ತದೆ. ಭಾವನೆ ಮತ್ತು ಭಾಷೆಗಳಿಗೆ ಆಚೆ ಇರುವ ಮೌನದ ಸ್ಥಿತಿಯನ್ನು ತಲುಪಲು 'ನಾನು' ಎಂಬ ಭಾವನೆಯನ್ನು ತೊಡೆದುಹಾಕುವ ಜ್ಞಾನಮಾರ್ಗವನ್ನು ಅನುಸರಿಸಬಹುದು ಅಥವಾ 'ನನ್ನದು' ಎಂಬ ಭಾವನೆಯನ್ನು ತೊಡೆದುಹಾಕುವ ಭಕ್ತಿ ಮಾರ್ಗವನ್ನು ಅನುಸರಿಸಬಹುದು.

*ಅಹಂಕಾರ ಎನ್ನುವುದು ಏನು?*

'ನಾನು' ಎಂಬ ರೂಪದ ಜೀವವೇ ಅಹಂಕಾರ. ಚಿತ್‌ಸ್ವರೂಪವಾಗಿರುವ ಆತ್ಮಕ್ಕೆ 'ನಾನು' ಎಂಬ ಭಾವನೆ ಇರುವುದಿಲ್ಲ. ಅಚೇತನವಾದ ದೇಹಕ್ಕೂ 'ನಾನು' ಎಂಬ ಭಾವನೆ ಇರುವುದಿಲ್ಲ. ಚೇತನ ಮತ್ತು ಅಚೇತನ ವಸ್ತುವಿನ ನಡುವೆ ಮಾಯಿಕವಾದ ಅಹಂಕಾರವು ಅನಿರ್ವಚನೀಯವಾದ ರೀತಿಯಲ್ಲಿ ಕಾಣಿಸಿಕೊಳ್ಳುವುದೇ ಈ ಎಲ್ಲ ತೊಂದರೆಗಳ ಮೂಲ ಕಾರಣ. ಯಾವುದೇ ರೀತಿಯಲ್ಲಿ ಅದು ನಾಶವಾದಾಗ, ನಿಜವಾಗಿ ಇರುವುದು ತಾನು ಇರುವ ಸ್ವರೂಪದಲ್ಲಿ ಗೋಚರವಾಗುತ್ತದೆ. ಇದನ್ನು 'ಮೋಕ್ಷ' ಎನ್ನುತ್ತಾರೆ.

*ನಿಶ್ಚಲಸ್ಥಿತಿ ನಿಷ್ಕ್ರಿಯವೇ?*

ಇದು ಸೋಮಾರಿತನದ ನಿಷ್ಕ್ರಿಯ ಸ್ಥಿತಿಯಲ್ಲ. ಕ್ರಿಯೆ ಎಂದು ಸಾಮಾನ್ಯವಾಗಿ ಕರೆಯುವ ಎಲ್ಲ ವ್ಯಾವಹಾರಿಕ ಕ್ರಿಯೆಗಳನ್ನೂ ಮನಸ್ಸಿನ ಒಂದು ಅಂಶದ ಮೂಲಕ ಹಾಗೂ ಪದೇಪದೇ ತಡೆದು ತಡೆದು ಮಾಡಲಾಗುತ್ತಿರುತ್ತದೆ. ಆದರೆ ಆತ್ಮದೊಡನೆ ವ್ಯವಹರಿಸುವ ಕ್ರಿಯೆ ಅಥವಾ ಆಂತರಿಕವಾಗಿ ನಿಶ್ಚಲವಾಗಿರುವುದು ಇಡೀ ಮನಸ್ಸಿನಿಂದ ಹಾಗೂ ಅವಿಚ್ಛಿನ್ನವಾಗಿ ನಡೆಸುತ್ತಿರುವ ತೀವ್ರ ಕ್ರಿಯೆ.

*ಸಾಧಕನು ಅನುಸರಿಸಬೇಕಾದ ನಿಯಮಗಳು ಯಾವುವು?*

ಆಹಾರದಲ್ಲಿ ಮಿತಿ, ನಿದ್ದೆಯಲ್ಲಿ ಮಿತಿ ಮತ್ತು ಮಾತಿನಲ್ಲಿ ಮಿತಿ.

*ಕಾರ್ಯಕಲಾಪಗಳ ನಡುವೆ ಮನಶ್ಶಾಂತಿಯನ್ನು ಪಡೆಯುವು ಹೇಗೆ?*

ಕರ್ಮ ಮತ್ತು ಜ್ಞಾನ ಪರಸ್ಪರ ಅಡಚಣೆಗಳಲ್ಲ. ವಿವೇಕಿಯೊಬ್ಬನ ವ್ಯವಹಾರಗಳು ಇತರರ ಕಣ್ಣಿಗೆ ಮಾತ್ರ ಕಾಣುತ್ತವೆ, ಅವನ ಕಣ್ಣಿಗೆ ಕಾಣುವುದಿಲ್ಲ. ಅವನು ಅಗಾಧವಾದ

ಕೆಲಸಗಳನ್ನು ನೆರವೇರಿಸುತ್ತಿದ್ದರೂ, ವಾಸ್ತವವಾಗಿ ಅವನು ಏನನ್ನೂ ಮಾಡುತ್ತಿರುವುದಿಲ್ಲ. ಆದ್ದರಿಂದ ಅವನ ಕ್ರಿಯೆಗಳು ಮನಸ್ಸಿನ ನಿಷ್ಕ್ರಿಯತೆಗೆ ಹಾಗೂ ಶಾಂತಿಗೆ ಅಡ್ಡಿಯಾಗವು. ತಾನು ಕರ್ತನಲ್ಲ ಎನ್ನುವುದು ಅವನಿಗೆ ತಿಳಿದಿರುತ್ತದೆ. ನಡೆಯುತ್ತಿರುವ ಎಲ್ಲ ವ್ಯವಹಾರಗಳ ಮೌನ ಸಾಕ್ಷಿಯಾಗಿ ಅವನು ಉಳಿದಿರುತ್ತಾನೆ.

*ಬ್ರಹ್ಮಚರ್ಯದ ಅರ್ಥವೇನು?*

ಬ್ರಹ್ಮವನ್ನು ಕುರಿತ ವಿಚಾರವನ್ನು ಮಾತ್ರ ಬ್ರಹ್ಮಚರ್ಯ ಎನ್ನಬೇಕು.

*ದೇಹವಿರುವಾಗಲೇ ಕರ್ಮವನ್ನು ಮೀರುವುದು ಸಾಧ್ಯವೇ?*

ಅಹಂಕಾರವೇ ಕರ್ತೃ. ಶರೀರ ಮತ್ತು ಆತ್ಮಗಳ ನಡುವೆ ಅಸ್ತಿತ್ವಕ್ಕೆ ಬಂದ ಅಹಂಕಾರ ಲಯವಾದಾಗ ಕರ್ಮವು ಉಳಿಯುವುದೇ? 'ನಾನು' ಎಂಬುದು ಇಲ್ಲವಾದಾಗ ಕರ್ಮವೂ ಇರುವುದಿಲ್ಲ.

*ಸಿದ್ಧಿಗಳಿಗೂ ಮುಕ್ತಿಗೂ ಏನಾದರೂ ಸಂಬಂಧವಿದೆಯೇ?*

ಮೋಕ್ಷಕ್ಕೆ ಒಯ್ಯುವುದು ವಿವೇಕದಿಂದ ಕೂಡಿದ ವಿಚಾರ ಮಾತ್ರವೇ. ಅಲೌಕಿಕ ಸಿದ್ಧಿಗಳು ಮಾಯೆಯ ಶಕ್ತಿಯಿಂದ ಕಲ್ಪಿತವಾದ ಮಿಥ್ಯಾದೃಶ್ಯಗಳು. ಶಾಶ್ವತವಾದ ಆತ್ಮದರ್ಶನವೊಂದೇ ನಿಜವಾದ ಸಿದ್ಧಿ. ಕಾಣಿಸಿಕೊಳ್ಳುವ ಮತ್ತು ಅದೃಶ್ಯವಾಗುವ ಸಿದ್ಧಿಗಳು ಮಾಯಾಕಲ್ಪಿತವಾದುದರಿಂದ ಸತ್ಯವಾಗಲಾರವು. ಕೀರ್ತಿ, ಸುಖ ಮುಂತಾದವನ್ನು ಅನುಭವಿಸುವ ಉದ್ದೇಶದಿಂದ ಅವುಗಳನ್ನು ಸಾಧಿಸಲಾಗುತ್ತದೆ. ಕೆಲವರಿಗೆ ಅವರ ಕರ್ಮದ ಮೂಲಕ ಅವು ಅರಸದೆಯೇ ಬರುತ್ತವೆ. ಎಲ್ಲ ಸಿದ್ಧಿಗಳ ನಿಜವಾದ ಗುರಿ ಬ್ರಹ್ಮದೊಡನೆ ಐಕ್ಯವಾಗುವುದು ಎಂಬುದನ್ನು ತಿಳಿದುಕೊಳ್ಳಿ. ಇದೇ ಮೋಕ್ಷಾವಸ್ಥೆ.

*ಬಂಧವಾಗಲಿ ಮೋಕ್ಷವಾಗಲಿ ನಿಜವಾಗಿ ಇಲ್ಲ ಎನ್ನುವುದನ್ನು ಅನುಭವದ ಬಲದ ಮೇಲೆ ನಿರ್ಣಯಿಸುವುದು ಹೇಗೆ?*

'ಬಂಧ' ಮತ್ತು 'ಮೋಕ್ಷ' ಕೇವಲ ಭಾಷಿಕ ಶಬ್ದಗಳು. ಅವಕ್ಕೆ ತಮ್ಮದೇ ಸ್ವಂತ ಅಸ್ತಿತ್ವ ಇಲ್ಲ. 'ಈ ಬಂಧ ಮತ್ತು ಮೋಕ್ಷ ಯಾರಿಗೆ?' ಎಂದು ವಿಚಾರಮಾಡಿದಾಗ, 'ಅವು ನನಗೆ' ಎನ್ನುವುದು ಕಂಡುಬರುತ್ತದೆ. 'ನಾನು ಯಾರು?' ಎಂದು ಕೇಳಿಕೊಂಡಾಗ 'ನಾನು' ಎಂಬ ವಸ್ತುವೇ ಇಲ್ಲದಿರುವುದು ಕಂಡುಬರುತ್ತದೆ. ಇರುವುದು ವ್ಯಕ್ತಿಯ ನಿಜಸ್ವರೂಪ ಮಾತ್ರ ಎನ್ನುವುದು ಆಗ ಅಂಗೈಯಲ್ಲಿನ ನೆಲ್ಲಿಕಾಯಿನಷ್ಟು ಸ್ಪಷ್ಟವಾಗುತ್ತದೆ. ಬರಿ ಶಾಬ್ದಿಕ ಚರ್ಚೆಗಳನ್ನು ಬದಿಗಿರಿಸಿ ತಮ್ಮೊಳಗೇ ತಮ್ಮ ವಿಷಯವನ್ನು ವಿಚಾರ ಮಾಡುವವರಿಗೆ ಸಹಜವಾಗಿ ಮತ್ತು ಸ್ಫುಟವಾಗಿ ಈ ಸತ್ಯದ ಅನುಭವ ಉಂಟಾಗುವುದರಿಂದ, ಸಾಕ್ಷಾತ್ಕಾರ ಪಡೆದ ಎಲ್ಲ ವ್ಯಕ್ತಿಗಳೂ ನಿಜವಾದ ಆತ್ಮಕ್ಕೆ ಸಂಬಂಧಿಸಿದಂತೆ ಬಂಧವಾಗಲಿ ಮೋಕ್ಷವಾಗಲಿ ಇಲ್ಲ ಎನ್ನುವುದನ್ನು ಏಕ ಪ್ರಕಾರವಾಗಿ ಗ್ರಹಿಸುತ್ತಾರೆ.

*ತಮ್ಮ ಸ್ವಸ್ವರೂಪವನ್ನು ತಿಳಿಯುವುದು ಪ್ರತಿಯೊಬ್ಬರಿಗೂ ಸಾಧ್ಯವೇ?*

ತನ್ನ ನಿಜವಾದ ಸ್ವರೂಪ ಏನೆಂಬುದನ್ನು ನಿಷ್ಪುಷ್ಟವಾಗಿ, ನಿಸ್ಸಂದೇಹವಾಗಿ ತಿಳಿದುಕೊಳ್ಳಲು ಪ್ರತಿಯೊಬ್ಬನಿಗೂ ಸಾಧ್ಯ. ಚರಾಚರವಾದ ಇಡೀ ಜಗತ್ತು ಗಾಢನಿದ್ರೆ ಮತ್ತು ಮೂರ್ಛೆಗಳ ಸ್ಥಿತಿಯಲ್ಲೇ ಅದೃಶ್ಯವಾದರೂ ತಾನು ಮಾತ್ರ ಅದೃಶ್ಯವಾಗುವುದಿಲ್ಲ ಎನ್ನುವುದು ಪ್ರತಿಯೊಬ್ಬನ ಅನುಭವ. ಆದ್ದರಿಂದ ಎಲ್ಲರಿಗೂ ಸಮಾನವಾಗಿ ಮತ್ತು

ಪ್ರತಿಯೊಬ್ಬನಿಗೂ ಸದಾ ನೇರವಾಗಿ ಅನುಭವಕ್ಕೆ ಬರುತ್ತಿರುವ ಶುದ್ಧ ಸತ್ತ್ವದ ಸ್ಥಿತಿಯೇ ಒಬ್ಬನ ನಿಜಸ್ವರೂಪ. ಜ್ಞಾನೋದಯದ ಹಾಗೂ ಅಜ್ಞಾನಾವಸ್ಥೆಯ ಕಾಲದಲ್ಲಿ ಆಗುವ, ಹೊಸ ಹೊಸ ಶಬ್ದಗಳಲ್ಲಿ ವರ್ಣಿಸಬಹುದಾದ ಅನುಭವಗಳೆಲ್ಲವೂ ನಮ್ಮ ನಿಜ ಸ್ವರೂಪಕ್ಕೆ ವಿರುದ್ಧವಾಗಿದೆ.

# ಅಧ್ಯಾಯ 9

## ಸಂಕಲಿತ ಕೃತಿಗಳು: ಭಕ್ತಿಗೀತೆಗಳು

ವಿರೂಪಾಕ್ಷ ಅವಧಿಯ (ಸುಮಾರು 1914) ಕೊನೆಯಲ್ಲಿ ಶ್ರೀ ಅರುಣಾಚಲವನ್ನು ಕುರಿತು ರಚಿಸಿದ ಐದು ಸ್ತೋತ್ರಗಳು ಅನುಭಾವದ ವಿದ್ಯಾರ್ಥಿಗಳಿಗೆ ತೀವ್ರ ಆಸಕ್ತಿಯನ್ನು ಉಂಟು ಮಾಡುವಂಥವು. ಏಕೆಂದರೆ ಅವು ಆತ್ಮಚರಿತ್ರೆ, ಪುರಾಣ, ಭಾವಪೂರ್ಣ ಭಕ್ತಿ ಮತ್ತು ಗಂಭೀರವಾದ ತತ್ತ್ವಶಾಸ್ತ್ರ ಇವನ್ನು ವಿಭಿನ್ನ ಪ್ರಮಾಣಗಳಲ್ಲಿ ಹದವಾಗಿ ಬೆರೆಸುತ್ತವೆ. ತಮಿಳು ವಿದ್ವಾಂಸರಿಗೆ ಅವುಗಳಲ್ಲಿ ಒಂದು ಹೆಚ್ಚಿನ ಆಕರ್ಷಣೆಯೂ ಇದೆ. ಮಹರ್ಷಿಗಳ ಅನ್ಯಾದೃಶ ಕಾವ್ಯ ಶಕ್ತಿ ಮತ್ತು ಭಾಷೆ ಛಂದಸ್ಸುಗಳ ಮೇಲೆ ಅವರ ಸಂಪೂರ್ಣ ಪ್ರಭುತ್ವಗಳನ್ನು ಅವು ನಿದರ್ಶಿಸುತ್ತವೆ.

ಮೊದಲನೆಯದು **ಅಕ್ಷರ ಮಣಿ ಮಾಲೈ (ಅಕ್ಷರಗಳ ವಿವಾಹ ಮಾಲೆ)**

ತಮ್ಮ ದೈನಂದಿನ ಆಹಾರಕ್ಕಾಗಿ ಊರಿನ ಸುತ್ತ ಭಿಕ್ಷೆ ಎತ್ತಲು ಹೋಗುವಾಗ ಹಾಡಿಕೊಳ್ಳಲು ಒಂದು ಹೊಚ್ಚ ಹೊಸ ಹಾಡು ಬೇಕೆಂದು ಅವರ ಸಾಧು ಭಕ್ತರು ಬೇಡಿಕೊಳ್ಳಲು ಅದಕ್ಕೆ ಉತ್ತರವಾಗಿ ಮಹರ್ಷಿ ಒಂದು ಸುತ್ತು ಗಿರಿಪ್ರದಕ್ಷಿಣೆಯನ್ನು ಮುಗಿಸುವುದರೊಳಗೆ ಇದನ್ನು ರಚಿಸಿ ಜೋಡಿಸಿದರು. ಇದರ 108 ಪದ್ಯಗಳು ತಮಿಳಿನ ಅತ್ಯಂತ ಭಾವ ಪೂರ್ಣ ಧಾರ್ಮಿಕ ಭಾವಗೀತೆಗಳಿಗೆ ಸೇರಿವೆ ಮತ್ತು ಯುಕ್ತವಾಗಿಯೇ ಜನಪ್ರಿಯವಾಗಿವೆ. ಏಕೆಂದರೆ ಎಚ್ಚೆತ್ತ ಜೀವ ಮತ್ತು ಪರಮಾತ್ಮರ ನಡುವೆ ನಡೆಯುವ ಎಂದೆಂದೂ ಮುಗಿಯದ ಸಂವಾದವನ್ನು ಅವು ಅಷ್ಟು ಸ್ಪಷ್ಟವಾಗಿ, ಸುಂದರವಾಗಿ, ಶಕ್ತಿಯುತವಾಗಿ ಹಾಗೂ ಭಾವ ಪೂರ್ಣವಾಗಿ ನಿರೂಪಿಸುತ್ತವೆ. ಅನೇಕ ಪದ್ಯಗಳು ಪ್ರೇಮದ ಸಾಂಕೇತಿಕತೆಯಿಂದ ತುಂಬಿವೆ. ಭಗವಂತನೊಡನೆ ಸಮಾಗಮಕ್ಕಾಗಿ ಹಾತೊರೆಯುತ್ತಿರುವ ಪ್ರೇಮವಿಹ್ವಲಳಾದ ಹುಡುಗಿಯೊಬ್ಬಳ ಹಂಬಲವನ್ನು ಅವು ನುಡಿದಿವೆ. ಆದ್ದರಿಂದಲೇ 'ಮಣಿಮಾಲೈ' ಎಂಬ ಹೆಸರು. ಆದರೆ ಐಂದ್ರಿಯಿಕವೂ ಆಕರ್ಷಕವೂ ಆದ ಅದರ ಪ್ರತಿಮೆಗಳ ಪಾತ್ರ ದೂರ ವ್ಯಾಪಿಯೂ ನಿರ್ಬಂಧರಹಿತವೂ ಆಗಿದೆ. ಪರಮಾತ್ಮನ ಪ್ರತೀಕವಾದ ಬೆಟ್ಟವನ್ನು ತಾಯಿ, ತಂದೆ, ಗುರು, ಸೂರ್ಯ, ಚಂದ್ರ, ಸಮುದ್ರ ಮತ್ತು ರಮಣ ಎಂದು ವಿವಿಧವಾಗಿ ಆದರೆ ಯಾವಾಗಲೂ ಯುಕ್ತವಾಗಿ ಕರೆಯಲಾಗಿದೆ. ಇಲ್ಲಿನ ಭಾವವು ವೈಯುಕ್ತಿಕವಾದುದೋ ಆತ್ಮಚರಿತ್ರೆಗೆ ಸಂಬಂಧಿಸಿದುದೋ ಆಗಿರದೆ ಆತ್ಮದೊಡನೆ ಎಲ್ಲ ಜೀವಗಳ ಪುನಸ್ಸಮಾಗಮದ ತೀವ್ರ ಹಂಬಲದ ಪರೋಕ್ಷ ಅಭಿವ್ಯಕ್ತಿ ಎನ್ನುವುದು ಪ್ರತಿಮೆಗಳ ಬದಲಾವಣೆಯಿಂದ ತಿಳಿದುಬರುತ್ತದೆ. ಇತರ ಭಾರತೀಯ ಚಿಂತಕರಂತೆಯೇ, ಮಹರ್ಷಿಗಳೂ ಐಕ್ಯದ ಅನಿರ್ವಚನೀಯ ಅನುಭವವಾದ ಜ್ಞಾನಕ್ಕೂ ಈ ಅನುಭವಕ್ಕೆ ಒಂದು ಮಾರ್ಗ ಮತ್ತು ಅದರ ಸ್ಮರಣೆ ಎರಡೂ ಆದ ಭಕ್ತಿಗೂ ಯಾವ ವಿರೋಧವನ್ನೂ ಕಾಣಲಿಲ್ಲ.

ಈ ಕಾವ್ಯದ ಸಾಹಿತ್ಯಕ ಸೌಂದರ್ಯ ಮತ್ತು ದಾರ್ಶನಿಕ ಅರ್ಥ ಎರಡನ್ನೂ ಸಾಮಾನ್ಯ ಓದುಗನಿಗೆ ತಿಳಿಸುವಲ್ಲಿ ಮುರುಗನಾರ್‌ರ ಸೂಕ್ಷ್ಮಗ್ರಾಹಿಯಾದ ವ್ಯಾಖ್ಯಾನ ನೆರವು ನೀಡುತ್ತದೆ. ಶುದ್ಧ ಅತೀಂದ್ರಿಯ ಜ್ಞಾನವೇ ಸ್ವರೂಪದ್ರವ್ಯವಾಗಿರುವ ಸದ್ವಸ್ತುವಿನ ರೂಪವಾದ ಪರ್ವತ ಮತ್ತು ಅದರ ನಾಮವಾದ ಶಿವ ಈ ಎರಡರ ಐಕ್ಯವನ್ನು 'ಅರುಣಾಚಲ ಶಿವ' ಎಂಬ ಪಲ್ಲವಿ ಒತ್ತಿಹೇಳುತ್ತದೆ.

ಈ ಮಾಲೆಯು ಕೆಲವು ಹೂವುಗಳು ಇವು:

2. ಓ ಅರುಣಾಚಲ,
ಸುಂದರ ಮತ್ತು ಅಳಗುರಂತೆ
ನೀನು ಮತ್ತು ನಾನು ಒಂದಾಗಿ
ಅಖಂಡರಾಗಿ ಇರೋಣ.

9. (ನನ್ನನ್ನು ಅಪಹರಿಸಿಕೊಂಡು ಹೋದ ತರುವಾಯ) ಈಗ ನೀನು
ನನ್ನನ್ನು ಆಲಿಂಗಿಸದಿದ್ದರೆ, ಅದು ಪುರುಷತ್ವವೇ,
ಅರುಣಾಚಲ?

13. ಓಂ ಎಂಬಕ್ಷರದ ತಾತ್ಪಾರ್ಯ,
ಅಸದೃಶ, ಅನಾತೀತ,
ಯಾರು ತಾನೇ ನಿನ್ನನ್ನು ನಿಜವಾಗಿ ಅರಿಯಬಲ್ಲರು,
ಅರುಣಾಚಲ?

27. ಇಡೀ ಜಗತ್ತನ್ನೇ ಕಬಳಿಸುವ ಉಜ್ವಲ ಕಿರಣಗಳ
ಸೂರ್ಯನೇ, ನಿನ್ನ ಅನುಗ್ರಹ
ನನ್ನ ಹೃದಯಕಮಲವನ್ನು ಅರಳಿಸಲಿ,
ಅರುಣಾಚಲ.

28. ನಾನು ನಿನ್ನನ್ನು ಸವಿಯಲು ಬಂದೆ, ಆದರೆ
ನಾನೇ ನಿನಗೆ ಆಹಾರವಾದೆ,
ಈಗ ನನಗೆ ನೆಮ್ಮದಿ,
ಓ ಅರುಣಾಚಲ

30. ನನ್ನನ್ನು ಬರಿಮ್ಮೆ ಮಾಡು, ಆಮೇಲೆ
ನಿನ್ನ ಅನುಗ್ರಹದ ವೈಭವವನ್ನು ಪುನಃ ನನಗೆ ತೊಡಿಸು,
ಓ ಅರುಣಾಚಲ,

39. ನಾನು ನಾಯಿಗಿಂತ ಕಡೆಯೆ?
ದೃಢವಾದ ಶೋಧನೆಯಿಂದ ('ನಾನು' ಎಂಬುದರ ವಾಸನೆಯಿಂದ)
ನಾನು ನಿನ್ನನ್ನು ಹುಡುಕಿ ತಲುಪುತ್ತೇನೆ,
ಅರುಣಾಚಲ

55. ನಿನ್ನ ಬೆಂಕಿ ನನ್ನನ್ನು ಸುಟ್ಟು ಬೂದಿ ಮಾಡುವುದರೊಳಗೆ
ನಿನ್ನ ಅನುಗ್ರಹದ ಧಾರೆಯನ್ನು ನನ್ನ ಮೇಲೆ ಸುರಿಸು

ಓ ಅರುಣಾಚಲ.

61. ಕೊಳೆತು ಕೆಟ್ಟು ಹೋದ ಹಣ್ಣು ನಿಷ್ಪ್ರಯೋಜಕ,
ಸರಿಯಾಗಿ ಪಕ್ವವಾಗಿರುವಾಗಲೇ ಅದನ್ನು ಸವಿದು ತಿನ್ನುವುದು ಶ್ರೇಷ್ಠ,
ಓ ಅರುಣಾಚಲ.

83. ದೀನದರಿದ್ರರ ಜೊತೆಗೆ ಸೇರಿ
ಇಷ್ಟು ಮಹತ್ವವನ್ನು ನೀನು ಹೇಗೆ ಸಾಧಿಸಿದೆ,
ಅರುಣಾಚಲ?

91. ರಾತ್ರಿಯಾಗಲಿ ಹಗಲಾಗಲಿ ಇಲ್ಲದಿರುವ
ಹೃದಯದ ವಿಶಾಲ ಶೂನ್ಯಾಕಾಶದಲ್ಲಿ,
ನಾವು ವಿಹರಿಸೋಣ, ಬಾ,
ಓ ಅರುಣಾಚಲ

101. ನೀರಿನಲ್ಲಿ ಮಂಜುಗಡ್ಡೆ ಕರಗಿಹೋಗುವಂತೆ,
ಪ್ರೇಮದ ಸ್ವರೂಪವೇ ಆಗಿರುವ ನಿನ್ನಲ್ಲಿ ನಾನು
ಪ್ರೇಮವಾಗಿ ಕರಗಿಹೋಗುವಂತಾಗಲಿ,
ಓ ಅರುಣಾಚಲ.

108. ಪ್ರಿಯ ಅರುಣಾಚಲ, ನಿನ್ನ ಮಾಲೆಯನ್ನು
ನನಗೆ ಕೊಡು; ನನ್ನ ಈ ಮಾಲೆಯನ್ನು
ಸ್ವೀಕರಿಸಿ ಹಾಕಿಕೋ, ಅರುಣಾಚಲ.

*ನವ ಮಣಿ ಮಾಲೈ* (ಒಂಬತ್ತು ಮಣಿಗಳ ಹಾರ)ದಲ್ಲಿ, ಪ್ರತಿಯೊಂದು ಪದ್ಯವೂ ಒಂದು ವಿಶಿಷ್ಟ ಛಂದಸ್ಸಿನಲ್ಲಿದೆ ಮತ್ತು ಇಡೀ ಕವನವೇ ಒಂದು ಚಮತ್ಕಾರದ ಪ್ರದರ್ಶನ. ಪುರಾಣ ಮತ್ತು ತತ್ತ್ವಶಾಸ್ತ್ರಗಳನ್ನು ಒತ್ತಾಗಿ ಹೆಣೆದಿರುವುದಕ್ಕೆ ದೃಷ್ಟಾಂತವಾಗಿ, ಅದರ ಮೊದಲಿನ ಎರಡು 'ಮಣಿ'ಗಳನ್ನು ಈ ಕೆಳಗೆಕೊಟ್ಟಿದೆ.

1. ಅವನು ಸದಾ ಅಚಲ.
ಆದರೆ (ತಿಲ್ಲೈನ) ದೇವಾಲಯದ ಸಭಾಂಗಣದಲ್ಲಿ
ಅಲ್ಲಿ ನಿಶ್ಚಲಳಾಗಿ ಕುಳಿತಿರುವ ತಾಯಿಯ ಎದುರು
ತನ್ನ ಆನಂದ ತಾಂಡವವನ್ನು ನರ್ತಿಸುತ್ತಾನೆ.
ಈಗ ಆ ಶಕ್ತಿಯನ್ನು ಒಳಕ್ಕೆಳೆದುಕೊಂಡು,
ಇಲ್ಲಿ ಅಚಲವಾದ, ಗಂಭೀರವಾದ, ಮೌನವಾದ ರೂಪ ಧರಿಸಿ
ಅರುಣಾಚಲವಾಗಿ ಮೇಲೇರಿದ್ದಾನೆ.

2. ಅ,ರು ಮತ್ತು ಣ ಎಂಬುದು
ಸತ್,ಚಿತ್ ಮತ್ತು ಆನಂದಗಳನ್ನು ಮಾತ್ರವೇ ಸಂಕೇತಿಸುವುದಿಲ್ಲ,
ಪರಮಾತ್ಮ, ಜೀವ ಮತ್ತು ಅವುಗಳ ಐಕ್ಯ ಇವನ್ನೂ ಸಂಕೇತಿಸುತ್ತವೆ.
ಆದ್ದರಿಂದ ಅರುಣ ಎಂದರೆ ತತ್ ತ್ವಂ ಅಸಿ (ಅದು ನೀನು ಆಗಿದ್ದೀಯೆ).

ಸ್ಥಿರವಾದ ಪರಿಪೂರ್ಣತೆಯೇ ಅಚಲ.
ಸುಂದರ ಸುವರ್ಣ ಪ್ರಕಾಶದ
ಅರುಣಾಚಲನ ಸಹಾಯವನ್ನು ಬೇಡು.
ಅವನ ಒಂದು ಸ್ಮರಣೆ ನಿನಗೆ ಮುಕ್ತಿ ತರುತ್ತದೆ.

''ಬರೆಯಲು ಅವರನ್ನು ಯಾರೂ ಪ್ರಾರ್ಥಿಸದಿದ್ದರೂ ತಾವಾಗಿಯೇ ಅವರಿಗೆ ಹೊಳೆದು, ಅವನ್ನು ಅವರು ಬರೆದಿಡುವಂತೆ ಒತ್ತಾಯಪಡಿಸಿದ'' ಪದ್ಯಗಳೆಂದರೆ *ಪದಿಕಂ* (ಹನ್ನೊಂದು ಪದ್ಯಗಳು) ಮತ್ತು *ಅಷ್ಟಕಂ* (ಎಂಟು ಪದ್ಯಗಳು) ಮಾತ್ರವೇ. ಭಾವ ಮತ್ತು ವಸ್ತುಗಳಲ್ಲಿ ಈ ಎರಡೂ ಸ್ತೋತ್ರಗಳು ಎಷ್ಟು ವಿಭಿನ್ನವಾಗಿಯೆಂದರೆ, ಒಬ್ಬನೇ ಒಬ್ಬ ವ್ಯಕ್ತಿ ಈ ಎರಡನ್ನೂ ಬರೆದ ಮತ್ತು ಮೊದಲನೆಯದನ್ನು ರಚಿಸಿದ ಮಾರನೆಯ ದಿನವೇ ಎರಡನೆಯದನ್ನು ಬರೆದ ಎನ್ನುವುದನ್ನು ನಂಬುವುದು ಕಷ್ಟ. ಆದರೂ ಅದೇ ನಿಜದ ಸಂಗತಿ. ಭಕ್ತರಿಗಾಗಿ ಮತ್ತು ಭಕ್ತರ ದೃಷ್ಟಿಯಿಂದ ರಚಿಸಿದ *ಪದಿಕಂ* ದ್ವೈತದಲ್ಲಿ ಸುಖಿಸುವ, ತೀವ್ರ ಹಂಬಲದ ಒಂದು ಸಂತತವಾದ ಆಕ್ರಂದನ. ನಿರಾಸೆ ನಿರೀಕ್ಷೆಗಳ ಬದಲಾಯಿಸುವ ಛಾಯೆಗಳಿಗೆ ಅನುಗುಣವಾಗಿ ಮಾರ್ಪಡುವ ಇಂಪಿನಿಂದ ಕೂಡಿವೆ. ಹಾಡುವ ಕವಿ ಬಲೆಯಲ್ಲಿ ಸಿಕ್ಕಿಬಿದ್ದ ಒಂದು ಜಿಂಕೆ, ಮಾತನಾಡಲಾಗದ ಮೂಕ ಪ್ರತಿಮೆ, ಕಮಲದ ದಂಟಿಗೆ ಅಂಟಿಕೊಂಡಿರುವ ಕಪ್ಪೆ, ಸೂರ್ಯನ ಬೆಳಕಿನಲ್ಲಿ ಅರಳಿದ ಹೂವನ್ನು ಇನ್ನೂ ಸವಿಯದ ಜೇನು ನೊಣ. ಆದರೆ ಅಷ್ಟಕಂವು ಸ್ಪಷ್ಟವಾದ ಸ್ಫುಟವಾದ ಪ್ರತಿಮೆಗಳ ಮೂಲಕ ತನ್ನ ಸ್ವಂತ ಅನುಭವವನ್ನು ತಿಳಿಸುತ್ತಿರುವ ಋಷಿಯೊಬ್ಬನ ಪ್ರಾಮಾಣಿಕವಾದ ಅಧಿಕಾರಪೂರ್ವಕವಾದ ಉಕ್ತಿ. *ಪದಿಕವು* ಭಾವದಿಂದ ತುಂಬಿ, ಮಾನವನ ನಿಟ್ಟುಸಿರು ಅಳುಗಳಿಂದ ಭಾರವಾಗಿದ್ದರೆ, ಅಷ್ಟಕವು ವ್ಯಕ್ತಿತ್ವವನ್ನು ಮೀರಿ ಬೆಳೆದ ಗುರುವಿನೊಬ್ಬನ ಅಭಿಪ್ರಾಯಗಳ ನಿಷ್ಕೃಷ್ಟವಾದ ಸಮರ್ಥವಾದ ನಿರೂಪಣೆಯಾಗಿದೆ. ಈ ಮುಂದಿನ ಉಲ್ಲೇಖಗಳು ಇದನ್ನು ತೋರಿಸುತ್ತವೆ:

ಸತ್ ಮತ್ತು ಚಿತ್ ಆಗಿರುವ ನಿನ್ನನ್ನು ಕಡೆಗಣಿಸಿ
ದೇವರನ್ನು ಹುಡುಕುವುದು
ಕೈಯಲ್ಲಿ ದೀಪ ಹಿಡಿದು ಕತ್ತಲನ್ನು ಅರಸಿದಂತೆ,
ಸತ್ ಮತ್ತು ಚಿತ್ ಎಂಬುದಾಗಿ ಕೊನೆಯಲ್ಲಿ
ನಿನ್ನನ್ನು ಪ್ರಕಟಿಸಿಕೊಳ್ಳಲು
ನೀನು ಎಲ್ಲ ಧರ್ಮಗಳಲ್ಲೂ
ವಿವಿಧ ರೂಪಗಳಲ್ಲಿ ಇದ್ದೀಯೆ.
ನಿನ್ನನ್ನು ಸತ್ ಚಿತ್ ಎಂದು ಕಾಣಲಾಗದವರು
ಸೂರ್ಯನನ್ನು ಅರಿಯದ ಕುರುಡರಂತೆ....

ಸೂಕ್ಷ್ಮಗ್ರಾಹಿಫಲಕದ ಮೇಲೆ ಸೂರ್ಯನ ಬೆಳಕು
ಒಮ್ಮೆ ಬಿದ್ದ ಅನಂತರದಲ್ಲಿ ಅದು ಮತ್ತೆ ಬೇರೆ
ಬಿಂಬಗಳನ್ನು ಗ್ರಹಿಸುತ್ತದೆಯೇ? ಪ್ರಕಾಶಮಾನವಾದ
ಕರುಣಾಳುವಾದ ನಿನಗೆ ಹೋಲಿಸಿದಲ್ಲಿ

ಸದ್ವಸ್ತು ಎನ್ನುವುದು ಬೇರೊಂದುಂಟೇ, ಅರುಣಾಚಲ?

ಮೋಡಗಳು ಸುರಿಸಿದ ಮಳೆಯ ಹನಿಗಳು
ಉದಿಸಿದ್ದು ಸಮುದ್ರದಿಂದ, ಎಲ್ಲ ಅಡ್ಡಿ ಆತಂಕಗಳಿದ್ದರೂ
ತಮ್ಮ ತವರಾದ ಸಮುದ್ರವನ್ನು ಮತ್ತೆ ತಲುಪುವವರೆಗೆ
ಅವು ವಿಶ್ರಮಿಸವು.

ನಿನ್ನಿಂದ ಹೊರಟ ದೇಹಧಾರಿಯಾದ ಜೀವವು
ತಾನು ಆಯ್ದ ವಿವಿಧ ಮಾರ್ಗಗಳ ಮೂಲಕ
ಕೆಲವು ಕಾಲ ಗೊತ್ತು ಗುರಿಯಿಲ್ಲದೆ ಅಲೆಯಬಹುದು,
ಆದರೆ ಮೂಲವಾದ ನಿನ್ನನ್ನು ಮತ್ತೆ ಸೇರುವ ವರೆಗೆ
ಅದಕ್ಕೆ ವಿಶ್ರಾಂತಿಯೇ ಇರುವುದಿಲ್ಲ.

ಹಕ್ಕಿಯೊಂದು ಅಲ್ಲಿಂದಿಲ್ಲಿಗೆ ಹಾರಾಡಬಹುದು,
ಆದರೆ ಅದು ಆಕಾಶದಲ್ಲಿ ನೆಲೆಸಲಾರದು.
ತನ್ನ ವಾಸಸ್ಥಾನವನ್ನು ಕಂಡುಕೊಳ್ಳಲು
ಅದು ತಾನು ಹೊರಟ ದಾರಿಯಲ್ಲೇ ಹಿಂದಿರುಗಿ
ಕೊನೆಯಲ್ಲಿ ಭೂಮಿಗೇ ಬರಬೇಕು.

ಅಂತೆಯೇ ಜೀವವು ನಿನ್ನೆಡೆಗೆ ತಿರುಗಬೇಕು,
ಅರುಣಾಚಲ
ಮತ್ತು ಆನಂದಸಾಗರವಾದ
ನಿನ್ನಲ್ಲಿ ಮಾತ್ರವೇ ಪುನಃ ಲೀನವಾಗಬೇಕು.

ಐದನೆಯ ಮತ್ತು ಶಿಖರಪ್ರಾಯವಾದ ಸ್ತೋತ್ರ, *ಅರುಣಾಚಲ ಪಂಚರತ್ನಂ,* 1917ರಲ್ಲಿ ಮೂಲತಃ ಸಂಸ್ಕೃತದಲ್ಲಿ ರಚಿತವಾಯಿತು. ತಮಿಳು ಭಕ್ತರೊಬ್ಬರ ಪ್ರಾರ್ಥನೆಯನ್ನು ಮನ್ನಿಸಿ 1922ರಲ್ಲಿ ಸ್ವತಃ ಮಹರ್ಷಿಗಳೇ ಅದನ್ನು ವೆನ್ಬ ವೃತ್ತದಲ್ಲಿ ತಮಿಳಿಗೆ ಅನುವಾದ ಮಾಡಿದರು. 1917ರಲ್ಲಿ ಒಂದು ಬೆಳಿಗ್ಗೆ ಕಾವ್ಯಕಂಠ ಗಣಪತಿ ಶಾಸ್ತ್ರಿಗಳು ಸಂಸ್ಕೃತದಲ್ಲಿ ಒಂದು ಪದ್ಯವನ್ನು ರಚಿಸಲು ಪ್ರಯತ್ನಿಸುವಂತೆ ಮಹರ್ಷಿಗಳನ್ನು ಬೇಡಿಕೊಂಡರು. ಅದೂ ಸಹ ಕಷ್ಟವಾದ ಆರ್ಯಾವೃತ್ತದಲ್ಲಿ ರಚಿಸುವಂತೆ ಪ್ರಾರ್ಥಿಸಿ, ನೇರವಾಗಿ ಅದರ ಲಕ್ಷಣವನ್ನು ವಿವರಿಸಲು ಪ್ರಾರಂಭಿಸಿದರು. ಕೂಡಲೇ ಮಹರ್ಷಿಗಳು ಶುದ್ಧವಾದ ಸಂಸ್ಕೃತದಲ್ಲಿ ಐದು ಅರ್ಥಗರ್ಭಿತವಾದ ಪದ್ಯಗಳನ್ನು ಆಶ್ಚರ್ಯಚಕಿತರಾದ ಆ ಪಂಡಿತರಿಗೆ ನೀಡಿದರು.

ಅಮೃತವಾರಿಧಿ, ಅನುಗ್ರಹಪೂರ್ಣ, ಪರಮಾತ್ಮನೇ,
ಸಕಲವಸ್ತುಗಳನ್ನೂ ಆವರಿಸುವ ಕಿರಣಗಳನ್ನು ಪ್ರಸರಿಸುವ
ಜ್ಯೋತಿಯ ಪರ್ವತವೇ,

ಹೃದಯಕಮಲವನ್ನು ಸುಂದರವಾಗಿ ಅರಳಿಸುವ
ಸೂರ್ಯನಂತೆ ಬೆಳಗು.

ತೆರೆಯೊಂದರ ಮೇಲಿನ ಸುಂದರ ಚಿತ್ರದಂತೆ,
ಸುಂದರಾಚಲ, ನಿನ್ನ ಮೇಲೆ ಇಡೀ ಈ ಜಗತ್ತು
ರೂಪಿತವಾಗಿ, ಧರಿಸಲ್ಪಟ್ಟು, ತರುವಾಯ ನಿನ್ನಲ್ಲಿ ಲೀನವಾಗುತ್ತದೆ.
ಹೃದಯದಲ್ಲಿ 'ನಾನು' ಎಂಬ ರೂಪದಲ್ಲಿ ನೀನು ಸದಾ ನಾಟ್ಯವಾಡುತ್ತೀಯೆ.
ಅದಕ್ಕೇ ನಿನ್ನನ್ನು ಹೃದಯ ಎನ್ನುತ್ತಾರೆ.

ಈ 'ನಾನು' ಎನ್ನುವುದು ಎಲ್ಲಿಂದ ಹುಟ್ಟುತ್ತದೆ ಎಂಬುದನ್ನು
ಯಾವನು ಅಂತರ್ಮುಖವಾದ ಶುದ್ಧಚಿತ್ತದಿಂದ ಅರಸುತ್ತಾನೆಯೋ
ಅವನು ಆತ್ಮನನ್ನು ಸರಿಯಾಗಿ ಅರಿಯುತ್ತಾನೆ.
ನದಿಯು ಸಮುದ್ರದಲ್ಲಿ ಆಗುವಂತೆ,
ಅರುಣಾಚಲ,
ಅವನು ನಿನ್ನಲ್ಲಿ ಸೇರಿಹೋಗುತ್ತಾನೆ.

ಬಾಹ್ಯ ವಸ್ತುಗಳನ್ನು ತೊರೆದು,
ಮನಸ್ಸು ಮತ್ತು ಪ್ರಾಣವನ್ನು ನಿಗ್ರಹಿಸಿ,
ಹೃದಯಾಂತರಾಳದಲ್ಲಿ ದೃಢವಾಗಿ ನಿನ್ನನ್ನು ಹಿಡಿಯುವ
ಯೋಗಿಯು ನಿನ್ನಲ್ಲಿ ಬೆಳಕು ಕಾಣುತ್ತಾನೆ, ಬೆಳಗುವ ಅರುಣ ದೇವ,
ಮತ್ತು ಅತ್ಯುನ್ನತ ಸ್ಥಾನಗಳಿಗೆ ಏರುತ್ತಾನೆ.

ಹೃದಯವನ್ನು ನಿನಗೆ ಅರ್ಪಿಸಿ,
ಸದಾ ನಿನ್ನನ್ನು ಮಾತ್ರವೇ ಕಾಣುತ್ತ,
ಎಲ್ಲ ವಸ್ತುಗಳನ್ನೂ ನಿನ್ನ ರೂಪಗಳೆಂದು ಕಂಡು,
ಆತ್ಮನಿಗಿಂತ ಅವು ಬೇರೆಯಲ್ಲ ಎಂದು
ಅವನ್ನು ಪ್ರೀತಿಸಿ ಸೇವಿಸುತ್ತಾನೆಯೋ ಅವನು,
ಓ ಅರುಣಾಚಲ,
ಗೆಲ್ಲುತ್ತಾನೆ, ಏಕೆಂದರೆ ಶುದ್ಧ ಆನಂದಸ್ವರೂಪನಾದ
ನಿನ್ನಲ್ಲಿ ಅವನು ಲೀನನಾಗಿರುತ್ತಾನೆ.

ಮೊದಲನೆಯ ಪದ್ಯದಲ್ಲಿ ಸದ್ವಸ್ತುವಾಗಿ ಚೈತನ್ಯದ ಏಕತ್ವ ಮತ್ತು ಪರಸ್ಪರ ಸಂಬಂಧ ಸಾಮರಸ್ಯಗಳನ್ನು ಒಳಗೊಂಡ ಅದರ ಶಕ್ತಿ ಇವೆರಡನ್ನು ಅನುಗ್ರಹದ ಸಮುದ್ರ, ಪರ್ವತ, ಸೂರ್ಯ ಮತ್ತು ಒಮ್ಮೆ ಅರಳಿದ ತರುವಾಯ ಮತ್ತೆಂದಿಗೂ ಮುಚ್ಚಿಕೊಳ್ಳದ ಹೃದಯ ಕಮಲ ಇವುಗಳಿಂದ ಸಂಕೇತಿಸಿದೆ. ಎರಡನೆಯ ಪದ್ಯದಲ್ಲಿ, ಜಗಚ್ಚಿತ್ರವನ್ನು ಮಾಯೆಯು

ಹಾಯಿಸುವ ಪರ್ವತವನ್ನಾಗಿ ಆತ್ಮವನ್ನು ಬಾಹ್ಯೀಕರಿಸಿದೆ ಮತ್ತು ಆನಂದರೂಪವಾದ ಜ್ಞಾನವನ್ನಾಗಿ ಅದನ್ನು ಪುನಃ ಅಂತರೀಕರಿಸಿದೆ. (ಶಿವನು 'ನಾನು' ಎಂಬ ರೂಪದಲ್ಲಿ ಹೃದಯಾಕಾಶದಲ್ಲಿ ನಾಟ್ಯವಾಡುತ್ತಾನೆ ಮತ್ತು ಅರುಣ ರೂಪದಲ್ಲಿ ನಿಶ್ಚಲವಾಗಿ ಗಗನಕ್ಕೇರುತ್ತಾನೆ). ಮೂರನೆಯ ಪದ್ಯವು ವಿಚಾರದ ವಿಧಾನವನ್ನು ವರ್ಣಿಸುತ್ತದೆ. ಸಾಧಕ ಮತ್ತು ಸಿದ್ಧ ಎಂಬುದು ಅಳಿದು ಆತ್ಮವು ಮಾತ್ರವೇ ಉಳಿಯುವ ಸಾಧನೆ ಅದು. ಕೊನೆಯ ಎರಡು ಪದ್ಯಗಳು ಯೋಗ, ಭಕ್ತಿ ಮತ್ತು ಕರ್ಮಗಳನ್ನು ಅನುಸರಿಸುವವನಿಗೆ ಜಯದ ಭರವಸೆ ನೀಡುತ್ತವೆ. ಏಕೆಂದರೆ ಅಹಂಕಾರವು ಒಮ್ಮೆ ಲಯವಾದರೆ ನಾವು ನಮ್ಮ ನಿಜ ಸ್ವರೂಪವಾದ ಆನಂದಸಾಗರದಲ್ಲಿ ಕ್ರೀಡೆಯಾಡುತ್ತೇವೆ.

ಪುರಾಣಕಲ್ಪನೆಯೊಂದನ್ನು ಉಳಿಸಿಕೊಂಡು ಅದರ ಅರ್ಥವನ್ನು ವಿವರಿಸುವ ಮೂಲಕ ಅದಕ್ಕೆ ಮತ್ತೆ ಜೀವ ತುಂಬುವ ವಿಧಾನ ಈ ಮುಂದಿನ ಎರಡು ಪದ್ಯಗಳಲ್ಲಿ ತನ್ನ ಪಾರಮ್ಯವನ್ನು ತಲುಪಿದೆ. ಅವುಗಳಲ್ಲಿ ಮೊದಲನೆಯದನ್ನು ರಚಿಸಿದವರು ಮುರುಗನಾರ್. ಎರಡನೆಯದು ಮಹರ್ಷಿಗಳದು.

**ಪರ್ವತ**

ನಾನು ಎಂಬ ಮನಸ್ಸಿನ ಸಂಘರ್ಷಗಳ
ಮತ್ತು ತುಮುಲಗಳ ನಡುವೆ ಇರುವ ಮೂಲಶಾಂತಿ
ಬೆಟ್ಟದ ಹಿಂದಿರುವ ಸತ್ಯ ಅದೇ.
ಅದರ ಆಳ ಎತ್ತರಗಳನ್ನು ಬ್ರಹ್ಮ ಮತ್ತು ವಿಷ್ಣು
ಅರಸಿದರು, ಆದರೆ ಕಾಣಲಾಗಲಿಲ್ಲ.

**ದೀಪದರ್ಶನ**

'ದೇಹವೇ ನಾನು' ಎಂಬ ಭಾವನೆಯನ್ನು ತೊರೆದು,
ಮನಸ್ಸನ್ನು ಮನಸ್ಸಿನಲ್ಲಿ ನಿಲ್ಲಿಸಿ, ಅಂತರ್ಮುಖವಾಗಿಸಿ,
ಸದ್ವಸ್ತುವಿನ ಕೇವಲ ನಿಜಾನಂದವನ್ನು ಅರಿಯುವುದು
ಭೂಮಿಯ ಮಧ್ಯದಲ್ಲಿರುವ ಪರ್ವತಾಗ್ರದ ಮೇಲೆ ಹೊತ್ತಿಸಿದ
ದೀಪದ ದರ್ಶನ ಇದೇ.

ಪರ್ವತವು ಪಾರಮಾರ್ಥಿಕ ಸದ್ವಸ್ತುವಿನ ಅನುಭವವೇದ್ಯವಾದ ಅಖಂಡ ಮೂರ್ತರೂಪ. ದೀಪವಾದರೋ ಅಶರೀರ ಸದ್ವಸ್ತುವಿನ ಆನಂದಾನುಭವ.

ಪುರಾಣಕಲ್ಪನೆಯೊಂದರ ಗೂಢಾರ್ಥವನ್ನು ಪ್ರಕಟಿಸಿದರೆ ಅನುಭವವನ್ನು ಸ್ಮರಣೆಗೆ ತಂದು ಅದನ್ನು ಮತ್ತೆ ಸೃಷ್ಟಿಸುವ ಅದರ ಶಕ್ತಿಯನ್ನು ಕುಂದಿಸುವುದಿಲ್ಲ, ಅದರ ಬದಲು ವಾಸ್ತವದಲ್ಲಿ ಆ ಶಕ್ತಿಯನ್ನು ಹೆಚ್ಚಿಸುತ್ತದೆ ಎಂಬುದನ್ನು ನಾವು ಈ ಪದ್ಯಗಳಲ್ಲಿ ನೋಡುತ್ತೇವೆ. ನಾಮ, ರೂಪ, ದ್ರವ್ಯ ಮತ್ತು ಕ್ರಿಯೆ ಇವುಗಳನ್ನು ಬೇರ್ಪಡಿಸಬಹುದಾದರೂ, ಅವು ಪರಸ್ಪರ ನಿಕಟವಾಗಿ ಸಂಬಂಧ ಹೊಂದಿವೆ. ಸಂಕೇತವೊಂದನ್ನು ಗಣಿತದಲ್ಲಿ ಬಳಸುವಷ್ಟೇ ಪರಿಣಾಮಕಾರಿಯಾಗಿ ಕಾವ್ಯದಲ್ಲೂ ಬಳಸಬಹುದು. ಸಂಕೇತದ ಅರ್ಥವನ್ನು ವಿವರಿಸುವುದು ಪುರಾಣಕಲ್ಪನೆಯೊಂದರ ಪೂರ್ವಸ್ಥಿತಿಗೆ ತರಲಾಗದಂಥ ವಿನಾಶವಾಗಬೇಕಾಗಿಲ್ಲ. ಮನಸ್ಸು ಮತ್ತು ಸ್ಮೃತಿ ಎರಡರ ಕೆಲಸ ಮಾಡುತ್ತಿರುವ ಕವಿಯು ಭತ್ತವನ್ನು

ಇಡಿಯಾಗಿ, ಬಿತ್ತಲು ಅನುಕೂಲವಾಗಿ ಇರುವಂತೆ ಇಡುವುದನ್ನು ಮತ್ತು ಅದೇ ಸಮಯದಲ್ಲಿ ಸದ್ಯದ ಉಪಯೋಗಕ್ಕಾಗಿ ಅದರ ಹೊಟ್ಟು ತೆಗೆಯುವುದನ್ನೂ ಅರಿತಿರುತ್ತಾನೆ. ನದಿಯ ದಂಡೆಯಲ್ಲಿ ಬೆಳೆದಿರುವ ಹಳದಿಹೂವಿನಲ್ಲಿ ಕವಿಚೇತನ ಹಳದಿಹೂವನ್ನೂ ಅದಕ್ಕಿಂತ ಹೆಚ್ಚಿನ ಯಾವುದೋ ಒಂದನ್ನೂ ಒಟ್ಟಿಗೆ ಹಾಗೂ ಬೇರೆಬೇರೆಯಾಗಿ ಗ್ರಹಿಸಬಲ್ಲದು. ಸತ್ಯ ಮತ್ತು ಕಲ್ಪನೆ ಪರಸ್ಪರ ಒಂದನ್ನೊಂದು ಪುಷ್ಟಿಗೊಳಿಸಬಹುದು. ಭೂಪರಿಸರ, ಪುರಾಣಕತೆ, ಕರ್ಮಾಚರಣೆ ಮತ್ತು ಅಂತರಾರ್ಥ ಇವುಗಳ ಪರಂಪರಾನುಗತವಾದ ಮನೋವೈಜ್ಞಾನಿಕ-ಸಾಮಾಜಿಕ ಪರಸ್ಪರ ಪ್ರಭಾವಗಳನ್ನು ನಿಷೇಧಿಸುವುದು ಸಂಕೇತತೆಯನ್ನು ನಾಶಮಾಡಿ ಸೈತಾನತೆಗೆ ಪಟ್ಟ ಕಟ್ಟಿದಂತೆ.

# ಅಧ್ಯಾಯ 10

# ಸಂಕಲಿತ ಕೃತಿಗಳು: ತಾತ್ವಿಕ ಕವನಗಳು

## ಉಪದೇಶಸಾರಂ

ಮುರುಗನಾರ್ (1890-1973) ಒಬ್ಬ ತಮಿಳು ಪಂಡಿತರು ಮತ್ತು ಕವಿ. ಅವರ ಮೊದಲನೆ ಗ್ರಂಥ *ಸ್ವತಂತ್ರ ಗೀತಂ* ರಾಜಕೀಯ ಸ್ವಾತಂತ್ರ್ಯ ಮತ್ತು ಸಾಮಾಜಿಕ ಸುಧಾರಣೆಗಾಗಿ ನಡೆದ ಗಾಂಧೀಜಿಯವರ ಚಳುವಳಿಯಿಂದ ಸ್ಫೂರ್ತಿ ಪಡೆದ ದೇಶಪ್ರೇಮದ ಕವನಗಳನ್ನು ಒಳಗೊಂಡಿತ್ತು. ಆದರೆ 1923ರಲ್ಲಿ ಅವರು ಮಹರ್ಷಿಗಳ ಬಳಿಗೆ ಬಂದು ಅವರ ಮೋಡಿಗೆ ಬಿದ್ದಾಗ, ಅವರ ದೃಷ್ಟಿಕೋನದಲ್ಲಿ ಮತ್ತು ಮಾತನಾಡುವ ರೀತಿಯಲ್ಲಿ ಸಂಪೂರ್ಣ ಬದಲಾವಣೆ ಆಯಿತು. ಅವರು ಗುರುವಿನ ಪಡಿನೆಳಲು, ಅವರ ಅನುಗ್ರಹದ ಸ್ತುತಿಕಾರರು ಮತ್ತು ಅವರ ಉಪದೇಶಗಳ ನಿರೂಪಕರು ಆದರು. ಅವರು ಅಸಂಖ್ಯಾತ ಕವನಗಳನ್ನು ರಚಿಸಿದರು. ಅವು ಗುಣದಲ್ಲಿ ಶ್ರೇಷ್ಠವೂ, ಭಾವಬಂಧಗಳಲ್ಲಿ ಬಹಳ ಬಗೆಗಳವೂ ಆಗಿದ್ದವು. ಅವೆಲ್ಲವನ್ನೂ ಅವರು ಮಹರ್ಷಿಯನ್ನು ಶಿವ, ಸ್ಕಂದ, ತಾಯಿ, ತಂದೆ, ಪ್ರೇಮಿ, ರಾಜ, ಭಿಕ್ಷುಕ ಮತ್ತು ದ್ರೋಹಿ ಇತ್ಯಾದಿ ಪಾತ್ರಗಳಲ್ಲಿ ರೂಪಿಸಿ ಅವರನ್ನು ಪ್ರಶಂಸಿಸಲು ಬರೆದರು. ಈ ಕವನಗಳೇ *ರಮಣ ಸನ್ನಿಧಿ ಮುರೈ* (ರಮಣ ಸನ್ನಿಧಿ ಸ್ತೋತ್ರ). ಜೊತೆಗೆ ***ಗುರು ವಾಚಕ ಕೋವೈ*** (ಗುರುವಚನಮಾಲೆ) ಎಂಬ ಒಂದು ವ್ಯಾಪಕವಾದ ಸಂಗ್ರಹವಾಗಿ ಕಲೆಹಾಕಿದರು. ಅದರಲ್ಲಿ 1280 ಪದ್ಯಗಳಿವೆ. ಅವುಗಳಲ್ಲಿ ಪ್ರತಿಯೊಂದು ಮಹರ್ಷಿಯ ತುಟಿಗಳಿಂದ ಉದುರಿದ ರತ್ನವೊಂದನ್ನು ಎದ್ದುಕಾಣುವಂತೆ ಕೂರಿಸಿ ಮಂಟಪದಲ್ಲಿಡಲು ಪ್ರೀತಿ ಮತ್ತು ಎಚ್ಚರದಿಂದ ಮಾಡಿದ ಒಂದು ಪುಟ್ಟ ಚಿನ್ನದ ಭರಣಿಯಂತಿದೆ. ಇವುಗಳ ಜೊತೆಗೆ ಅವರು ರಮಣ-ಅನುಭೂತಿಯ ಮೇಲೆ ನೂರಾರು ಪದ್ಯಗಳನ್ನು ರಚಿಸಿದರು. ಸಮಾಧಿಯ ಸೀಮೆಗಳಲ್ಲಿ ಅವರ ಪ್ರವಾಸಗಳ ಕಥನ ಇವು. ವಿಪುಲವಾದ ಮತ್ತು ಅಮೂಲ್ಯವಾದ ತಮ್ಮದೇ ಸ್ವಂತ ಕೃತಿಪ್ರವಾಹಕ್ಕಾಗಿ ಮಾತ್ರವೇ ಅಲ್ಲದೆ, ಇಂದು ಮಹರ್ಷಿಗಳ ಸಮಗ್ರ ಕೃತಿಗಳಲ್ಲಿ ಕಾಣಿಸಿಕೊಳ್ಳುವ ಕೆಲವು ಶ್ರೇಷ್ಠ ತಾತ್ತ್ವಿಕ ಕವನಗಳನ್ನು ಮಹರ್ಷಿಗಳಿಂದ ಹೊರಸೆಳೆಯುವಲ್ಲಿ ಅವರು ಗಳಿಸಿದ ಯಶಸ್ಸಿಗಾಗಿ ಮುರುಗನಾರ್‌ಗೆ ಪ್ರಶಂಸೆ ಮತ್ತು ಕೃತಜ್ಞತೆ ಸಲ್ಲಬೇಕು.

ಈ ಕವನಗಳಲ್ಲಿ ಮೊದಲನೆಯದು *ಉಪದೇಶಸಾರಂ.* ಇದು ಅದ್ವೈತ ವೇದಾಂತದ ಜೀವಾಳ ಮತ್ತು ಮಹರ್ಷಿಗಳ ಪ್ರಾಯೋಗಿಕ ಮಾರ್ಗದರ್ಶನದ ನಿಷ್ಕೃಷ್ಟ ನಿರೂಪಣೆ. ಮಹರ್ಷಿಗಳು ''ಯೋಜನೆಯೊಂದನ್ನು ಹಾಕಿಕೊಂಡು, ಒಂದು ನಿಷ್ಕೃಷ್ಟ ಉದ್ದೇಶದಿಂದ, ಕುಳಿತು ಒಂದೇ ಪಟ್ಟಿಗೆ'' ಬರೆದ ಪದ್ಯ ಇದೊಂದೇ. ಯಜ್ಞಯಾಗಾದಿಗಳನ್ನು ಮಾಡಿ, ಅಲೌಕಿಕ ಸಿದ್ಧಿಗಳನ್ನು ಪಡೆದು, ಅದೇ ರೀತಿಯಲ್ಲಿ ಮೋಕ್ಷವನ್ನು ಗಳಿಸಲು ಆಶಿಸಿದ ಋಷಿಗಳ

ತಂಡವೊಂದರ ಬಗ್ಗೆ ಮುರುಗನಾರ್ ಒಂದು ದೀರ್ಘವಾದ ಕಥನಕವನವನ್ನು ರಚಿಸಿದರು.

ಆಗ ಶಿವನು ಅವರೆದುರಿಗೆ ಒಬ್ಬ ತಪಸ್ವಿಯಾಗಿ ಕಾಣಿಸಿಕೊಂಡ. ಅವನೊಡನೆ ವಿಷ್ಣು ಒಬ್ಬ ಸುಂದರ ಹೆಂಗಸಾಗಿ ಬಂದ. ಅವಳ ರೂಪದಿಂದ ಮೋಹಿತರಾಗಿ ಋಷಿಗಳು ತಮ್ಮ ಕರ್ಮಗಳನ್ನು ತೊರೆದರು. ಋಷಿ ಪತ್ನಿಯರು ಶಿವನನ್ನು ನೆಟ್ಟದೃಷ್ಟಿಯಿಂದ ನೋಡುತ್ತ ತಮ್ಮ ಕೆಲಸಕಾರ್ಯಗಳನ್ನು ಮರೆತರು. ಋಷಿಗಳು ತಮ್ಮ ಮಂತ್ರಶಕ್ತಿಯಿಂದ ಒಂದು ಆನೆಯನ್ನೂ ಒಂದು ಹುಲಿಯನ್ನು ಸೃಷ್ಟಿಸಿ ಅವನ್ನು ಅತಿಕ್ರಮ ಪ್ರವೇಶ ಮಾಡಿದ ಆಗಂತುಕನ ಮೇಲೆ ಬಿಟ್ಟರು. ಶಿವನು ಅವೆರಡನ್ನೂ ಕೊಂದು ಅವುಗಳ ಚರ್ಮವನ್ನು ವಸ್ತ್ರಗಳನ್ನಾಗಿ ಧರಿಸಿದ. ಆಗ ಋಷಿಗಳು ತಮಗಿಂತ ಮೇಲಿನ ಶಕ್ತಿಯೊಂದನ್ನು ಕಂಡುಕೊಂಡು, ಆ ಗುರುವಿನಿಂದ ಉಪದೇಶವನ್ನು ಅಪೇಕ್ಷಿಸಿದರು.

ಕಥೆಯನ್ನು ಈ ನೆಲೆಗೆ ತಂದು, ಶಿವನು ಋಷಿಗಳಿಗೆ ಪರಜ್ಞಾನವನ್ನು ಬೋಧಿಸುವ ತುದಿಘಟ್ಟವನ್ನು ತಲುಪಿದಾಗ, ಈ ಉಪದೇಶವನ್ನು ತಮ್ಮ ಮಾತುಗಳಲ್ಲೇ ತಿಳಿಸುವಂತೆ ಮಹರ್ಷಿಗಳನ್ನು ಮುರುಗನಾರ್ ಕೇಳಿದರು.

ಉಂದೀಪಾರಾ ಎಂಬ ತಮಿಳು ಪಲ್ಲವಿ ಅನೇಕ ಅರ್ಥಗಳನ್ನು ಸೂಚಿಸುತ್ತದೆ. ಹೊಕ್ಕುಳಾಟದ ಪರಿಭಾಷೆಯಲ್ಲಿ ಅದನ್ನು ಹೀಗೇ ವ್ಯಾಖ್ಯಾನ ಮಾಡಬಹುದು:

ಆಡು, ಮಗು, ಬೆಳೆ;

ಪ್ರಯತ್ನ ಮಾಡು, ಹಕ್ಕಿ, ಹಾರು;

ಅರಿ, ಆನಂದವಾಗು.

ಗ್ರಂಥಗಳನ್ನು ರಚಿಸಲು ಅಥವಾ ಉಪದೇಶಭಾಷಣಗಳನ್ನು ಮಾಡಲು ಮಹರ್ಷಿಗಳನ್ನು ಒಪ್ಪಿಸಲಾಗುತ್ತಿರಲಿಲ್ಲ. ಆದರೆ ಪುರುಷ ಮತ್ತು ಪ್ರಕೃತಿಗಳ, ಚೈತನ್ಯ ಮತ್ತು ಜಡಗಳ, ಜ್ಞಾನ ಮತ್ತು ಕರ್ಮಗಳ ತಾದಾತ್ಮ್ಯದ ಅನುಭವಕ್ಕೆ ಒಯ್ಯುವ ಸಿದ್ಧಾಂತ ಮತ್ತು ಸಾಧನೆಗಳನ್ನು ಅವರ ಮಾತುಗಳಲ್ಲೇ, ಸ್ಪಷ್ಟವಾಗಿ ಮತ್ತು ಅಡಕವಾಗಿ, ನಿರೂಪಿಸುವ ಅತ್ಯುತ್ತಮ ಅವಕಾಶವನ್ನು ಈ ನಾಟಕೀಯ ಸಂದರ್ಭ ಒದಗಿಸಿತು.

ಕವನದ ಪ್ರಥಮಾರ್ಥ ಸಂಪ್ರದಾಯದ ಮೂಲದ್ರವ್ಯ, ಮಾತೃಕೆ. ಅದರಿಂದ ಅದರ ದ್ವಿತೀಯಾರ್ಥ, ಮಹರ್ಷಿಗಳ ಸ್ವಂತ ಉಪದೇಶ, ಸಹಜವಾಗಿ ಮತ್ತು ಜೀವಂತ ಪೂರ್ಣವಸ್ತುವಾಗಿ ಹೊರಹೊಮ್ಮುತ್ತದೆ. ಕರ್ಮ, ಭಕ್ತಿ ಮತ್ತು ಯೋಗದ ಮಾರ್ಗಗಳು ಜ್ಞಾನಕ್ಕೆ ಪೂರ್ವಭಾವಿಯಾದವು ಅಥವಾ ಉಪಕಾರಕವಾದವು. ಆದರೆ ಜ್ಞಾನ ಅವೆಲ್ಲದರಲ್ಲೂ ಗರ್ಭಿತವಾಗಿದೆ ಮತ್ತು ತನ್ನದೇ ಸ್ವತಂತ್ರವಾದ ಮೌಲ್ಯವನ್ನೂ ಹೊಂದಿದೆ.

ಪುರಾಣದಲ್ಲಿ ಮೋಹಿನಿಯಾಗಿ ವಿಷ್ಣುವು ಮರುಳುಗೊಳಿಸುವ ಕೇವಲ ತನ್ನ ಚೆಲುವಿನಿಂದ ಋಷಿಗಳ ಅಹಂಕಾರವನ್ನು ಮುರಿಯುತ್ತಾನೆ. ಆದರೆ ಆದಿಗುರುವಾದ, ಶುದ್ಧ ಚೈತನ್ಯದ ಪ್ರತ್ಯಕ್ಷ ಮೂರ್ತಿಯಾದ, ಯಜ್ಞದ ಅಧಿಪತಿಯಾದ ಮತ್ತು ಮೋಕ್ಷದಾಯಕನಾದ ಶಿವನು 'ಚೈತನ್ಯವು ಮಾತ್ರವೇ ಏಕಮೇವ ಸದ್ವಸ್ತು' ಎಂಬ ಸತ್ಯದ ಯಥಾರ್ಥ ಪ್ರತಿಪಾದಕನಾಗಿದ್ದಾನೆ. ಆದರೂ ಈ ಕವನವನ್ನು ಅದರ ಉಗಮದ ರೀತಿಯಿಂದ ಪ್ರತ್ಯೇಕಿಸಿ ನೋಡಬಹುದು. ಮಹರ್ಷಿಗಳ ವೈಯುಕ್ತಿಕ ಅನುಭವದ ಆಧಾರದ ಮೇಲೆ ರಚಿತವಾದ ಅವರ ಸ್ವಂತ ಉಪದೇಶಗಳ ಒಂದು ಸಂಕ್ಷಿಪ್ತ ಪ್ರತಿಪಾದನೆ ಎಂದಷ್ಟೇ ಅದನ್ನು

ಪರಿಗಣಿಸಬಹುದು. ಪ್ರಾಯಶಃ ಆಧುನಿಕ ವಿದ್ಯಾರ್ಥಿಗಳಿಗೆ ಆ ಕವನವನ್ನು ಅದರ ಸಂದರ್ಭದಿಂದ ಬೇರ್ಪಡಿಸಿ ಓದುವಂತೆ ಸೂಚಿಸಬಹುದು, ಏಕೆಂದರೆ ಅದರ ಪೌರಾಣಿಕ ಸಂಬಂಧಗಳ ನಷ್ಟಕ್ಕಿಂತ ಅದರ ಐತಿಹಾಸಿಕ ಪ್ರಾಮಾಣ್ಯದ ಲಾಭ ಹೆಚ್ಚು ತೂಗುವಂಥದು. ಸತ್ತ್ವ ಮತ್ತು ನಿಶ್ಚಯತೆ, ವಿಶದತೆ ಮತ್ತು ನೇರ ನಿರೂಪಣೆ, ಅದರ ತೀವ್ರ ಅಗತ್ಯದ ಭಾವ ಮತ್ತು ಎಲ್ಲಕ್ಕೂ ಮಿಗಿಲಾಗಿ, ಮಹರ್ಷಿಗಳ ಉಪದೇಶದ ಪ್ರಾಯೋಗಿಕ ಸ್ವರೂಪ ಇವು ಒಟ್ಟುಗೂಡಿ ಈ ಕೃತಿಯನ್ನು ಅದರ ಸ್ವಂತ ಗುಣದಿಂದಲೇ ಒಂದು ಪುಟ್ಟ ಉತ್ಕೃಷ್ಟ ಕೃತಿಯಾಗಿ ಮಾಡಿವೆ. ದಕ್ಷ ವಿಮರ್ಶಕರು ಅದನ್ನು ಒಂದು 'ಸಮಕಾಲೀನ ಉಪನಿಷತ್ತು' ಎಂದು ಹೊಗಳಿದ್ದಾರೆ. ಈಗಾಗಲೇ ಈ ಮೂವತ್ತು ಪದ್ಯಗಳು ವೇದಗಳ ಸ್ಥಾನದಂಥ ಒಂದು ಬಗೆಯ ಸ್ಥಾನವನ್ನು ಗಳಿಸಿವೆ. ಮಹರ್ಷಿಯೇ ಸ್ವತಃ ರಚಿಸಿದ ಅವುಗಳ ತಮಿಳು, ಸಂಸ್ಕೃತ, ತೆಲುಗು ಮತ್ತು ಮಲೆಯಾಳಂ ಅನುವಾದಗಳು ಸಿಗುತ್ತವೆ. ಆಶ್ರಮದಲ್ಲಿ ಮತ್ತು ಇತರೆಡೆಗಳಲ್ಲಿ ವೇದ ಪಾರಾಯಣದ ಕೊನೆಯಲ್ಲಿ ಅವನ್ನು ನಿಯತವಾಗಿ ಹಾಡಲಾಗುತ್ತದೆ. ಕಾವ್ಯಕಂಠ ಗಣಪತಿ ಶಾಸ್ತ್ರಿ, ಶ್ರೀ ಬಿ.ವಿ. ನರಸಿಂಹಸ್ವಾಮಿ, ನ್ಯಾಯಮೂರ್ತಿ ಶ್ರೀ ಅನಂತನಾರಾಯಣನ್ ಮತ್ತು ಇತರರು ಅದರ ಮೇಲೆ ಸ್ವತಂತ್ರವಾಗಿ, ವಿಭಿನ್ನವಾಗಿ ವ್ಯಾಖ್ಯಾನ ಮಾಡಿದ್ದಾರೆ. ಅದೇ ಕಾಲಕ್ಕೆ, ಬಹಳ ದೀರ್ಘವಾದ ಅಧ್ಯಯನ ಮತ್ತು ಪೂರ್ವಾಭ್ಯಾಸಗಳ ತರುವಾಯ ಆಯ್ದ ಕೆಲವರಿಗೆ ಮಾತ್ರವೇ ಒಂದು ಕಾಲದಲ್ಲಿ ನಿಗದಿ ಪಡಿಸಿದ್ದ ಈ ಪರಮೋಪದೇಶವನ್ನು ಈಗ ಉದ್ದೇಶ ಪೂರ್ವಕವಾಗಿ ಪಂಡಿತಪಾಮರರಿಗೆಲ್ಲರಿಗೂ ಪ್ರಕಟಿಸಿ ಬೋಧಿಸಿರುವುದು ಗಮನಾರ್ಹವಾದ ಸಂಗತಿ. ಆಂತರಿಕ ಅನ್ವೇಷಣೆಯಲ್ಲಿ ಸಾಂಪ್ರದಾಯಿಕ ಕತೆಯಿಂದ ಪ್ರಾಯೋಗಿಕ ಅಭ್ಯಾಸಕ್ಕೆ ಆಗುವ ಬದಲಾವಣೆಯನ್ನು 17ನೆ ಪದ್ಯದಲ್ಲಿನ, ''ಈ ನೇರವಾದ ದಾರಿ ಎಲ್ಲರಿಗೂ ತೆರೆದಿದೆ'' ಎಂಬ ಹೊಳೆಯುವ ಹಸುರು ಸನ್ನೆದೀಪ ಸೂಚಿಸುತ್ತದೆ.

ಸ್ವಾರ್ಥದೃಷ್ಟಿಯ ಕರ್ಮವು ಇನ್ನೂ ಹೆಚ್ಚಿನ ಕರ್ಮದ ಹಂಬಲವನ್ನು ಹುಟ್ಟಿಸುತ್ತದೆ ಮತ್ತು ಕರ್ಮಸಾಗರದೊಳಗೆ ಇನ್ನೂ ಆಳವಾಗಿ ಎಳೆದುಕೊಂಡು ಹೋಗುತ್ತದೆ. ಆದರೆ ಭಗವಂತನಿಗೆ ಅರ್ಪಿಸಿದ ನಿಷ್ಕಾಮಕರ್ಮವು (ಅಂದರೆ, ಜಗತ್ತಿನ ಒಳಿತಿಗಾಗಿ ಮಾಡಿದ್ದು) ಯಾರಿಗೂ ಬಂಧನವಾಗುವುದಿಲ್ಲ. ಅದಕ್ಕೆ ಬದಲಾಗಿ ಅದು ಮನಸ್ಸನ್ನು ಶುದ್ಧಿಗೊಳಿಸಿ, ನಮ್ಮ ಜ್ಞಾನವನ್ನು ಉತ್ತಮಗೊಳಿಸಿ ಮತ್ತು ವಿಶಾಲಗೊಳಿಸಿ ಮೋಕ್ಷಕ್ಕೆ ಹಾದಿಯನ್ನು ತೋರಿಸುತ್ತದೆ.

ಕರ್ಮಾಚರಣೆ, ವಿಗ್ರಹಕ್ಕೆ ವಿಧಿವತ್ತಾದ ಪೂಜೆ, ಪಾಮರವಾದುದ್ದು. ಆದ್ದರಿಂದ ಶಾಬ್ದಿಕವಾದ ಸ್ತೋತ್ರ ಮತ್ತು ಮಾನಸಿಕ ಧ್ಯಾನಕ್ಕಿಂತ ಕೆಳಮಟ್ಟದ್ದು. ಅಷ್ಟೇ ಅಲ್ಲ. ಸೃಷ್ಟಿಯೆಲ್ಲದರ ಬಗ್ಗೆ ಭಕ್ತಿ ಗೌರವ ಮತ್ತು ಜೀವಂತ ವಸ್ತುಗಳ ಸೇವೆಯೇ ಉತ್ಕೃಷ್ಟವಾದ ಪೂಜೆ, ಏಕೆಂದರೆ ಇವು ಭಗವಂತನ ಪ್ರತ್ಯಕ್ಷ, ಮೂರ್ತ, ಜೀವಂತ ಅಭಿವ್ಯಕ್ತಿಗಳು. ಇಂಥ ಸೇವೆಯೇ ಪೂರ್ಣಪೂಜೆ ಎಂದು ಕಾವ್ಯಕಂಠರು ಸಾಧಿಸುತ್ತಾರೆ. ಮುರುಗನಾರ್ ಸಹ ಶಿವಪೂಜೆಯನ್ನು ಹೀಗೆ ವರ್ಣಿಸುತ್ತಾರೆ:

ಪಂಚಭೂತಗಳಲ್ಲಿ,
ಸೂರ್ಯ, ಚಂದ್ರ ಮತ್ತು ಪ್ರತಿಯೊಂದು ಜೀವಿಯಲ್ಲಿ

ಅವನ ದಿವ್ಯಸಾನ್ನಿಧ್ಯವನ್ನು ಕಾಣುತ್ತ,
ಇವುಗಳಿಗೆ ತೋರುವ ಉಚಿತ ಪ್ರತಿಕ್ರಿಯೆ
ಮತ್ತು ಎಸಗುವ ಸಕಾಲಿಕ ಸೇವೆಗಳೇ
ಉತ್ಕೃಷ್ಟವಾದ, ಸರ್ವದಾ ಹೊಸದಾದ
ಶಿವಪೂಜೆ.

ಪ್ರಕೃತಿಯ ಬಗ್ಗೆ ಇಂಥ ಭಕ್ತಿ, ಗೌರವ ಮತ್ತು ಜೀವಂತವಸ್ತುಗಳ ಇಂಥ ಪ್ರೀತಿಪೂರ್ವಕ ಸೇವೆ ಇವುಗಳಲ್ಲಿ ಧ್ಯಾನ ಮತ್ತು ಪೂಜೆಗಳು ಜ್ಞಾನಕರ್ಮಗಳ ಏಕಪ್ರವಾಹದಲ್ಲಿ ಲೀನವಾಗುತ್ತದೆ. ಬೇರೆಯದು ಎನ್ನುವ ಎಲ್ಲ ಅರಿವೂ, ಅಂತೆಯೇ ವೈದಿಕ ಮತ್ತು ಲೌಕಿಕ ಎನ್ನುವುದರ ನಡುವಿನ ಅಡ್ಡಗಟ್ಟೆಯೂ ಅದೃಶ್ಯವಾಗುತ್ತವೆ. ಆದರೆ ಆರಾಧನೆಯ ವಸ್ತುವು ಕೃತಕವಾಗಿರದೆ ಸಹಜವಾದುದು, ಕಲ್ಪನೆಯದಾಗಿರದೆ ವಸ್ತು ಭೂತವಾದುದು ಮತ್ತು ಮೂರ್ತವಾದುದು ಆಗಿದ್ದರೂ, ಸೇವೆ ಅಥವಾ ಪೂಜೆ ವಿಚ್ಛಿನ್ನವಾಗಿಯೇ ನಡೆಯ-ಬೇಕಾಗುತ್ತದೆ. ಮೌನಧ್ಯಾನವಾದರೋ ನಿರಂತರವಾಗಿ, ಆತ್ಮೀಯವಾಗಿ, ಶುದ್ಧವಾಗಿ ಇರಬೇಕಾಗುತ್ತದೆ ಮತ್ತು ಹಾಗೆ ಇರುತ್ತದೆ. ಆಗ ಅದು ಆತ್ಮದೊಡನೆ ತಾದಾತ್ಮ್ಯವನ್ನು, ಸೋಹಂ, ಅದೇ ನಾನು, ಎಂಬ ಸಕ್ರಿಯ ಅಭ್ಯಾಸವನ್ನು ಬಲಪಡಿಸುತ್ತದೆ. ತೀವ್ರ ಭಕ್ತಿಯು ಈ ರೀತಿ ಸಾಧನೆಯ ಸಾಧನವಾದ ಕರ್ಮದಿಂದ ಮತ್ತು ಗುರಿಯಾದ ಜ್ಞಾನದಿಂದ ಅಭಿನ್ನವಾಗಿರುತ್ತದೆ. ಸದ್ವಸ್ತುವಿನೊಳಗೆ ನೆಲೆಸಿರುವುದೊಂದೇ ಸತ್ಯ. ಅದು ಕರ್ಮ, ಭಕ್ತಿ ಮತ್ತು ಯೋಗದ ಗುರಿ, ಆದರೆ ಜ್ಞಾನದ ಸಾರಸರ್ವಸ್ವ.

ಉಸಿರಾಟವನ್ನು ಎಚ್ಚರದಿಂದ ಗಮನಿಸುವುದು ಉಸಿರಾಟವನ್ನು ಕ್ರಮಗೊಳಿ-ಸುವುದಲ್ಲದೆ ಮನಸ್ಸನ್ನು ಬಾಹ್ಯ ವಸ್ತುಗಳಿಂದ ಸೆಳೆದು ಅದನ್ನು ನಿಯಂತ್ರಿಸಲೂ ಸಹಾಯ ಮಾಡುತ್ತದೆ. ವಾಸ್ತವದಲ್ಲಿ (ಬದುಕಿನ ಕ್ರಿಯೆಯಾದ) ಉಸಿರಾಟ ಮತ್ತು (ಬದುಕಿನ ಅರಿವಾದ) ಮನಸ್ಸು ಎರಡರ ಮೂಲವೂ ಒಂದೇ ಮತ್ತು ಎರಡೂ ಪರಸ್ಪರ ಸಂಬಂಧಿಸಿವೆ. ಪ್ರಾಣಾಯಾಮದಿಂದ ನಿಯಂತ್ರಿತವಾದ ಅಹಂಕಾರಾತ್ಮಕ ಮನಸ್ಸನ್ನು ಏಕಚಿಂತನದಿಂದ, ಐಕ್ಯಾನುಸಂಧಾನದಿಂದ ಆತ್ಯಂತಿಕವಾಗಿ ನಾಶಪಡಿಸಬಹುದು. ಅಂತರ್ಮುಖವಾದ, ಜಾಗ್ರತಗೊಳಿಸಿದ, ತನ್ನ ರೂಪಸ್ವಭಾವಗಳನ್ನು ಅನುಸಂಧಾನ ಮಾಡುವ ಮನಸ್ಸು ನಿರಂತರವಾದ ಪ್ರತ್ಯೇಕವಾದ ಮನಸ್ಸು ಎಂಬ ಪದಾರ್ಥ ಯಾವುದೂ ಇಲ್ಲ, ನಮ್ಮ ಮನಸ್ಸು ಕೇವಲ ಭಾವನೆಗಳಿಂದ ರಚಿತವಾದುದು, ಭೇದಭಾವನೆಯ ಮೂಲ ಹಾಗೂ ಅದರ ನಿಷ್ಠುರ ಅವಲಂಬನವಾದ 'ನಾನು' ಎಂಬ ಭಾವನೆಯಿಂದ ಇತರ ಭಾವನೆಗಳು ಹುಟ್ಟುತ್ತವೆ ಎಂಬುದನ್ನು ಕಂಡುಕೊಳ್ಳುತ್ತದೆ.

'ನಾನು' ಎಂಬ ಭಾವನೆಯ ಮೂಲವನ್ನು ಅರಸುತ್ತಿರುವ ಮನಸ್ಸಿಗೆ ನಮ್ಮ ನಿಜಸ್ವರೂಪವಾದ ಶುದ್ಧ ಅಖಂಡ ಚೈತನ್ಯವು ಇದಿರಾಗಿ ಅದನ್ನು ಪೂರ್ತಿ ಮುಳುಗಿಸಿ ಬಿಡುತ್ತದೆ. ಗಾಢ ನಿದ್ರೆಯಲ್ಲಿ 'ನಾನು' ಎಂಬ ಭಾವನೆ ಇಲ್ಲದೆ ಹೋದರೂ ಈ ಚೈತನ್ಯವು ಉಳಿದಿರುವುದರಿಂದ 'ನಾನು' ಎಂಬ ಪದದ ಮುಖ್ಯಾರ್ಥ ಈ ಆನಂದ ಇವೆಲ್ಲವೂ ಜಡ, ಮಿಥ್ಯೆ. ಆದರೆ ನಾವು ಪೂರ್ಣಚೈತನ್ಯರು. ಆದರೂ ನಾವು ಚೈತನ್ಯದೊಡನೆ ನಮ್ಮ ನಿಜಸ್ವರೂಪದ ತಾದಾತ್ಮ್ಯವನ್ನು ಗ್ರಹಿಸಿದಾಗ ನಾವು ಅಜ್ಞಾನಕ್ಕೆ ಸದೃಶವಾದ ಜ್ಞಾನವನ್ನು

ಮೀರಿಹೋಗುತ್ತೇವೆ. ಅನಂತತೆಯ ಆನಂದವನ್ನು ಸವಿಯುತ್ತೇವೆ. ಈ ಸ್ಥಿತಿಯಲ್ಲಿ ಬಂಧದ ಅಥವಾ ಮೋಕ್ಷದ ಯಾವ ಭಾವನೆಯೂ ಇರುವುದಿಲ್ಲ. ನಮ್ಮ ಬದುಕು ಸೃಷ್ಟಿಯೆಲ್ಲದರ ದೃಢವಾದ ನಿರಂತರ ಪೂಜೆಯಾಗುತ್ತದೆ. ನಿರಹಂಕಾರದ ಇಂಥ ಬದುಕೇ ನಿಜವಾದ ತಪಸ್ಸು, ಏಕೆಂದರೆ ಸಾಧಕನ ಸಾಧನೆ (ಉದ್ದೇಶಪೂರ್ವಕವಾದ ಪ್ರಯತ್ನ) ಜ್ಞಾನಿಯ ಲಕ್ಷಣ (ಸಹಜವಾದ ಆನಂದಪೂರ್ಣ ವ್ಯವಹಾರ) ಆಗುತ್ತದೆ. ಸರಿಯಾದ ರೀತಿಯ ಧ್ಯಾನಕ್ಕೆ ಮಾತ್ರವೇ ಅಲ್ಲದೆ ಸುಖವಾದ ಯಶಸ್ವಿ ಜೀವನಕ್ಕೆ ಕೂಡ ಮಹರ್ಷಿಗಳ ಆತ್ಮವಿಚಾರ ವಿಧಾನ ಒಂದು ನಿರ್ದುಷ್ಟವಾದ ಅಯಶಸ್ವಿಯಾಗದ ವಿಧಾನ ಎನ್ನುವ ಅವರ ಶಿಷ್ಯರ ವಾದಕ್ಕೆ ಈ ಚಿಕ್ಕ ಕವನದ ಪ್ರತಿಪಾದನಕ್ರಮ ಮತ್ತು ಸಿದ್ಧಾಂತ ಸಾಕಷ್ಟು ಪುಷ್ಟಿ ನೀಡುತ್ತವೆ.

**ಇರುವುದನ್ನು ಕುರಿತ ನಲವತ್ತು**

ಸುಮಾರು 1928ರಲ್ಲಿ, ಮತ್ತೆ ಮುರುಗನಾರ್‌ರ ಸೂಚನೆ ಪ್ರಕಾರ, ವಿವಿಧ ಸಂದರ್ಭಗಳಲ್ಲಿ ಮಹರ್ಷಿ ಬರೆದ ಕೆಲವು ಬಿಡಿ ಪದ್ಯಗಳನ್ನು ಸಂಕಲಿಸಿ, ಪರಿಷ್ಕರಿಸಿ, ಅವಕ್ಕೆ ಇನ್ನು ಕೆಲವನ್ನು ಸೇರಿಸಲಾಯಿತು. ಇದು 'ಉಳ್ಳದು ನಾರ್ಪದು' (ಇರುವುದು ನಲವತ್ತು) ಎಂಬ ಶೀರ್ಷಿಕೆಯಲ್ಲಿ ಒಂದು ದೊಡ್ಡ ಕೃತಿಯಾಯಿತು. ಅನಂತರ ಇದನ್ನು ಕಾವ್ಯಕಂಠ ಗಣಪತಿ ಮುನಿ ಮೊಳಗುವ ಸಂಸ್ಕೃತ ಶ್ಲೋಕಗಳಲ್ಲಿ ಅನುವಾದ ಮಾಡಿದರು. ಆ ಸಂಕಲನಕ್ಕೆ *ಸದ್ದರ್ಶನ* (ಸತ್ಯದ ದರ್ಶನ) ಎಂಬ ಹೆಸರಿತ್ತರು. ಅದರ ಮೇಲೆ ಟಿ.ವಿ. ಕಪಾಲಿಶಾಸ್ತ್ರಿ, ಲಕ್ಷ್ಮಣ ಶರ್ಮ, ಡಾ. ಟಿ.ಎಂ.ಪಿ. ಮಹದೇವನ್, ಸ್ವಾಮಿ ಪೂರ್ಣಾನಂದ ತೀರ್ಥ ಮತ್ತು ಇತರರು ರಚಿಸಿದ ವ್ಯಾಖ್ಯಾನಗಳು ಈ ನಲವತ್ತು ಶ್ಲೋಕಗಳನ್ನು ಗಂಭೀರವಾದ ಅಧ್ಯಯನಕ್ಕೆ ಯೋಗ್ಯವಾದ ಒಂದು ಗ್ರಂಥವನ್ನಾಗಿ ಮತ್ತು ಕೆಲವು ಸಲ ವಾದವಿವಾದಕ್ಕೆ ಕಾರಣವನ್ನಾಗಿ ಮಾಡಿವೆ. ಈ ನಲವತ್ತಕ್ಕೆ ಇನ್ನೂ ನಲವತ್ತು ಶ್ಲೋಕಗಳ ಅನುಬಂಧವನ್ನು ಸೇರಿಸಲಾಯಿತು. ಅದರಲ್ಲಿ ಅರ್ಧಭಾಗ ಯೋಗವಾಸಿಷ್ಠ ಮತ್ತು ಇತರ ಸಂಸ್ಕೃತ ಗ್ರಂಥಗಳಿಂದ ಮಾಡಿದ ಅನುವಾದವಾಗಿತ್ತು. ವಿಷಯವೊಂದನ್ನು ನಲವತ್ತು ಪದ್ಯಗಳ ಚಕ್ರದಲ್ಲಿ - ಉದಾ. 'ಇನಿಯಾವೈ ನಾರ್ಪದು' (ಹಿತವಾದ ನಲವತ್ತು) ಮತ್ತು 'ಇನ್ನ ನಾರ್ಪದು' (ಅಹಿತವಾದ ನಲವತ್ತು)- ನಿರೂಪಿಸುವ ತಮಿಳು ಸಾಹಿತ್ಯ ಸಂಪ್ರದಾಯವನ್ನು ಈ ಸಂಕಲನಗಳು ಅನುಸರಿಸಿವೆ. ಪ್ರಾಸಂಗಿಕವಾಗಿ ನಲವತ್ತು ಸತ್ಯವಸ್ತುಗಳಿವೆ ಎಂಬ ಭಾವನೆಯನ್ನು ಹಾಸ್ಯಮಾಡಿವೆ. ಅನುಬಂಧವನ್ನೂ ಒಳಗೊಂಡಂತೆ ಈ ಎಂಬತ್ತು ಶ್ಲೋಕಗಳಲ್ಲಿ ಅವುಗಳ ವ್ಯಾಖ್ಯಾನಕಾರರು ವಿಷಯದ ಸಕ್ರಮ ಪ್ರತಿಪಾದನೆಯನ್ನು ಗುರುತಿಸುವ ಪ್ರಯತ್ನ ಮಾಡಿ, ಅವನ್ನು ವಿವೇಕ, ವಿಚಾರ ಮತ್ತು ಅನುಭವ ಎಂಬ ವಿವಿಧ ಹೆಸರುಗಳ ಕೆಳಗೆ ಜೋಡಿಸಿದ್ದರೂ, ಈ ಪದ್ಯಗಳನ್ನು ಒಳಗಡೆಗೆ, ಸತ್ಯದ, ಏಕಮಾತ್ರವಾದ ಅಖಂಡ ಅನಿರ್ವಚನೀಯ ಚೈತನ್ಯದ, ಅಸ್ತಿತ್ವವೆಲ್ಲದರ ನಿಶ್ಚಯ ಕೇಂದ್ರದ ಕಡೆಗೆ ಕೈತೋರಿಸುವ ಸ್ವತಂತ್ರವಾದ, ಸ್ಪಷ್ಟವಾದ ಕೈಮರಗಳಂತೆ ಪರಿಗಣಿಸುವುದು ಉತ್ತಮ. ಈ ಶ್ಲೋಕಗಳು ಈ ಶುದ್ಧ ಚೈತನ್ಯದ ಅಕ್ಷದ ಸುತ್ತಲೂ ತಿರುಗುತ್ತಿರುವ ಗುಂಬಕ್ಕೆ ನಮ್ಮ ಆಲೋಚನಾ ಜೀವನದ ಪರಧಿಯ ಮೇಲಿರುವ ವಿಭಿನ್ನ ಕೇಂದ್ರಗಳನ್ನು ಕೂಡಿಸುವ ಕಂಬಿಗಳಂತಿವೆ. ಇದರ ಪ್ರತಿಯೊಂದು ಶ್ಲೋಕವೂ ನಿಜವಾದ ನಮ್ಮ ಆತ್ಮದಿಂದ ನಮ್ಮನ್ನು ಎಳೆದು ಕಿತ್ತು ಒಂದರ ತರುವಾಯ ಮತ್ತೊಂದು ಬಾಹ್ಯ ಘಟನೆಯಲ್ಲಿ ನೆಡುವ

ಕೇಂದ್ರಾಪಗಾಮಿ ಶಕ್ತಿಯಾದ ಅಹಂಭಾವನೆಯ ಮೇಲೆ ಭಾರವಾದ ಸುತ್ತಿಗೆಯ ಏಟಿನಂತೆ ತನ್ನದೇ ಸ್ವಂತ ಭಾರದಿಂದ ಬೀಳುತ್ತದೆ.

ಪ್ರಾರ್ಥನೆ

ಸದ್ವಸ್ತುವನ್ನು ಬಿಟ್ಟು
ಸದ್ವಸ್ತುವಿನ ಅರಿವು ಸಾಧ್ಯವೇ?
ಆ ಸದ್ವಸ್ತು ಭಾವನಾರಹಿತವಾಗಿ
ಹೃದಯದಲ್ಲಿ ನೆಲೆಸಿರುವುದರಿಂದ,
ಹೃದಯ ಎಂಬ ಮತ್ತೊಂದು ಹೆಸರಿರುವ
ಆ ಸದ್ವಸ್ತುವನ್ನು ಕುರಿತು ಚಿಂತಿಸುವುದು ಎಂತು,
ಚಿಂತಿಸಬಲ್ಲವರಾದರೂ ಯಾರು?
ಅದನ್ನು ಕುರಿತು ಆಲೋಚಿಸುವುದೆಂದರೆ
ಸದ್ವಸ್ತುವಾಗಿಯೇ, ಹೃದಯಲ್ಲಿರುವ ಹೃದಯವಾಗಿಯೇ
ನೆಲೆಸುವುದು.
ಸಾವಿನ ಹೆದರಿಕೆಗೆ ಒಳಗಾದವರು
ಸರ್ವಶಕ್ತನಾದ, ಅಜನಾದ, ಮೃತ್ಯುಂಜಯನಾದ
ಭಗವಂತನ ಪಾದಗಳಿಗೆ ಶರಣಾಗುತ್ತಾರೆ.
ಹೀಗೆ ಶರಣಾದ ಅವರು ಮತ್ತು ಅವರ ಆಸಕ್ತಿಗಳು
ಇಲ್ಲವಾಗುತ್ತವೆ. ಈಗ ಅಮರರಾದ
ಅವರು ಮುಂದೆ ಸಾವಿನ ವಿಷಯವನ್ನೇ ಆಲೋಚಿಸುವುದಿಲ್ಲ.

ಈ ಎರಡು ಶ್ಲೋಕಗಳಲ್ಲಿ ಎರಡು ವಿಭಿನ್ನ ಮಾರ್ಗಗಳಿಗೆ ಅವಕಾಶ ಕಲ್ಪಿಸಿದೆ. ಅಚ್ಚ ತಮಿಳು ಪದಗಳಲ್ಲಿ ರಚಿಸಿದ ಮೊದಲನೆ ಶ್ಲೋಕವು ಸತ್, ಚಿತ್ ಮತ್ತು ಹೃದಯಗಳ ಐಕ್ಯವನ್ನು ದೃಢವಾಗಿ ಪ್ರತಿಪಾದಿಸುತ್ತದೆ. ಅಖಂಡವಾದ ಏಕತ್ವ ಮತ್ತು ಪೂರ್ಣತೆಗಳಿಗೆ ಸಂಬಂಧಿಸಿದ ಮತ್ತು ಇರುವುದು, ಆಲೋಚಿಸುವುದು, ಹೃದಯ ಮತ್ತು ಅಂತರಾಕಾಶ ಇವೆಲ್ಲವನ್ನೂ ಸಮಾನವಾಗಿ ಸೂಚಿಸುವ ತಮಿಳು ಧಾತು ಉಳ್ ಎಂಬುದನ್ನು ಆಸಕ್ತಿಯಿಂದ ಬಳಸುತ್ತದೆ. ಭೂತ ಅಥವಾ ಭವಿಷ್ಯತ್ ಕಾಲಗಳಿಲ್ಲದಿರುವ ಉಳ್ (ಇರು) ಎಂಬ ಕ್ರಿಯಾಪದವನ್ನು ಎಂಟು ಸಲ, ಉಳ್ಳಮ್ (ಹೃದಯ) ಎಂಬ ಪದವನ್ನು ಮೂರು ಸಲ, ಉಳ್ಳು (ಆಲೋಚಿಸು) ಎಂಬುದನ್ನು ಮೂರು ಸಲ ಮತ್ತು ಉಣರ್ವು (ಅನುಭವಿಸುವುದು) ಎಂಬುದನ್ನು ಎರಡು ಸಲ ಪ್ರಯೋಗಿಸಿದೆ. ಹೀಗೆ ಶಬ್ದ, ಧ್ವನಿ ಹಾಗೂ ಸ್ಪಷ್ಟ ಉಕ್ತಿ ಇವುಗಳ ಮೂಲಕ ಈ ಇಡೀ ವೆಣ್ಬವು ಮನಸ್ಸನ್ನು ಒಳಕ್ಕೆ, ಸತ್-ಚೈತನ್ಯದ ಹೃದಯಕ್ಕೇ ಸೆಳೆಯುತ್ತದೆ.

ಎರಡನೆ ವೆಣ್ಬವು ಮಾನವರಿಗ ಪುರುಷರೂಪದ ದೇವರೊಬ್ಬರ ಅವಶ್ಯಕತೆಯನ್ನು ಒಪ್ಪುತ್ತದೆ. ಸಾವಿಗೆ ಹೆದರಿ, ತಮ್ಮ 'ನಾನು' 'ನನ್ನದು' ಎಂಬುದು ಮೃತ್ಯುವಿನ ಅಧಿಕಾರದ ಆಚೆ ಇರುವ ಮಹಾದೇವನಾದ ಶಿವನಿಗೆ ಸಮರ್ಪಿಸಿ ಇಹದಲ್ಲಿಯೇ ಅಮರತ್ವ ಸಾಧಿಸಿದವರನ್ನು ಹೊಗಳುತ್ತದೆ. ಈ ಪದ್ಯದಲ್ಲಿ, ದ್ವೈತಭಾವನೆ ಪ್ರಧಾನವಾಗಿರುವ

ಮೊದಲಿನ ಎರಡು ಸಾಲುಗಳು ಯುಕ್ತವಾಗಿಯೇ ಸಂಸ್ಕೃತ ಪದಗಳ ಬಾಹುಳ್ಯದಿಂದ ಭಾರವಾಗಿವೆ. ಆದರೆ ಭಗವಂತನ ಅಮರಮೂರ್ತಿಯಲ್ಲಿ ಮರ್ತ್ಯ ಜೀವದ ಲಯವನ್ನು ಕೊಂಡಾಡುವ ಕೊನೆಯ ಭಾಗವು, ಮತ್ತೆ ಅಚ್ಚ ತಮಿಳು ಪದಗಳ ಮೂಲಕ, ಏಕತ್ವದ ಮತ್ತು ಪೂರ್ಣತ್ವದ ಭಾವವನ್ನು, ಮಮತ್ವದಿಂದ ಮತ್ತು ಮರಣದ ಎಲ್ಲ ಚಿಂತೆಯಿಂದ ವಿಮುಕ್ತಿಯನ್ನು ನಿರೂಪಿಸುತ್ತದೆ.

ಈ ಗ್ರಂಥದ ಗುರಿ ವಾದದ ಮೂಲಕ ಸತ್ಯತ್ವದ ಅಥವಾ ಜ್ಞಾನಮೀಮಾಂಸೆಯ ಯಾವುದೇ ಸಿದ್ಧಾಂತವನ್ನು ಸ್ಥಾಪಿಸುವುದಲ್ಲ. ಆದರೆ ಪ್ರತ್ಯೇಕ ಅಹಂಭಾವನೆಯ ಸಂಪೂರ್ಣ ಅಭಾವ ಹಾಗೂ ಸತ್-ಚೈತನ್ಯದ ಏಕಮಾತ್ರ ಅಸ್ತಿತ್ವದ ರೂಪದಲ್ಲಿ ಅಖಂಡತೆಯ ಪ್ರತ್ಯಕ್ಷ ಅನುಭವವನ್ನು ಸ್ಪಷ್ಟವಾದ ಸರಳವಾದ ವಾಕ್ಯಗಳ ಮತ್ತು ನಿರಂತರ ಅಭ್ಯಾಸದ ಮೂಲಕ ನೀಡುವುದು. ಸಿದ್ಧಾಂತಕ್ಕೆ ಸಂಬಂಧಿಸಿದ ವಾದವಿವಾದಗಳನ್ನು ಎಲ್ಲ ನಾನಾತ್ವ, ಸಂದೇಹ ಮತ್ತು ವಿರೋಧಗಳಿಗೂ ಮೂಲ ಹಾಗೂ ಕಾರಣವಾದ ಅಹಂಭಾವನೆಯ ಕುಹಕವೆಂದು ನಿರಾಕರಿಸಲಾಗಿದೆ. ಮನಸ್ಸನ್ನು ದೃಢವಾಗಿ ಅಂತರ್ಮುಖವಾಗಿಸಿ, ಜಗತ್ತು ಮತ್ತು ಅದರ ಅನುಭವದ ಉದಯಾಸ್ತಗಳ ನೆಲೆಯಾದ ಶುದ್ಧ ಅವಿಷಯೀಭೂತ ಚೈತನ್ಯದಲ್ಲಿ ಆ ಮನಸ್ಸನ್ನು ಲಯಗೊಳಿಸುತ್ತದೆ. ನಾನಿದ್ದೇನೆ ಎಂಬ ರೂಪದಲ್ಲಿ ಸದಾ ಇರುವ, ನಾಮರೂಪ ರಹಿತವಾದ ಈ ಚೈತನ್ಯವೇ ಸತ್ (ಇರುವುದು). ಯಾವುದನ್ನು ಸ್ಮರಿಸಿಕೊಂಡು, ಅವಲಂಬಿಸಿ, ಅದರಲ್ಲಿ ಲಯವಾಗಲು ಕಲಿಯುವಂತೆ ನಮಗೆ ಹೇಳಿದೆಯೋ ಅದೇ ಇದು. ಸತ್ ಎನ್ನುವುದು ಏಕಮಾತ್ರವಾದ ಸನಾತನ ಸತ್-ಚೈತನ್ಯ. ಅಸಂಖ್ಯಾತ ವಸ್ತುಗಳಾಗಿ ಅನೇಕಾನೇಕ ಸಂಬಂಧಗಳಾಗಿ ಕಾಣಿಸಿ ಕೊಳ್ಳುವ ಶಕ್ತಿ ಅದಕ್ಕೆ ಇದೆ. ಚೈತನ್ಯದಲ್ಲಿ ನೆಲಸಿರುವ ಈ ಸತ್ ನಾವು ನೋಡುವ ಜಗತ್ತಾಗಿ ಮತ್ತು ಅದನ್ನು ನೋಡುವ ಹಾಗೂ ಅದರಲ್ಲಿ ನಮ್ಮ ನಮ್ಮ ಪಾತ್ರಗಳನ್ನು ವಹಿಸುವ ನಾವೆಲ್ಲರಾಗಿ ಗೋಚರವಾಗುತ್ತದೆ. ನಾಮರೂಪಾತ್ಮಕವಾದ ಈ ಜಗತ್ತಿನ ಚಿತ್ರ, ಅದನ್ನು ನೋಡುವವನು, ಅದನ್ನು ಬರೆದಿರುವ ಪಟ, ಅದನ್ನು ಪ್ರಕಟಿಸುವ ಬೆಳಕು ಇವೆಲ್ಲವೂ ಈ ಏಕಮಾತ್ರ ಸತ್-ಚೈತನ್ಯವೇ. ದೇವರು, ಜಗತ್ತು ಮತ್ತು ಜೀವಗಳು ಇವುಗಳ ನಡುವೆ ಭೇದ ಕಲ್ಪಿಸುವುದು ಅಹಂಕಾರ. ಈ ಅಹಂಕಾರ ಅದೃಶ್ಯವಾದಾಗ ಈ ಮೂರು ಒಂದೇ ಆಗಿ ಕಾಣುತ್ತವೆ. ಜಗತ್ತು ಮನಸ್ಸಿನಿಂದ ಕಲ್ಪಿತವಾದುದು. ನಾವೆಲ್ಲರೂ ಕೂಡಿ ಸೃಷ್ಟಿಸಿದ್ದು. ಪ್ರತಿಯೊಂದು ಮನಸ್ಸೂ ಅದನ್ನು ತನ್ನ ನಿಲುವಿನಿಂದ ನೋಡುತ್ತದೆ ಮತ್ತು ಅದರೊಡನೆ ಹೊಂದಾಣಿಕೆ ಮಾಡಿಕೊಳ್ಳುತ್ತದೆ. ಅಂದರೆ, ಸತ್ಯದ ಮೇಲೆ ಆ ಮನಸ್ಸಿಗಿರುವ ಹಿಡಿತಕ್ಕೆ ಅನುಸಾರವಾಗಿ ಪ್ರತಿ ಮನಸ್ಸೂ ಗ್ರಹಿಸಿರುವ ಸಾಪೇಕ್ಷವಾದ ಸೀಮಿತವಾದ ಸತ್ಯಕ್ಕೆ ಅನುಗುಣವಾಗಿ ಅದು ಆ ಜಗತ್ತನ್ನು ಸವಿಯುತ್ತದೆ, ಸಹಿಸುತ್ತದೆ ಅಥವಾ ಮಾರ್ಪಡಿಸುತ್ತದೆ. ಶುದ್ಧ ಚೈತನ್ಯದ ಸಾಗರವಾದ ಆ ಸತ್ ಒಂದೇ ಆತ್ಯಂತಿಕವಾದ ಸತ್ಯ. ಜಗತ್ತು ಮತ್ತು ಅದರ ಅರಿವು ಆ ಸತ್‌ನಲ್ಲಿ ಉದಯಿಸಿ ಅದರಲ್ಲೇ ಮುಳುಗುತ್ತವೆ. ಆದರೆ ಆ ಸತ್ ಮಾತ್ರ ಉದಯಾಸ್ತಗಳಿಲ್ಲದೆ ಸದಾ ಸ್ವಪ್ರಕಾಶದಿಂದ ಬೆಳಗುತ್ತಿರುತ್ತದೆ. ನಾವು ತಲುಪಲು ಮತ್ತು ಅರಿಯಲು ಪ್ರಯತ್ನಿಸುವುದು ನಾಮರೂಪರಹಿತವಾದ ಈ ಚೈತನ್ಯವನ್ನೇ, ಈ ಅನಂತ ಸದ್ವಸ್ತುವನ್ನೇ. ವಿವಿಧ ನಾಮರೂಪಗಳಲ್ಲಿ ಅದರ ಅಂಶಗಳನ್ನು ಮತ್ತು ಪ್ರತಿಬಿಂಬಗಳನ್ನು 'ಆರಾಧಿಸುವ' ಮೂಲಕ ಆ ಪ್ರಯತ್ನ ಮಾಡುತ್ತೇವೆ. ಆ ಚೈತನ್ಯದ

ಅಸ್ತಿತ್ವದಲ್ಲಿ ನಮ್ಮ ಸ್ವಂತ ಅಸ್ತಿತ್ವವನ್ನು ಗುರುತಿಸಿ ನಾವು ನಮ್ರತೆಯಿಂದ ಅದಕ್ಕೆ ಶರಣಾಗಿ, ಅದರಲ್ಲಿ ವಿಲೀನವಾಗಿ, ಅದರೊಡನೆ ಒಂದಾಗಬೇಕು. ನಾಮರೂಪಗಳಿಂದ ಕೂಡಿದ ಆರಾಧಕ ಮತ್ತು ಅವನು ಆರಾಧಿಸುವ ನಾಮರೂಪಗಳಿಂದ ಕೂಡಿದ ದೇವತೆ ಇಬ್ಬರೂ ಐಕ್ಯದ ಅನಿರ್ವಚನೀಯ ಆನಂದದಲ್ಲಿ ಅದೃಶ್ಯರಾಗಬೇಕು (ಶ್ಲೋ 8). ಆನಂದರೂಪವಾದ ಈ ಸಮಾಗಮದಲ್ಲಿ ಮಾನವನು ಸಮಾನನಾದ ಆದರೆ ಹೆಚ್ಚು ನಿಷ್ಕ್ರಿಯನಾದ ಜೊತೆಗಾರ, ಭೋಕ್ತನಿಗಿಂತಲೂ ಹೆಚ್ಚಾಗಿ ಭೋಗ್ಯವಸ್ತು ಎಂಬ ಅಭಿಪ್ರಾಯವನ್ನು ಮತ್ತೆ ಮತ್ತೆ ಒತ್ತಿ ಹೇಳಿದರು.

ನೋಡುವವನ ನಿಜಸ್ವರೂಪವನ್ನು ಅರಿತುಕೊಳ್ಳದೆ ದೇವರನ್ನು ನೋಡುವುದು ಒಂದು ಮಾನಸಿಕ ಚಿತ್ರವನ್ನು ನೋಡಿದಂತೆ. ದೇವರನ್ನು ಯಾರೂ ನೋಡಲಾರರು. ದೇವರನ್ನು 'ನೋಡಿದ್ದನ್ನು' ಮಾತ್ರವೇ ಜ್ಞಾಪಿಸಿಕೊಳ್ಳಬಲ್ಲರು. ಪ್ರತ್ಯೇಕವಾದ ಜೀವಭಾವ ಅಳಿದು ಮಾಯವಾಗಿ ಆನಂದರೂಪನಾದ ದೇವರು ಮಾತ್ರ ಉಳಿದಾಗ ವ್ಯಕ್ತಿ 'ದೇವರನ್ನು ಕಂಡಿರುತ್ತಾನೆ.' ನಾವು ದೇವರನ್ನು ಅರಿಯಲಾರೆವು. ಆನಂದವನ್ನು ಮಾತ್ರವೇ, ಉಪಯೋಗಿಸಲ್ಪಡುತ್ತಿರುವ ಆನಂದ, ದೇವರಿಂದ ಭಕ್ಷಿಸಲ್ಪಡುತ್ತಿರುವ ಆನಂದ, ದೇವರಿಗೆ ಅನ್ನ ಅಥವಾ ಭೋಗ್ಯವಾಗಿರುವ ಆನಂದ ಇದನ್ನು ಮಾತ್ರವೇ ನಾವು ಅರಿಯಬಲ್ಲೆವು (ಶ್ಲೋ. 20,21). ಹೃದಯದ ಸ್ವಪ್ರಕಾಶ ಆನಂದದ ಪಾರಮ್ಯವನ್ನು 22ನೆಯ ಶ್ಲೋಕ ಒತ್ತಿ ಹೇಳುತ್ತದೆ. ಮನಸ್ಸಿಗೆ ಬೆಳಕು ನೀಡುತ್ತ ಚೈತನ್ಯಾತ್ಮ ಒಳಗೆ ಬೆಳಗುತ್ತಿರುತ್ತಾನೆ. ಮನಸ್ಸನ್ನು ಒಳಕ್ಕೆ ತಿರುಗಿಸಿ ಹೃದಯದಲ್ಲಿ ಅದನ್ನು ನೆಟ್ಟ ಹೊರತು, ಹೃದಯವನ್ನು ಮನಸ್ಸಿನ ಮೂಲಕ ಅರಿಯುವುದಾದರೂ ಎಂತು? ಯಾರಾದರೂ ಸೂರ್ಯನಿಗೆ ದೀಪ ಹಿಡಿಯುತ್ತಾರೆಯೇ?

ಶುದ್ಧವಾದ ಈ ಪರಚೈತನ್ಯದ ಆಸ್ವಾದವನ್ನು ಯಾವುದೋ ಅನಿಶ್ಚಿತ ಭವಿಷ್ಯತ್ಕಾಲಕ್ಕೆ ಮುಂದೂಡದೆ ಸದಾ ಪ್ರತ್ಯಕ್ಷವಾಗಿರುವ ಸತ್-ಚೈತನ್ಯವು ಆನಂದ ಸ್ವರೂಪವಾಗಿರುವುದನ್ನು ನಾವು ಶ್ರದ್ಧೆಯ ವಿಷಯವಾಗಿ ಇಲ್ಲಿಯೇ ಇಂದೇ ಪರಿಗ್ರಹಿಸಿ, ಒಳಗೆ ನೋಡುವುದನ್ನು ಮತ್ತು ಕೇಳುವುದನ್ನು ಹಾಗೂ ಕ್ಷಣ ದರ್ಶನಗಳಲ್ಲಿ ಅದನ್ನು ಗುರುತಿಸುವುದನ್ನು ಕಲಿಯಬೇಕು. ಏಕೆಂದರೆ ನಿಜವಾದ ಅರಿವು ಜ್ಞಾನ ಮತ್ತು ಅಜ್ಞಾನ ಎರಡನ್ನೂ ಮೀರಿರುತ್ತದೆ ಮತ್ತು ವಸ್ತುಗಳ ಜ್ಞಾನ ನಿಜವಾದ ಅರಿವಲ್ಲ ಎಂದು ನಮಗೆ ದೃಢಪಡಿಸಲಾಗಿದೆ. ಸತ್ (ಶುದ್ಧ, ಅನಂತ ವಸ್ತು) ಮತ್ತು ಆತ್ಮ (ಶುದ್ಧ, ಅನಂತ ಚಿತ್‌ನ 'ನಾನು') ಎರಡೂ ಸದಾ ಸಿದ್ಧವಾಗಿರುತ್ತವೆ ಮತ್ತು ಎರಡೂ 'ಅಜ್ಞೇಯ'ವಾಗಿರುತ್ತವೆ. ಆದರೆ ಸತ್ ಮತ್ತು ಚಿತ್ ಈ ಎರಡರ 'ಅಖಂಡತೆ' ಭೇದರಾಹಿತ್ಯ ಮತ್ತು ನಿರುಪಾಧಿಕತ್ವವನ್ನು ಆನಂದರೂಪದಲ್ಲಿ ಅನುಭವಿಸಬಹುದು. ಆದ್ದರಿಂದ ಉತ್ತಮ ಪುರುಷನ (ತನ್ನ) ಸತ್ಯಸ್ವರೂಪದಲ್ಲಿ ನಾವು ವಿಚಾರ ಮಾಡಿದರೆ ಪ್ರತ್ಯೇಕವಾದ ಒಂದು ವಸ್ತುವಾಗಿ ನಮಗೆ ಯಾವ ಅಸ್ತಿತ್ವವೂ ಇಲ್ಲವೆಂಬುದು ನಮಗೆ ಗೋಚರಿಸುತ್ತದೆ. ಒಟ್ಟು ಮೂರೂ ಉತ್ತಮ, ಮಧ್ಯಮ, ಪ್ರಥಮ ಪುರುಷರು ಒಂದೇ ಆಗಿ ಪ್ರಕಾಶಿಸುತ್ತಾರೆ. ಏಕ ಅದ್ವಿತೀಯ ಚೈತನ್ಯರೂಪವಾಗಿ ಎಲ್ಲ ಜೀವಿಗಳೊಂದಿಗೆ ಹೊಂದಿರುವ ಈ ಐಕ್ಯವೇ ನಮ್ಮ ನಿಜಸ್ವರೂಪ ಮತ್ತು ಸಾಮಾನ್ಯ ಜೀವನದ ಸ್ಥಿತಿ ಎಂಬುದು ಆಗ ಕಂಡುಬರುತ್ತದೆ. ಆದ್ದರಿಂದ ಇತರರೊಂದಿಗೆ ನಾವು ಕ್ರಮವಾಗಿ ಹೆಚ್ಚು ಹೆಚ್ಚು ಐಕ್ಯತೆ ಸಾಧಿಸುವುದು, ಚೈತನ್ಯವನ್ನು

ಸತ್ಯವನ್ನಾಗಿ ಅಂಗೀಕರಿಸುವುದು, ಗೌರವಿಸುವುದು ಮತ್ತು ಹಂಚಿಕೊಳ್ಳುವುದು ಇಂಥ ನಿಜವಾದ ಆಧ್ಯಾತ್ಮಿಕ ಜೀವನವೇ ಬದುಕಿನ ಸಹಜ ಸ್ಥಿತಿ. ಇದನ್ನು ಮುಂದೂಡಲಾಗದು. ಅದು ಇಲ್ಲಿಯೇ, ಇಂದೇ, ಈ ಕ್ಷಣದಲ್ಲಿಯೇ ಪ್ರಾರಂಭವಾಗಬೇಕು. ಆದ್ದರಿಂದಲೇ ವರ್ತಮಾನಕಾಲದಲ್ಲಿ ಬದುಕುವುದರ ಪ್ರಾಮುಖ್ಯ ಪರಮ ಮಹತ್ವದ್ದಾಗಿರುವುದು.

ವರ್ತಮಾನಕಾಲಕ್ಕೆ ಅಂಟಿಕೊಂಡಿರುವ ಮಾತ್ರದಿಂದಲೇ ಭೂತ ಮತ್ತು ಭವಿಷ್ಯಕಾಲಗಳು ನಿಲ್ಲಬಲ್ಲವು. ಭೂತ ಮತ್ತು ಭವಿಷ್ಯತ್ತು ಎರಡೂ ತನ್ನ ತನ್ನ ಕಾಲದಲ್ಲಿ ಇರುತ್ತವೆ. ಸದ್ಯದಲ್ಲಿ ಇರುವ ನಿಜವಾದ ಕಾಲವೆಂದರೆ ವರ್ತಮಾನ ಮಾತ್ರವೇ. ವರ್ತಮಾನದ ನಿಜ ಸ್ವರೂಪವನ್ನು ವರ್ತಮಾನಕಾಲದಲ್ಲಿ ಅರಿತುಕೊಳ್ಳದೆ ಭೂತ ಭವಿಷ್ಯತ್ತುಗಳನ್ನು ಅರಿಯಲು, ಹೊರಡುವುದು ಏಕಾಂಕವನ್ನು ಬಿಟ್ಟು ಎಣಿಸುವುದನ್ನು ಪ್ರಯತ್ನಿಸಿದಂತೆ (ಶ್ಲೋಕ 15). ಭೂತಕಾಲದ ನೆನಪುಗಳು ಮತ್ತು ಭವಿಷ್ಯತ್ತನ್ನು ಕುರಿತ ನಿರೀಕ್ಷೆಗಳು ಕೇವಲ ನೆರಳುಗಳು. ವಾಸ್ತವಿಕ ಪರಿಮಾಣಗಳಲ್ಲಿ ನಾವು ವ್ಯವಹರಿಸಬಹುದಾದ ಕಾಲದ ಮೂಲದ್ರವ್ಯ ವರ್ತಮಾನಕಾಲ. ಆದ್ದರಿಂದ ಸಾಧಕನು ಸದ್ಯದ ಕ್ಷಣದಲ್ಲಿ ಕಾಲಾತೀತದೊಡನೆ, ಅರಿವಿನಲ್ಲಿ ಅದರ ಅನುಭವದೊಡನೆ, ಸಹಜಕ್ರಿಯೆಯ ಮೂಲಕ ಅದರಲ್ಲಿ ಭಾಗವಹಿಸುವುದರೊಡನೆ ಸಂಬಂಧ ಪಡೆದಿರುತ್ತಾನೆ.

ನಾವು ದೇಹಗಳಲ್ಲ, ಚೈತನ್ಯ ಸ್ವರೂಪರು. ಆದ್ದರಿಂದ ಕಾಲದೇಶಗಳು ನಮ್ಮಲ್ಲಿ ಇವೆಯೇ ಹೊರತು, ನಾವು ಕಾಲದೇಶಗಳಲ್ಲಿ ಇಲ್ಲ (ಶ್ಲೋಕ 16). ಅಜ್ಞಾನಿ ಮತ್ತು ಜ್ಞಾನಿ ಇಬ್ಬರಿಗೂ ಸಮಾನವಾಗಿ ದೇಹವು ಸತ್ಯವಾದದ್ದು. ಆದರೆ ಅಜ್ಞಾನಿಗೆ 'ನಾನು' ಎಂಬುದು ದೇಹಕ್ಕೆ ಸೀಮಿತವಾಗಿದೆ. ಜ್ಞಾನಿಗಾದರೋ 'ನಾನು' ಎಂಬುದು ಅಸೀಮ ಜ್ಞಾನವಾಗಿ ಪ್ರಕಾಶಿಸುತ್ತದೆ (ಶ್ಲೋಕ 17). ಅಜ್ಞಾನಿ ಮತ್ತು ಜ್ಞಾನಿ ಇಬ್ಬರಿಗೂ ಸಮಾನವಾಗಿ ಜಗತ್ತು ಸತ್ಯ. ಆದರೆ ಅಜ್ಞಾನಿಗೆ ನಾಮರೂಪಾತ್ಮಕವಾದ ಜಗತ್ತೊಂದೇ ಸತ್ಯ. ಜ್ಞಾನಿಗೆ ಸತ್-ಚಿತ್-ಆನಂದವು ನಾವು ನೋಡುವ ಜಗತ್ತಿನ ಆಧಾರ ಮತ್ತು ಅಡಿಪದರ (ಶ್ಲೋಕ 18).

ವಿಧಿ ಮತ್ತು ಪುರುಷಪ್ರಯತ್ನ ಈ ಎರಡೂ ಆಸೆ ನಿರಾಸೆಗಳಿಂದ ಕೂಡಿದ ಅಹಂಕಾರದ ಜಗತ್ತಿಗೆ ಸೇರಿದವು ಎಂಬುದನ್ನು ಮನಗಂಡ ತರುವಾಯ ಅವೆರಡರ ನಡುವೆ ತೋರುವ ವಿರೋಧ ಅದೃಶ್ಯವಾಗುತ್ತದೆ (ಶ್ಲೋಕ 19).

ಜಡದೇಹವು 'ನಾನು' ಎಂದು ಹೇಳಿಕೊಳ್ಳುವುದಿಲ್ಲ ಮತ್ತು 'ನಾನು' ಎಂಬುದರ ಅರಿವೇ ಅದಕ್ಕಿರುವುದಿಲ್ಲ. ಸತ್-ಚೈತನ್ಯವು ಸದಾ ಇರುತ್ತದೆ. ಅದು ಉದಯಿಸುವುದೂ ಇಲ್ಲ, ಅಸ್ತವಾಗುವುದೂ ಇಲ್ಲ. ಆದರೆ ಇವೆರಡರ ನಡುವೆ ಮತ್ತು ದೇಹಕ್ಕೆ ಸಂಬಂಧಿಸಿ 'ನಾನು' ಎಂದು ಕರೆದುಕೊಳ್ಳುವ ಯಾವುದೋ ಒಂದು ಉದಯಿಸುತ್ತದೆ. ಚಿತ್ ಮತ್ತು ಜಡಗಳನ್ನು ಕೂಡಿಸುವ ಗಂಟನ್ನು ಬಿಗಿಯುವುದು ಈ ಸೋಗಿನ ವಸ್ತುವೇ. ಇದೇ ಬಂಧನ, ಜೀವ, ಸೂಕ್ಷ್ಮ ಶರೀರ, ಅಹಂಭಾವನೆ, ಜನ್ಮಚಕ್ರ, ಮನಸ್ಸು (ಶ್ಲೋಕ 24).

ರೂಪ (ದೇಹ)ವೊಂದಕ್ಕೆ ಅಂಟಿಕೊಂಡು ಈ ನಿರೂಪ ಪ್ರೇತ ಅಸ್ತಿತ್ವಕ್ಕೆ ಬರುತ್ತಿದೆ. ರೂಪಗಳಿಗೆ (ಭಾವನೆಗಳಿಗೆ) ಅಂಟಿಕೊಂಡು ಮುಂದುವರಿಯುತ್ತದೆ. ಒಂದು ರೂಪವನ್ನು ತೊರೆದು ಮತ್ತೊಂದನ್ನು ಹಿಡಿದುಕೊಳ್ಳುತ್ತದೆ. ಆದರೆ ಅದರ ವಿಚಾರ ಮಾಡಿದಾಗ, ಅದು

ಹಾರಿಹೋಗುತ್ತದೆ (ಶ್ಲೋಕ 25). ಅಹಂಕಾರ ಒಂದು ವಂಚಕ. ಅದರ ಶ್ರೀಮಂತಸ್ಥಾನ ಕತೆಯ ಅಳಿಯನ ಗೆಳೆಯನ ಸ್ಥಾನದಷ್ಟೇ ಅನಿಶ್ಚಿತ. (ಹಿಂದಿನಕಾಲದಲ್ಲಿ ಮದುವೆ ಬಹಳ ದಿನಗಳ ಕಾಲ ನಡೆಯುತ್ತಿತ್ತು. ಅಂಥ ಮದುವೆಯೊಂದರಲ್ಲಿ ಅಪರಿಚಿತನೊಬ್ಬ ಒಂದೆರಡು ದಿನ ಬಹಳ ಮಜಾ ಮಾಡಿದ, ಏಕೆಂದರೆ ಹೆಣ್ಣಿನ ಕಡೆಯವರು ಅವನನ್ನು ವರನ ಸ್ನೇಹಿತನೆಂದು ಭಾವಿಸಿದ್ದರು. ಆದರೆ ಅವನು ಯಾರು ಎಂಬುದನ್ನು ವಿಚಾರಿಸಲು ಪ್ರಾರಂಭಿಸಿದಾಗ, ಅವನು ಬುದ್ಧಿವಂತಿಕೆಯಿಂದ ಅದೃಶ್ಯನಾದ. ಅದರಿಂದ ಯಾರಿಗೂ ಏನೂ ತೊಂದರೆಯಾಗಲಿಲ್ಲ).

ಈಗ ವಿಚಾರದ, ಅಭ್ಯಾಸದ ವಿಧಾನದ ವಿಷಯವಾಗಿ:

ನೀರಿನೊಳಕ್ಕೆ ಬಿದ್ದ ಆಭರಣವನ್ನು ತೆಗೆದುಕೊಳ್ಳಲು ಬೇಗ ಮುಳುಗುವಂತೆ, ಮಾತು ಮತ್ತು ಉಸಿರನ್ನು ಬಿಗಿಹಿಡಿದು, ಹರಿತವಾದ ಬುದ್ಧಿಯೊಡನೆ ನಮ್ಮೊಳಕ್ಕೆ ಮುಳುಗಿ, ಅಹಂಕಾರದ ಮೂಲಸ್ಥಾನವನ್ನು ಕಂಡುಹಿಡಿಯಬೇಕು (ಶ್ಲೋಕ 28).

'ನಾನು ಯಾರು' ಎಂದು ಹುಡುಕುತ್ತಾ ಬುದ್ಧಿಯು ಅಂತರ್ಮುಖವಾಗಿ ಹೃದಯವನ್ನು ಸಮೀಪಿಸುತ್ತಲೇ, 'ನಾನು' ಎಂದು ಕರೆದುಕೊಳ್ಳುವ ವಸ್ತು ಉತ್ಸಾಹ ಅಡಗಿ ಕುಸಿದು ಬೀಳುತ್ತದೆ. ಅದ್ವಿತೀಯ ಚೈತನ್ಯವು ತಾನೇ ತಾನಾಗಿ 'ನಾನು' 'ನಾನು' ಎಂಬುದಾಗಿ ಉದಯಿಸುತ್ತದೆ. ಆದರೆ ಅದು 'ನಾನು' ಎಂದು ಕಾಣಿಸಿಕೊಂಡರೂ, ಅದು ಅಹಂಕಾರವಲ್ಲ. ಅದು ಪರಮಪೂರ್ಣ, ನಿಜವಾದ ಆತ್ಮ (ಶ್ಲೋಕ 30).

'ವಿಚಾರದ ಕಾಲದಲ್ಲಿ ದ್ವೈತ, ಪ್ರಾಪ್ತಿಯ ತರುವಾಯ ಅದ್ವೈತ' ಎನ್ನುವ ವಾದ ಸರಿಯಲ್ಲ. ಆತಂಕದಿಂದ ಆತ್ಮವನ್ನು ಹುಡುಕುತ್ತಿರುವಾಗ ಮತ್ತು ಅದನ್ನು ಪಡೆದ ಮೇಲೆ ಎರಡು ಕಾಲಗಳಲ್ಲೂ ಒಂದೇ ಆಗಿರುವುದು 'ಹತ್ತನೆಯ ವ್ಯಕ್ತಿ' ಅಲ್ಲದೆ ಮತ್ತಿನ್ನಾರು? (ಶ್ಲೋಕ 37). ಸರ್ವ ಸಾಮಾನ್ಯವಾದ ಆತ್ಮದ ವಿಸ್ಮೃತಿ ಬಗ್ಗೆ ಕಥೆಯೊಂದಿದೆ. ಪ್ರಯಾಣ ಮಾಡುತ್ತಿದ್ದ ಹತ್ತು ಯುವಕರು ಪ್ರವಾಹದ ಒಂದು ನದಿಯನ್ನು ದಾಟಬೇಕಾಗಿ ಬಂದಿತು. ಆಚೆಯ ದಡ ತಲುಪಿದ ಮೇಲೆ, ಅವರಲ್ಲಿ ಒಬ್ಬನು ನದಿಯಲ್ಲಿ ಕೊಚ್ಚಿಕೊಂಡು ಹೋಗಿದ್ದಾನೆಂಬ ಭಯ ಅವರಿಗೆ ಉಂಟಾಯಿತು. ಎಲ್ಲರೂ ಸುರಕ್ಷಿತವಾಗಿ ನದಿಯನ್ನು ದಾಟಿದ್ದರೆಂಬುದನ್ನು ಖಚಿತಪಡಿಸಿಕೊಳ್ಳಲು, ಆ ತಂಡದ ಮುಂದಿ ತಮ್ಮನ್ನು ಎಣಿಸಿಕೊಂಡರು. ಪುನಃ ಎಣಿಸಿಕೊಂಡರು ಹಾಗೂ ಒಟ್ಟು ಒಂಬತ್ತೆಂಬ ಸಂಖ್ಯೆ ತಲುಪಿದರು. ಏಕೆಂದರೆ ಎಣಿಸುವಾಗ ಪ್ರತಿಯೊಬ್ಬನೂ ತನ್ನನ್ನು ಮರೆತು ಬಿಡುತ್ತಿದ್ದ. ತಮ್ಮಲ್ಲಿ ಒಬ್ಬನು ಮುಳುಗಿಹೋದನೆಂದು ಈಗ ಅವರಿಗೆ ಖಚಿತವಾಯಿತು. ಆದ್ದರಿಂದ ಅವರು ಅಳುತ್ತಾ ಕುಳಿತುಕೊಂಡರು. ಅಷ್ಟುಹೊತ್ತಿಗೆ ಒಬ್ಬ ಪ್ರಯಾಣಿಕ ಬಂದ. ವಿಷಯ ಏನೆಂದು ಅವರನ್ನು ವಿಚಾರಿಸಿದ. ಅವರ ತಪ್ಪಿನ ಕಾರಣ ಅವನಿಗೆ ತಿಳಿಯಿತು. ಈಗ ಅವನು ಅವರನ್ನು ತನ್ನ ಮುಂದೆ ಒಬ್ಬೊಬ್ಬರಾಗಿ ಹೋಗಲು ಹೇಳಿದ. ತನ್ನ ಮುಂದೆ ಹೋಗುತ್ತಿದ್ದಂತೆ ಪ್ರತಿಯೊಬ್ಬನಿಗೂ ಒಂದೊಂದು ಏಟು ಹಾಕಿದ. ಏಟುಗಳನ್ನು ಎಣಿಸಿಕೊಳ್ಳುವಂತೆ ಅವರಿಗೆ ಹೇಳಿದ. ಎಣಿಸುವಾಗ ಪ್ರತಿಯೊಬ್ಬನೂ ತನ್ನನ್ನೇ ಮರೆತುಬಿಟ್ಟಿದ್ದುದು ಅವರಿಗೆ ಆಗ ತಿಳಿಯಿತು. ತನ್ನ ಬದುಕಿನಲ್ಲಿ ಅನೇಕ ಪಾತ್ರಗಳನ್ನು ಆಡುತ್ತಿದ್ದು ಆ ಎಲ್ಲ ಪಾತ್ರಗಳ ಹಿಂಬದಿಯಲ್ಲಿರುವ ವ್ಯಕ್ತಿಯನ್ನು ಮರೆಯುವ ವ್ಯಕ್ತಿಗೂ ಈ ಕತೆಯನ್ನು ಅನ್ವಯಿಸಬಹುದು.

ಇದೋ ಅದೋ, ಮತ್ತಾವುದೋ ಆಗುವುದಕ್ಕೆ ಮೊದಲು, ಆಗಿರುವ ಕಾಲದಲ್ಲಿ ಮತ್ತು ಆದ ತರುವಾಯವೂ ನಾವು ಇರುತ್ತೇವೆ.

ಈ ನಲವತ್ತರ ಅನುಬಂಧ ಸತ್ಸಂಗದ ಪ್ರಾಮುಖ್ಯವನ್ನು ಒತ್ತಿಹೇಳುವ ಶಂಕರಾಚಾರ್ಯರ ಶ್ಲೋಕಗಳ ಅನುವಾದಗಳಿಂದ ಪ್ರಾರಂಭವಾಗುತ್ತದೆ. ಶುದ್ಧ ಜ್ಞಾನವನ್ನು, ಕಾಲಾತೀತವಾದುದರ ಅನುಭವವನ್ನು, ಇತರರಿಗೆ ತಿಳಿಸುವ ಉತ್ತಮ ರೀತಿ ಮೌನ. ವಾಸ್ತವಿಕವಾಗಿ ಜ್ಞಾನಿಗಳ ಸಂಗದಲ್ಲಿ ಆ ಅರಿವನ್ನು ಬಹಳ ಸುಲಭವಾಗಿ ಅನುಭವಿಸಬಹುದು ಮತ್ತು ಅದರಲ್ಲಿ ಭಾಗಿಗಳಾಗಬಹುದು.

ಮಹರ್ಷಿಗಳ ಮುಖ್ಯ ಉಪದೇಶದ ಸ್ಫುಟವಾದ ಸರಳತೆ ಮತ್ತು ನಿರಾಡಂಬರವಾದ ವ್ಯಾವಹಾರಿಕ ಜ್ಞಾನಗಳನ್ನು 6, 7 ಮತ್ತು 8ನೆಯ ಶ್ಲೋಕಗಳು ನಿದರ್ಶಿಸುತ್ತವೆ. ಸತ್ ಮತ್ತು ಚಿತ್‌ಗಳ ಐಕ್ಯರೂಪವಾದ ಅವರ ಇಡೀ ದರ್ಶನವನ್ನು ಅವು ಸಂಗ್ರಹವಾಗಿ ನಿರೂಪಿಸುತ್ತವೆ. ಈ ನಿರೂಪಣೆ ಸತ್‌ನ ಸ್ತರಗಳು, ಚಿತ್‌ನ ಅವಸ್ಥೆಗಳು ಮತ್ತು ಅಂಥ ಇತರ ಶಬ್ದಾಡಂಬರದ ವಿಷಯಗಳನ್ನು ಕುರಿತ ಚರ್ಚೆಗಳಿಂದ ಮುಕ್ತವಾಗಿದೆ. ಅಷ್ಟೇ ಅಲ್ಲದೆ ಸ್ಪಷ್ಟವಾದ ಮತ್ತು ಪೂರ್ತಿ ತೃಪ್ತಿಕರವಾದ ಈ ದರ್ಶನವನ್ನು ಶ್ರದ್ಧಾವಂತನಾದ ಯಾವನೇ ಸಾಧಕನಿಗೆ ಎಟುಕುವಂತೆ ಮತ್ತು ಸಿಗುವಂತೆ ಮಾಡುವ ಆತ್ಮವಿಚಾರ ವಿಧಾನವನ್ನೂ ಅವು ಸೂಚಿಸಿವೆ. ಅದರ ಬಾಹ್ಯಾರ್ಥವನ್ನು ಗ್ರಹಿಸಿ. ಬದುಕಿನ ಅನುದಿನದ ವ್ಯವಹಾರದಲ್ಲಿ ಅದನ್ನು ಬಳಸುವ ಮೂಲಕ ಆ ಸಾಧಕನು ಅದನ್ನು ತನ್ನದನ್ನಾಗಿ ಮಾಡಿಕೊಳ್ಳಬಲ್ಲ. ನಾವು ಅದನ್ನು ದೇವರು ಅಥವಾ ಆತ್ಮ ಎಂದು ಕರೆಯಲಿ, ಏಕಮಾತ್ರ ಸದ್ವಸ್ತುವು ಮನಸ್ಸನ್ನು ಸಾಕ್ಷಿಯಾಗಿ ನೋಡುವ ಚೈತನ್ಯ, ಜಗತ್ತನ್ನು ಸೃಷ್ಟಿಸುವ ಮತ್ತು ನೋಡುವ ಬೆಳಕು, ಪ್ರತಿ ಮಾನವ ಹೃದಯದಲ್ಲಿಯೂ 'ನಾನು' ಎಂಬ ರೂಪದಲ್ಲಿ ನಮ್ಮ ನಿಜಸ್ವರೂಪವಾಗಿರುವುದಾಗಿ ಸ್ಥಿತವಾಗಿರುವುದು ಮತ್ತು ಶುದ್ಧಜ್ಞಾನರೂಪದಲ್ಲಿ ನಮ್ಮ ನಿಜಸ್ವರೂಪವಾಗಿರುವುದಾಗಿ ನಾವು ಅರಿಯಬಹುದಾದುದು. ನಮ್ಮ ಮನಸ್ಸಿನ ಹಾಗೂ ಉಸಿರಿನ ನಿಶ್ಚಲತೆ ನಾವು ಮತ್ತು ಚಲನೆಗಳನ್ನು ಗಮನಿಸುವ ಮೂಲಕ ಆ ಜ್ಞಾನ ವಿಶ್ರಾಂತವಾಗಿದೆಯೇ ಅಥವಾ ಕ್ರಿಯೆಯಲ್ಲಿ ಪ್ರವೃತ್ತವಾಗಿದೆಯೇ ಎಂಬುದು ಗೊತ್ತಾಗುತ್ತದೆ.

ಇನ್ನೊಂದು ಶ್ಲೋಕ ಸಂಗ್ರಹದಲ್ಲಿ ಮಹರ್ಷಿಗಳು ರಾಮನಿಗೆ ಅವನ ಗುರುಗಳಾದ ವಸಿಷ್ಠರು ದೇಶಕಾಲಾತೀತವಾದ ಆಧ್ಯಾತ್ಮಿಕ ಹೃದಯದ ಮೇಲೆ ಮತ್ತು ಜ್ಞಾನ ಹಾಗೂ ಕ್ಷಾತ್ರಧರ್ಮದ ಮೇಲೆ ನೀಡಿದ ಉಪದೇಶವನ್ನು ಉಲ್ಲೇಖಿಸುತ್ತಾರೆ: ''ನಿನ್ನ ಸತ್ಯ ಸ್ವರೂಪವನ್ನು ಹೃದಯದಲ್ಲಿ ದೃಢವಾಗಿ ಧರಿಸಿ, ಪ್ರಪಂಚದ ರಂಗದ ಮೇಲೆ ವೀರನಂತೆ ನಿನ್ನ ಪಾತ್ರವನ್ನು ಆಡು. ಅಂತರ್ಯದಲ್ಲಿ ಶಾಂತನಾಗಿ, ವಿರಕ್ತನಾಗಿ ಇರು. ಆದರೆ ಉತ್ಸಾಹ ಮತ್ತು ಸಂತೋಷ, ಉದ್ರೇಕ ಮತ್ತು ದ್ವೇಷ, ಪ್ರಾರಂಭ ಮತ್ತು ಪ್ರಯತ್ನ ಇವನ್ನು ತಾಳಿ ವಿವಿಧ ಸಂದರ್ಭಗಳಲ್ಲಿ ನಿನ್ನ ನಿರ್ದಿಷ್ಟ ಪಾತ್ರಕ್ಕೆ ತಕ್ಕಂತೆ ಬಾಹ್ಯ ಕಾರ್ಯಗಳನ್ನು ಮಾಡುತ್ತಿರು.'' ಬೇರೆ ಮಾತುಗಳಲ್ಲಿ ಹೇಳುವುದಾದರೆ, ಆತ್ಮಸಾಕ್ಷಾತ್ಕಾರದ ಅನ್ವೇಷಣೆ, ಗಂಭೀರವಾದ ಮುಮುಕ್ಷುತ್ವವು ಧೀರ ಕ್ಷಾತ್ರಕಾರ್ಯದೊಂದಿಗೆ ಜೊತೆಜೊತೆಯಾಗಿ ನಡೆದಿರುತ್ತದೆ. ಇಂಥ ರೀತಿಯಲ್ಲಿ ಕಾರ್ಯನಡೆಸಲು ರಾಮನಿಗೆ ನೀಡಿದ ಕರೆ ನಿಜವಾಗಿ ನಮ್ಮನ್ನು ಕುರಿತದ್ದು. ಬಾಹ್ಯಕ್ರಿಯೆಯಲ್ಲಿ ಅಥವಾ ಧರ್ಮದ ಆಚರಣೆಯಲ್ಲಿ ಸಾಧಕನಿಗೂ

ಸಿದ್ಧನಿಗೂ ಯಾವ ವ್ಯತ್ಯಾಸವೂ ಇರುವುದಿಲ್ಲ. ನಿಯಮಪಾಲನೆಯ ಅಂಗವಾಗಿ ಸಾಧಕನು ಬುದ್ಧಿ ಪೂರ್ವಕವಾಗಿ ಮಾಡುವ ನಿಷ್ಕಾಮಕರ್ಮವು ಅವನು ತನ್ನ ಸಹಮಾನವರೊಂದಿಗೆ ಹೊಂದಿರುವ ಏಕತೆಯನ್ನು ಕಂಡುಕೊಳ್ಳುವ ಸಾಧನವಾಗಿರುತ್ತದೆ. ಶ್ರೀರಾಮನಂಥ ಅಥವಾ ಜನಕನಂಥ ಜ್ಞಾನಿಗೆ ಅದು ಅಂಥ ಏಕತೆಯ ಸ್ವಾಭಾವಿಕ ಅಭಿವ್ಯಕ್ತಿಯಾಗಿರುತ್ತದೆ. ಸಾಧಕನ ಸಾಧನವು ಜ್ಞಾನಿಯ ಲಕ್ಷಣವಾಗುತ್ತದೆ.

ಸದ್ದರ್ಶನದ 35ನೆ ಶ್ಲೋಕದಲ್ಲಿ ಮತ್ತು ಅದರ ಅನುಬಂಧದ 15 ಮತ್ತು 16ನೆ ಶ್ಲೋಕಗಳಲ್ಲಿ ಮಹರ್ಷಿಗಳು ಸಿದ್ಧಿಗಳಲ್ಲಿನ ಆಸಕ್ತಿಯನ್ನು ಆಧ್ಯಾತ್ಮಿಕ ಪಥದಲ್ಲಿನ ಒಂದು ಅಡ್ಡಿಯೆಂದು, ಪ್ರಲೋಭನೆಯೆಂದು ಖಂಡಿಸಿರುವುದನ್ನು ಗಮನಿಸಬೇಕು. ಇಡೀ ಶ್ಲೋಕಮಾಲೆ ವೇದಾಂತಗ್ರಂಥಗಳೆಲ್ಲವುಗಳ ಸಾರವಾದ ಈ ಘೋಷಣೆಯೊಡನೆ ಮುಕ್ತಾಯವಾಗುತ್ತದೆ. ಅಹಂಕಾರವು ಅಳಿದಾಗ ಉಳಿಯುವುದು ಶುದ್ಧ *ಚೈತನ್ಯ ಸ್ವರೂಪದ* ಅಹಂ.

ಈ ಎಂಬತ್ತು ಶ್ಲೋಕಗಳ ಅಂತಿಮ ರೂಪ, ಇಂದು ಅವು ಇರುವ ಕ್ರಮ ಹಾಗೂ ಅವುಗಳ ಜೋಡಣೆಗೆ ಕಾರಣರು ಮುರುಗನಾರ್. ಅವರು ಪುನಃ ಮಹರ್ಷಿಗಳಿಗೆ ಒಂದು ಕೆಲಸ ವಹಿಸಿದರು. ನಮ್ರತೆಯಿಂದ ಮಹರ್ಷಿ ಅದನ್ನು *ಆತ್ಮ ವಿದ್ಯೆ* ಯಲ್ಲಿ ನೆರವೇರಿಸಿದರು. ಗೋಪಾಲಕೃಷ್ಣಭಾರತಿ ತಮ್ಮ ನಂದನಾರ್ ಚರಿತದಲ್ಲಿ ಬಳಸಿ ಜನಪ್ರಿಯಗೊಳಿಸಿದ್ದ ರಾಗದ ಹಾಡೊಂದನ್ನು ಪ್ರಾರಂಭಿಸಿದ ಮುರುಗನಾರ್ ಅದರ ರಾಗವನ್ನು ಉಳಿಸಿಕೊಂಡು, ಅದರ ಅರ್ಥವನ್ನು ತಿರುಗು ಮುರುಗು ಮಾಡಿ, ''ಆತ್ಮಜ್ಞಾನ, ಆಹಾ, ಎಷ್ಟು ಸುಲಭ'' ಎಂದು ಶುರುಮಾಡಿದರು. ಆ ಹಾಡು ಅಂಗೈ ಮೇಲಿನ ನೆಲ್ಲಿಕಾಯಿಯ ಉಪಮೆಯನ್ನು ಎತ್ತಿಕೊಂಡು ಅದನ್ನು ನಿರಾಕರಿಸುತ್ತದೆ. ಬ್ರಹ್ಮಾನಂದದ ಈ ಅನುಭವ ಎಷ್ಟು ವಿಸ್ಪಷ್ಟ ಮತ್ತು ಎಷ್ಟು ಸಾಮಾನ್ಯ ಎಂದರೆ ಅದಕ್ಕೆ ಜ್ಞಾತೃವಾಗಲಿ ಜ್ಞೇಯ ವಸ್ತುವಾಗಲಿ ಬೇಕಾಗಿಲ್ಲ ಮತ್ತು ಅವುಗಳಿಗೆ ಅದು ಅವಕಾಶವನ್ನೂ ಕೊಡುವುದಿಲ್ಲ. ಅಲ್ಲಿಯವರೆಗೆ ಬಂದ ಮುರುಗನಾರ್ ಮುಂದಿನ ಪ್ರತಿಪಾದನೆಯನ್ನು ಮಹರ್ಷಿಗಳಿಗೆ ಬಿಟ್ಟರು. ''ಮುಂದಿನದು ಮೌನ'' ಎಂದಷ್ಟೇ ಹೇಳಿ ಕವಿ ಹಾಡನ್ನು ನಿಲ್ಲಿಸಬಹುದು, ಆದರೆ ಬ್ರಹ್ಮಾನಂದದ ಅಧಿಕಾರವಾಣಿಯಿಂದ ಮುನಿ ಮಾತಾಡಬಹುದು. ಆದ್ದರಿಂದ ಮಹರ್ಷಿಗಳು ಸಾಧನ ಹಾಗೂ ಅನುಗ್ರಹದ ಸ್ಪರ್ಶವನ್ನು ವಿವರಿಸಿ ಪದ್ಯಗಳ ಮಾಲೆಯೊಂದನ್ನು ರಚಿಸಿದರು. ಕೊನೆಯಲ್ಲಿ, ಒಂದು ಬಗೆಯ ಮುದ್ರೆಯಂತೆ, ನಿಜವಾದ ಗಾಯಕ ಅಣ್ಣಾಮಲೆ, ಅಂತರಾತ್ಮ, ಏಕಮೇವ ಅದ್ವಿತೀಯ ಎಂಬುದನ್ನು ಸೂಚಿಸಿದರು.

1947ರ ಫೆಬ್ರುವರಿಯಲ್ಲಿ ಮಹರ್ಷಿ ತಮ್ಮ ಕೊನೆಯ ಕವನ *ಏಕಾತ್ಮ ಪಂಚಕಂ* (ಏಕನಾದ ಆತ್ಮನ ಮೇಲೆ ಐದು ಪದ್ಯಗಳು) ಬರೆದರು. ಇದೂ ಒಂದು ಬಗೆಯ ಚಾತುರ್ಯ ಪ್ರದರ್ಶನವೇ. ತೆಲುಗಿನಲ್ಲಿ ವೆನ್ಬವೃತ್ತ ಇಲ್ಲದಿದ್ದರೂ, ತೆಲುಗಿನಲ್ಲಿ ಆ ವೃತ್ತದಲ್ಲಿ ಬರೆಯಲು ಪ್ರಯತ್ನಿಸಬೇಕೆಂದು ಕೆಲವರು ಆಂಧ್ರದ ಭಕ್ತರು ಕೋರಿದಾಗ, ಅವರನ್ನು ಸಂತೋಷಪಡಿಸಲು ಈ ಕವನ ರಚಿತವಾಯಿತು. ಭಕ್ತರ ಕೋರಿಕೆಯಂತೆ ಮಹರ್ಷಿ ತೆಲುಗಿನಲ್ಲಿ ಐದು ಚೊಕ್ಕ ವೆನ್ಬಗಳನ್ನು ರಚಿಸಿದರು. ಅನಂತರ ತಾವೇ ಅವನ್ನು ತಮಿಳು ವೆನ್ಬಗಳಿಗೆ ಅನುವಾದ ಮಾಡಿದರು. ವಿಚಿತ್ರವೆಂದರೆ, ಈ ಕವನ ಅವರಿಗೆ ಪ್ರಿಯವಾಗಿದ್ದ ಆತ್ಮವಿಚಾರದ

ವಿಧಾನವನ್ನೇ ಹಾಸ್ಯಮಾಡುತ್ತದೆ. ಅದರ ಅಭ್ಯಾಸವನ್ನು ಅವಶ್ಯಕವನ್ನಾಗಿ ಮಾಡುವ ವಿಚಿತ್ರ ಭ್ರಾಂತಿಯ ಬಗ್ಗೆ ಮರುಕ ತೋರಿಸುತ್ತದೆ.

ಆತ್ಮವು ಎಂದೆಂದೂ ಒಂದೇ. ನಮ್ಮನ್ನೇ ನಾವು
'ನಾನು ಯಾರು, ಎಲ್ಲಿದ್ದೇನೆ ' ಎಂದು ಕೇಳುವುದು,
ಕುಡಿದವನು 'ನಾನು ಯಾರು, ಎಲ್ಲಿದ್ದೇನೆ?'
ಎಂದು ವಿಚಾರಿಸಿದಂತೆ.
ದೇಹವು ಆತ್ಮದೊಳಗಿದೆ. ಆದರೂ
ಪ್ರತಿಯೊಬ್ಬನೂ ತಾನು ಜಡದೇಹದೊಳಗೆ
ಇದ್ದೇನೆಂದು ಭಾವಿಸುತ್ತಾನೆ,
ಚಿತ್ರವನ್ನು ಹಾಯಿಸಿದ ಪರದೆಯು
ಚಿತ್ರದೊಳಗಿರುವ ಬಟ್ಟೆಯೆಂದು
ಭಾವಿಸುವ ಪ್ರೇಕ್ಷಕನಂತೆ.

# ಅಧ್ಯಾಯ 11

# ಸಂಕಲಿತ ಕೃತಿಗಳು: ಅನುವಾದಗಳು ಮತ್ತು ರೂಪಾಂತರಗಳು

ಭಕ್ತಿಗೀತೆಗಳಂತೆಯೇ, ಪ್ರಾಚೀನ ಗ್ರಂಥಗಳ ಈ ಅನುವಾದಗಳು ಮತ್ತು ರೂಪಾಂತರಗಳು ಜ್ಞಾನಮಾರ್ಗದಲ್ಲಿ ಸಾಗುವ ಯಾತ್ರಿಕರಿಗೆ ಸಹಾಯ ಮತ್ತು ಉತ್ತೇಜನ ನೀಡಲು ಮಹರ್ಷಿಗಳು ಸದಾ ಸಿದ್ಧರಾಗಿದ್ದುದನ್ನು ಮಾತ್ರವೇ ಅಲ್ಲದೆ, ಆ ಉದ್ದೇಶಕ್ಕಾಗಿ ತಮ್ಮ ಬೋಧನೆಯ ತಿರುಳಾಗಿದ್ದ ಆತ್ಮವಿಚಾರದ ಮೂಲಕ ಆತ್ಮಸಾಕ್ಷಾತ್ಕಾರದ ತತ್ತ್ವವನ್ನು ವಿಶದೀಕರಿಸಲು ಅಥವಾ ಸಮರ್ಥಿಸಲು ಪ್ರಯೋಜಕವಾಗುವ ಮಟ್ಟಿಗೆ ಈಗಾಗಲೇ ಉಪಲಬ್ಧವಾಗಿರುವ ಸಾಹಿತ್ಯವನ್ನು ಅವರು ಬಳಸಿಕೊಳ್ಳುವ ರೀತಿಗೂ ನಿದರ್ಶನಗಳಾಗಿವೆ. ನಿರೂಪಣೆಯ ಸ್ವಂತಿಕೆಗೆ ಅವರು ನೀಡಿದ ಬೆಲೆ ಬಹಳ ಕಡಿಮೆ. ಪರೀಕ್ಷಿಸಿದ ಗುಣವುಳ್ಳ ಹಳೆ ಚಿನ್ನ, ಅದು ಶಂಕರಾಚಾರ್ಯರ ಸಿದ್ಧಾಂತದ ಗಟ್ಟಿರೂಪದಲ್ಲಿ ಇರಲಿ ಅಥವಾ ಶಿವ ಮತ್ತು ಕೃಷ್ಣರ ಭಾವ ಪ್ರಚೋದಕವಾದ ಜೀವಂತ ಪ್ರತಿಮೆಗಳ ರೂಪದಲ್ಲಿ ಇರಲಿ, ಕೈಗೆ ಸಿದ್ಧವಾಗಿ ಸಿಕ್ಕಿದಾಗ ಅದನ್ನು ಎಸೆದುಬಿಡಲು ಅವರಿಗೆ ಮನಸ್ಸು ಬರುತ್ತಿರಲಿಲ್ಲ. ಭಕ್ಷ್ಯಗಳ ಪಟ್ಟಿಯನ್ನೇ ಊಟವೆಂದು ಅಥವಾ ವರ್ಣನೆಯನ್ನೇ ಅನುಭವವೆಂದು ಭ್ರಮಿಸುವ ಬರಡು ಅಕ್ಷರಾರ್ಥ ಗ್ರಾಹಿತ್ವದಷ್ಟೇ ಸರ್ವಾಂಗೀಣ ನಿರಾಕರಣೆ ಮತ್ತು ಕುರುಡು ಪ್ರತಿಭಟನೆಗಳೂ ಪ್ರಾಚೀನತೆಯ ವಿಷಯದಲ್ಲಿನ ದಾಸ್ಯಭಾವನೆಯ ಪ್ರಕಾರಗಳು. ಭಾಷೆ ಮತ್ತು ಭಾವನೆ, ಸಂಕೇತ ಮತ್ತು ಅದು ಪ್ರತಿನಿಧಿಸುವ ಮನೋಜ್ಞಾನಿಕ-ಸಾಮಾಜಿಕ ವಸ್ತು ಸ್ಥಿತಿ, ಇವುಗಳ ನಡುವೆ ಇರುವ ಸಂಬಂಧ ಹಾಗೂ ವ್ಯತ್ಯಾಸಗಳನ್ನು ನಾವು ಒಮ್ಮೆ ಗ್ರಹಿಸಿದೆವೆಂದರೆ, ಹೊಸದೃಷ್ಟಿಗಳಿಂದ ನಾವು ಮತ್ತೆ ಗೀತೆ ಅಥವಾ ಶಂಕರಾಚಾರ್ಯರ ಗ್ರಂಥಗಳಿಗೆ ಹೋಗಿ ನಿಜವಾದ ಪ್ರಗತಿಯನ್ನು ಸಾಧಿಸುತ್ತೇವೆ. ಏಕೆಂದರೆ ಭಾರತೀಯ ಸಂಪ್ರದಾಯದಲ್ಲಿ ಪ್ರಗತಿ ಸರಳ ರೇಖೆಯಂತಿರದೆ ಸುರುಳಿಯಂತಿರುತ್ತದೆ. ಜ್ಞಾನದ ಅಚ್ಚುಗಂಬಕ್ಕೆ ಆದ ಮಾನವರ ಸ್ಪರ್ಶದ ಮೂಲಕ ಮುಂದುವರೆಯುತ್ತದೆ. ಶಾಶ್ವತತೆಯಲ್ಲಿ ಬೇರು ಹೊಂದಿದ್ದು ಕಾಲದಲ್ಲಿ ಹೂ ಬಿಡುವ ಘಟನೆಗಳು ಮತ್ತು ವ್ಯಕ್ತಿಗಳು 'ಪುನರಾವರ್ತನೆ'ಗಳಂತೆ ಕಾಣಿಸಬಹುದು, ಆದರೆ ಹಾಗೆಂದು ಅವನ್ನು ಕಡೆಗಣಿಸಲಾಗದು. ಮಾನವ ವ್ಯಕ್ತಿಗಳು ಪಡೆದ ಮತ್ತು ಪಡೆಯಬಲ್ಲ ಅಹಂಕಾರಾತೀತ ಸ್ಥಿತಿಯ ದಾಖಲೆಗಳು ಮತ್ತು ಜ್ಞಾಪಕಗಳು ಅವು ಎಂದು ಅವನ್ನು ಸ್ವಾಗತಿಸಬೇಕು. ಋಷಿಗಳು ಪಾರಮಾರ್ಥಿಕ ಹಾಗೂ ವ್ಯಾವಹಾರಿಕ ಎರಡೂ

ಜಗತ್ತುಗಳಲ್ಲಿ ಏಕಕಾಲದಲ್ಲಿ ವಾಸಿಸಲು ಸ್ವಾತಂತ್ರ್ಯವಿರುವ ಉಭಯಚರಿಗಳು. ಇಂಥ ಸ್ವಾತಂತ್ರ್ಯವನ್ನು ಮಹರ್ಷಿಗಳು ತಾವು ಸಂಪಾದಿಸಿ, ಕಾಲಾತೀತವಾದುದರ ಜೊತೆ ವ್ಯವಹರಿಸುವ ಈ ಸಂಪ್ರದಾಯವನ್ನು ಮುಂದುವರಿಸಲು ಮತ್ತು ಪುನರ್ವ್ಯವಸ್ಥೆಗೊಳಿಸಲು ಸ್ವತಃ ನಿರ್ಧರಿಸಿದರು. ಅನಾದಿಕಾಲದಿಂದ ಬಂದ ಈ ಸಂಪ್ರದಾಯದಲ್ಲಿ ವಿಧಿ ಅವರಿಗೆ ನಿರ್ಧರಿಸಿದ್ದ ಸ್ಥಾನ ಮತ್ತು ಪಾತ್ರಗಳನ್ನು ಅವರು ನಮ್ರವಾಗಿ ಒಪ್ಪಿಕೊಂಡಂತೆ ಕಾಣುತ್ತದೆ. ಅವಶ್ಯವೆನಿಸಿದೆಡೆ ಪ್ರಾಚೀನ ಗ್ರಂಥಗಳಿಗೆ ಕತ್ತರಿಪ್ರಯೋಗ ಮಾಡಿ, ಜಾತಿಮತಸ್ಥಾನಗಳ ಭೇದವಿಲ್ಲದೆ ಶ್ರದ್ಧಾಳುಗಳಾದ ಸಾಧನೆಯ ಸಮಕಾಲೀನ ಯೋಜನೆಯಲ್ಲಿ ಕುಶಲತೆಯಿಂದ ಅಳವಡಿಸುವ ಅಧಿಕಾರವನ್ನು ಮಾತ್ರ ನಿರ್ವಹಿಸಿದ್ದಾರೆ.

ಸಾಧು ನಿಶ್ಚಲದಾಸರ ದೊಡ್ಡ ಹಿಂದೀ ಗ್ರಂಥ *ವಿಚಾರಸಾಗರ* ದ ತಮಿಳು ಅನುವಾದ ಅರುಣಾಚಲ ಮುದಲಿಯಾರ್ ಎಂಬುವರಿಗೆ ಬಹಳ ದೀರ್ಘವೂ ಅಸ್ಪಷ್ಟವೂ ಆಗಿ ಕಂಡಿತು. ಇದನ್ನು ಅವರು ಮಹರ್ಷಿಗಳಿಗೆ ನಿವೇದಿಸಿದರು. ಮಹರ್ಷಿಗಳು ಆ ಪ್ರಾರ್ಥನೆಯನ್ನು ಮನ್ನಿಸಿ, 1909ರಷ್ಟು ಮೊದಲಿಗೇ, ಅದರಿಂದ ಭಾಗಗಳನ್ನು ಆಯ್ದು, ಕ್ರಮವಾಗಿ ಜೋಡಿಸಿ ಅವರಿಗೆ ಸಹಾಯ ಮಾಡಿದರು. *ವಿಚಾರಮಣಿಮಾಲೈ* ಎಂಬ ಹೆಸರಿನಲ್ಲಿ ಅದು ಅನೇಕಬಾರಿ ಮುದ್ರಿತವಾಗಿದೆ. ಅಡಕವಾದ ಈ ಪ್ರಶ್ನೋತ್ತರ ಸಂಗ್ರಹದಲ್ಲಿ ಅದ್ವೈತ ವಿಚಾರದ ಮತ್ತು ಅನುಭವದ ಎಲ್ಲ ಮೂಲಭೂತ ಪ್ರಶ್ನೆಗಳನ್ನೂ ಎತ್ತಿ, ಅವುಗಳಿಗೆ ಆಶ್ಚರ್ಯಕರವಾಗಿರುವಷ್ಟು ನಿಷ್ಕೃಷ್ಟವಾಗಿ ಸ್ಪಷ್ಟವಾಗಿ ಉತ್ತರಗಳನ್ನು ನೀಡಲಾಗಿದೆ.

ಸಂಸ್ಕೃತವನ್ನು ಅರಿಯದ ಭಕ್ತನೊಬ್ಬನಿಗೆ ಉಪಕಾರಮಾಡುವ ಸಲುವಾಗಿ ಅವರು ಶಂಕರರ '*ವಿವೇಕಚೂಡಾಮಣಿ*'ಯ ಸುದೀರ್ಘ ಸಾರಾಂಶವೊಂದನ್ನು ರಚಿಸಿದುದೇ ಅಲ್ಲದೆ ಅದಕ್ಕೊಂದು ಮುನ್ನುಡಿಯನ್ನೂ ಬರೆದರು. ಆ ಮುನ್ನುಡಿ ಸ್ವತಃ ಆ ಮಹಾಗುರುವಿನ ಉಪದೇಶದ ಒಂದು ಅತ್ಯುತ್ತಮ ನಿರೂಪಣೆಯಾಗಿದೆ. ಶಂಕರರ ಇತರ ಹಲವು ಪ್ರಕರಣ ಗ್ರಂಥಗಳನ್ನು ಮಹರ್ಷಿ ತಮಿಳಿಗೆ ಅನುವಾದಮಾಡಿದ್ದಾರೆ. ಉದಾಹರಣೆಗೆ *ದೃಗ್‌ದೃಶ್ಯ ವಿವೇಕ* ವನ್ನು ಗದ್ಯದಲ್ಲಿಯೂ, *ದಕ್ಷಿಣಾಮೂರ್ತಿಸ್ತೋತ್ರ* ಮತ್ತು *ಹಸ್ತಾಮಲಕ* ಇವನ್ನು ಪದ್ಯದಲ್ಲಿಯೂ ಅನುವಾದ ಮಾಡಿದ್ದಾರೆ. ಶಂಕರರ *ಆತ್ಮ ಬೋಧ*ದ ಇಡೀ 68 ಶ್ಲೋಕಗಳನ್ನು ತಮಿಳು ವೆನ್ಬಗಳಲ್ಲಿ ಅನುವಾದ ಮಾಡುವ ಕೆಲಸವನ್ನು 1948ರಲ್ಲಿ ಪ್ರಾರಂಭಿಸಿ, ಅದೇ ವರ್ಷದಲ್ಲಿ ಅದನ್ನು ಮುಗಿಸಿದರು. ಅವರ ವಿರೂಪಾಕ್ಷ ದಿನಗಳಿಂದಲೂ ಈ ಪುಟ್ಟ ಶ್ರೇಷ್ಠ ಕೃತಿ ಅವರಿಗೆ ಬಹಳ ಪ್ರಿಯವಾಗಿತ್ತು. ತಮಿಳು ಪದ್ಯಗಳಲ್ಲಿ ಬಹಳ ಹಿಂಜಿದ ಅದರ ಭಾವಾನುವಾದವೊಂದನ್ನು ಅವರು ಕಂಡಾಗ, ಹೆಚ್ಚು ಬಿಗಿಯಾದ ಮತ್ತು ಮೂಲಕ್ಕೆ ಹೆಚ್ಚು ಯಥಾವತ್ತಾದ ಅದರ ಅನುವಾದವನ್ನು ರಚಿಸಲು ಅವರಿಗೆ ಪ್ರೇರಣೆ ಒದಗಿತು. ವಾಸ್ತವದಲ್ಲಿ, ''ಇಂದು ತಮಿಳಿನಲ್ಲಿ ನುಡಿಯುತ್ತಿರುವವನು ಅಂದು ಶಂಕರನಾಗಿ ಆತ್ಮಜ್ಞಾನವನ್ನು ಉಪದೇಶಿಸಿದ ಆತ್ಮನೇ ವಿನಾ ಬೇರೆಯವನಲ್ಲ'' ಎಂದು ಇದರ ಪೀಠಿಕೆಯ ವೆನ್ಬವೊಂದು ಘೋಷಿಸುತ್ತದೆ. ಮುಮುಕ್ಷುವಿನ ನಿಜವಾದ ಸಂದೇಹಗಳನ್ನು ನಿವಾರಿಸುವಂತೆ ಕಲ್ಪಿಸಿದ ದೃಷ್ಟಾಂತಗಳ ಮತ್ತು ವಾದಗಳ ಸರಣಿಯ ಮೂಲಕ ಈ ಕವನವು ಬೇಯಿಸಿದ ಆಹಾರವನ್ನು ತಿನ್ನುವ ಮತ್ತು ಅದಕ್ಕಾಗಿ ಬೆಂಕಿಯನ್ನು ಅಪೇಕ್ಷಿಸುವ ಮಾನವ ಜೀವಿಗಳಿಗೆ ಆಧ್ಯಾತ್ಮಿಕ ಹಸಿವನ್ನು ತೃಪ್ತಿಪಡಿಸಲು ಜ್ಞಾನದ ಅಗ್ನಿಯೊಂದೇ ನೇರವಾದ ಮತ್ತು

ಅನಿವಾರ್ಯದ ಸಾಧನ ಎಂಬುದನ್ನು ಮತ್ತು ಇತರ ಎಲ್ಲ ಸಾಧನಗಳು ನಿಜವಾದ ಮಾನವ ಜೀವನ ಆನಂದಾನುಭವದಲ್ಲಿ ಬಾಳುವ ಜೀವನ, ಪ್ರಾರಂಭವಾಗುವ ಈ ಹಂತಕ್ಕೆ ಶೀಘ್ರವಾಗಿ ನಮ್ಮನ್ನು ಒಯ್ಯಲು ರಚಿತವಾದವು ಎಂಬುದನ್ನು ನಮಗೆ ಮನದಟ್ಟು ಮಾಡಿಕೊಡುತ್ತದೆ.

ಆಗಮಗಳಿಂದ ಅನುವಾದಕ್ಕಾಗಿ ಮಹರ್ಷಿ ಶಿವನು ತನ್ನ ಹೆಂಡತಿ ಪಾರ್ವತಿಗೆ ಮತ್ತು ತನ್ನ ಮಗ ಗುಹನಿಗೆ ನೀಡಿದ ಉಪದೇಶದಲ್ಲಿ ಅತ್ಯಂತ ಉಪಯುಕ್ತ ಭಾಗಗಳನ್ನು ಕಂಡರು. ಏಕೆಂದರೆ ಇಲ್ಲಿನ ವಿಷಯ ಜ್ಞಾನಮಾರ್ಗ ಮತ್ತು ಶಿಷ್ಯರು ಸಂಪೂರ್ಣ ಸಮರ್ಥರು ಹಾಗೂ ಬಹಳ ಪ್ರಿಯರಾದವರು. ಆದ್ದರಿಂದ ಇಲ್ಲಿ ಕೇವಲ ಪ್ರಾರಂಭಿಕ ಮೌಲ್ಯವಿರುವ ನಿಯಮ ನಿಷ್ಠೆಗಳನ್ನು ಮತ್ತು ಪೂಜಾವಿಧಾನಗಳನ್ನು ಸಂಪೂರ್ಣವಾಗಿ ತ್ಯಜಿಸಲಾಗಿದೆ:

''ಈ ಯೋಜನೆಯಲ್ಲಿ ದೇವರುಗಳು, ವೇದಗಳು, ಯಜ್ಞಯಾಗಾದಿಗಳು ಅಥವಾ ದಾನಗಳು ಇವು ಯಾವುದಕ್ಕೂ ಸ್ಥಾನವಿಲ್ಲ. ವೇದಪುರಾಣಾದಿಗಳೆಲ್ಲವುಗಳಿಂದ ವಿಮುಖರಾಗಿ ಮತ್ತು ಆತ್ಮದರ್ಶನದ ಶುದ್ಧಯೋಗದಲ್ಲಿ ನಿರತರರಾಗಿ... ಪವಾಡಗಳನ್ನು ನಡೆಸುವ ಶಕ್ತಿಯನ್ನು ಅಥವಾ ರಕ್ಷಾಯಂತ್ರಗಳನ್ನು ನಿಮಗೆ ನೀಡಿದಾಗ ಸಹ ಅವನ್ನು ಸ್ವೀಕರಿಸಬೇಡಿ. ಪರಮಮುಕ್ತಿ ಆ ದಿಸೆಯಲ್ಲಿರುವುದಿಲ್ಲ. ಅನಂತ ಚೈತನ್ಯ ವಿನಾ ಅದು ಬೇರೆಲ್ಲಿಯೂ ಇರುವುದಿಲ್ಲ.''

ಪ್ರಾಚೀನ ವೇದಾಂತಗ್ರಂಥವಾದ ಭಗವದ್ಗೀತೆಯಿಂದ ಆಯ್ದ 42 ಶ್ಲೋಕಗಳ ಸಂಗ್ರಹ *ಗೀತಾಸಾರ.* ಗೀತೆಯ ಸಾರ್ವಕಾಲಿಕ ಸಾರವನ್ನು ಭಟ್ಟಿಯಿಳಿಸಿ, ಆಧುನಿಕ ಮಾನವನಿಗೆ ಅತ್ಯುತ್ತಮವಾಗಿ ಗ್ರಾಹ್ಯವಾಗುವ ಉಪಯುಕ್ತವಾದ ಹಾಗೂ ಆಕರ್ಷಕ ರೀತಿಯಲ್ಲಿ ಅದನ್ನು ನಿರೂಪಿಸುವಲ್ಲಿ ಮಹರ್ಷಿಗಳ ಪೂರ್ಣ ಕುಶಲತೆಯನ್ನು ಅದರಲ್ಲಿ ನಾವು ಕಾಣುತ್ತೇವೆ. ಪಂಡಿತರು, ಕಾವ್ಯಪ್ರೇಮಿಗಳು ಮತ್ತು ಮತದ ಇತಿಹಾಸಕಾರರು ಸಂಪೂರ್ಣವಾಗಿ ಗೀತೆಯನ್ನು ಅಧ್ಯಯನ ಮಾಡಬೇಕು. ಆದರೆ ಜನಸಾಮಾನ್ಯರು ಶುದ್ಧ ಚೈತನ್ಯದ ಅಂತರ ಜಗತ್ತಿನೊಳಕ್ಕೆ ಮತ್ತು ಸಾಪೇಕ್ಷ ಚೈತನ್ಯದ ಬಾಹ್ಯಜಗತ್ತಿನ ಮೂಲಕ ತಾವು ಕೈಗೊಳ್ಳುವ ನಿಜವಾದ ಆಧ್ಯಾತ್ಮಿಕ ಪ್ರವಾಸದಲ್ಲಿ ಅದನ್ನು ಒಂದು ಮಾರ್ಗದರ್ಶಿ ಮತ್ತು ಕೈಪಿಡಿಯಾಗಿ ಬಳಸುವುದು ಶ್ರೇಷ್ಠ. ಸಾಧಕರು ಆತ್ಮೋನ್ನತಿಯಲ್ಲಿ ತೊಡಗಿರುವ ಪ್ರಾಯೋಗಿಕ ಜನ. ಗೀತೆಯ 18 ಅಧ್ಯಾಯಗಳನ್ನು ಉರುಹಚ್ಚಿ, ಅವನ್ನು ಉದ್ದಕ್ಕೆ ಪಠಿಸುವುದಕ್ಕಿಂತ ಅದರ ಯಾವ ಭಾಗಗಳನ್ನು ನೇರವಾಗಿ ಆಚರಣೆಗೆ ತರಬಹುದು ಎಂಬುದನ್ನು ಅರಿತುಕೊಳ್ಳುವುದು ಬಹಳ ಮುಖ್ಯವಾದುದು. ಶ್ರೀಕೃಷ್ಣನ ಉಪದೇಶ ಮತ್ತು ಸಖ್ಯ ಇವು ನಮ್ಮ ವಾಸ್ತವಿಕ ಪ್ರತ್ಯಕ್ಷ ನಡವಳಿಕೆಗೆ ಆಧಾರವಾಗಬೇಕು ಎನ್ನುವುದರಲ್ಲಿ ರಮಣಮಹರ್ಷಿ ಮತ್ತು ಮಹಾತ್ಮಾ ಗಾಂಧೀ ಒಂದೇ ಅಭಿಪ್ರಾಯ ಹೊಂದಿದ್ದಾರೆ. ತಮ್ಮ ಜೊತೆಯಲ್ಲಿ ಬಂದಿಯಾಗಿದ್ದ ತಮ್ಮ ಮಗ ರಾಮದಾಸನಿಗಾಗಿ ಗಾಂಧೀ 1932ರಲ್ಲಿ ಯೆರವಾಡ ಜೈಲಿನಲ್ಲಿ *ಗೀತಾ ಪ್ರವೇಶಿಕಾ* ವನ್ನು ರಚಿಸಿದರು. ಅದೂ 42 ಶ್ಲೋಕಗಳನ್ನು ಒಳಗೊಂಡಿರುವುದು ಒಂದು ವಿಚಿತ್ರ ಸಂಘಟನೆ. ಮಹಾತ್ಮರ ಮತ್ತು ಮಹರ್ಷಿಗಳ ಸಂಗ್ರಹಗಳಲ್ಲಿ ಒಂಬತ್ತು ಶ್ಲೋಕಗಳು ಸಮಾನವಾಗಿವೆ. ಅವು VI.29 IX. 22, X. 10,11, XI. 54, XII. 15, XIII, 27, XVIII 61,62. ಅವೆಲ್ಲವೂ ಮಹತ್ವಪೂರ್ಣವಾದವು. ಗಾಂಧೀಜಿಯ ಕೊನೆಯ ಹತ್ತು ಶ್ಲೋಕಗಳನ್ನು ಹನ್ನೊಂದನೆಯ ಅಧ್ಯಾಯದಲ್ಲಿ ಭಗವಂತನನ್ನು ಕುರಿತ ಅರ್ಜುನನ ಸ್ತೋತ್ರದಿಂದ

ಆರಿಸಲಾಗಿದೆ. ಅವುಗಳ ಉದ್ದೇಶ ಭಕ್ತಿಶ್ರದ್ಧೆಗಳನ್ನು ಬಲಪಡಿಸುವುದು, ನಾರಾಯಣನ ಬಗ್ಗೆ ಭಕ್ತಿಯನ್ನು ತಾಳಿ ಅದನ್ನು ತೋರಿಸುವುದರ ಮತ್ತು ಇಲ್ಲಿಯೇ, ಇಂದೇ, ನಮ್ಮ ದೇಶದಲ್ಲಿ ಮತ್ತು ನಮ್ಮ ಕಾಲದಲ್ಲಿ ಕಾಣಿಸಿಕೊಳ್ಳುವ ಅವನ ವಿವಿಧ ರೂಪಗಳಲ್ಲಿ ಅವನನ್ನು ಸೇವೆ ಮಾಡುವುದರ ಅಗತ್ಯವನ್ನು ದೃಢಪಡಿಸುವುದು ಆಗಿತ್ತು. ಆದರೆ ಮಹರ್ಷಿಗಳ *ಗೀತಾಸಾರ*ದಲ್ಲಿ ಪ್ರಾಧಾನ್ಯ ನೀಡಿರುವುದು ಜ್ಞಾನ ಮತ್ತು ಭಕ್ತಿಗಳಿಗೆ. ಸಾಮಾಜಿಕ ಜವಾಬ್ದಾರಿ ಮತ್ತು ಜೀವಂತ ವಸ್ತುಗಳ ಸೇವೆ ಉನ್ನತ ಜ್ಞಾನದ ಕಾರಣವಾಗಿರುವುದಕ್ಕಿಂತ ಅದರ ಪರಿಣಾಮಗಳಾಗಿವೆ. ಶ್ರೀಕೃಷ್ಣನು, ಸೋಪಾಧಿಕ ಹಾಗೂ ನಿರುಪಾಧಿಕವಾದ, ವಿಶ್ವವ್ಯಾಪಿಯಾದ ಶಾಶ್ವತ ಚೈತನ್ಯ ಸ್ವರೂಪ. ಆದ್ದರಿಂದಲೇ ಶ್ರೀಕೃಷ್ಣನು ಎಲ್ಲೆಲ್ಲಿಯೂ ಇದ್ದಾನೆ ಮತ್ತು ಎಲ್ಲವೂ ಆಗಿದ್ದಾನೆ. ಅರ್ಜುನ ಮತ್ತು ಜಗತ್ತುಗಳಿಗೆ ಸ್ವತಂತ್ರವಾದ ಯಾವ ಅಸ್ತಿತ್ವವೂ ಇಲ್ಲ.

ಆದರೆ ಜ್ಞಾನ, ಭಕ್ತಿ ಹಾಗೂ ಕರ್ಮಗಳ ಅಂಶಗಳಿಗೆ ನೀಡಿರುವ ಪ್ರಾಮುಖ್ಯದಲ್ಲಿ ಪರಸ್ಪರ ಭಿನ್ನವಾಗಿದ್ದರೂ, *ಗೀತಾಸಾರ* ಮತ್ತು *ಗೀತಾಪ್ರವೇಶಿಕಾ* ಎರಡೂ ಗೀತೆಯ ಸಮಕಾಲೀನ ಪ್ರಸಕ್ತತೆಯನ್ನು ತೋರಿಸುತ್ತವೆ. ನೈಸರ್ಗಿಕ ಪ್ರಕೃತಿ, ಮಾನವ ಪ್ರಕೃತಿ, ಸಾಮಾಜಿಕ ವ್ಯವಸ್ಥೆ ಮತ್ತು ಮರಣಾನಂತರದ ಬದುಕುಗಳ ವಿಷಯದಲ್ಲಿ ಒಂದಾನೊಂದು ಕಾಲದಲ್ಲಿ ಪ್ರಚಲಿತವಾಗಿದ್ದ ಸಿದ್ಧಾಂತಗಳಂತಹ ಅಮುಖ್ಯವಾದ ಮತ್ತು ಆಗಂತುಕವಾದ ಅನಾವಶ್ಯಕ ವಿಷಯಗಳನ್ನು ಕತ್ತರಿಸಿ ಹಾಕಿ ಅದರ ಗಾತ್ರವನ್ನು ನಿರ್ದಾಕ್ಷಿಣ್ಯವಾಗಿ ಇಳಿಸುವಲ್ಲಿ ಅವರಿಬ್ಬರದೂ ಒಂದೇ ಅಭಿಪ್ರಾಯವಾಗಿದೆ. ಸುವ್ಯವಸ್ಥಿತವಾದ ಸುವಿ- ಚಾರಿತವಾದ ಬದುಕಿನ ಎಲ್ಲ ಪರಿಸ್ಥಿತಿಗಳ ಮತ್ತು ಅನುಭವಗಳ ಮೂಲಕ ವ್ಯಕ್ತಿಶ್ರೇಯಸ್ಸು ಮತ್ತು ಮಾನವ ಕಲ್ಯಾಣಗಳಿಗಾಗಿ ಕೂಡಲೇ ಕೈಗೊಳ್ಳಬೇಕಾದ ವೈಯುಕ್ತಿಕ ಅನ್ವೇಷಣೆಯ ಮೇಲೆ ಇಬ್ಬರೂ ಗಮನವನ್ನು ಕೇಂದ್ರಿಕರಿಸಿದರು. ಗೀತೆಯನ್ನು ಇಬ್ಬರೂ ಭಕ್ತಿಯಿಂದ ಅಧ್ಯಯನ ಮಾಡಬೇಕಾದ ಒಂದು ಶ್ರುತಿಗ್ರಂಥದಂತೆ ಅಥವಾ ರಸಾಸ್ವಾದನೆಗಾಗಿ ಒಂದು ಕಾವ್ಯದಂತೆ ಕಾಣದೆ, ಅದನ್ನು ಆಧ್ಯಾತ್ಮಿಕ ಪ್ರಯತ್ನದಲ್ಲಿ ಒಂದು ಪ್ರಾಯೋಗಿಕ ಕ್ರಮವನ್ನಾಗಿ, ಸ್ವಾರ್ಥರಹಿತವಾಗಿ ಕರ್ಮ, ತನ್ನನ್ನೇ ಮರೆತುಬಿಡುವ ಪ್ರೀತಿ ಮತ್ತು ನಾನು ಎಂಬ ಭಾವನೆಯನ್ನು ಮೀರುವ ಜ್ಞಾನ ಇವನ್ನು ಸಮನ್ವಯಗೊಳಿಸಿದ ನಿಷ್ಕೃಷ್ಟವಾದ ಒಂದು ವಾಸ್ತವಿಕ ಸಾಧನವನ್ನಾಗಿ ಕಾಣುತ್ತಾರೆ.

*ಗೀತಾಸಾರ* (ಅದರಲ್ಲೂ ಸೂಕ್ಷ್ಮತೆಯಿಂದ ಅಣಿಗೊಳಿಸಿದ ಅದರ ತಮಿಳು ರೂಪಾಂತರ) ಒಂದು ಸ್ವಯಂಪೂರ್ಣ ಕಾವ್ಯವಾಗಿದೆ. ತನ್ನದೇ ಆದ ಜೈವಿಕ ಏಕತೆ ಮತ್ತು ಸಮಷ್ಟಿ ಶಕ್ತಿಗಳಿಂದ ಕೂಡಿದೆ. ತೀವ್ರಗತಿಯ ಅದರ ಪ್ರಬಲ ಪ್ರವಾಹದಲ್ಲಿ, ಗೀತಾಮಾತೆಯ ಹೃದಯ, ಅವಳ ವಿಶ್ವಸಂದೇಶದ ನಿಗೂಢ ರಹಸ್ಯ ಗಟ್ಟಿಯಾಗಿ, ಸ್ಫುಟವಾಗಿ ಕೇಳಿಬರುತ್ತದೆ. ಜೀವಾತ್ಮ ಪರಮಾತ್ಮರ ನಡುವೆ ಮುಕ್ತಿಯ ಸಕಲ ಸುಖಗಳ ಮತ್ತು ಕರ್ತವ್ಯದ ಎಲ್ಲ ಹೊರೆಗಳ ಪರಸ್ಪರ ವಿನಿಮಯವನ್ನು, ಭಗವಂತನಿಂದ ಆಧ್ಯಾತ್ಮಿಕ ಹೃದಯವನ್ನು ತಂದು ಮಾನವನಲ್ಲಿ ಅದನ್ನು ನೆಡುವ ಕ್ರಿಯೆಯನ್ನು ಪ್ರಕಟವಾಗಿ ಕ್ರಮಬದ್ಧವಾಗಿ ಮಾಡಲಾಗಿದೆ. ಮಂಗಳಶ್ಲೋಕದಿಂದಲೇ ಈ ಕ್ರಮ ಮೊದಲಾಗುತ್ತದೆ:

ಪಾರ್ಥನ ರಥದಲ್ಲಿ ಕುಳಿತು ಒಳ್ಳೆಯ ಮಾತುಗಳಿಂದ

ಅವನ ಶೋಕವನ್ನು ಹೋಗಲಾಡಿಸಿದ ಆ ದಯಾಮೂರ್ತಿ
ನಮ್ಮನ್ನು ಕಾಪಾಡಲಿ.

ಎಲ್ಲ ವ್ಯಕ್ತಿಗಳಲ್ಲಿಯೂ ಪೂರ್ಣಪುರುಷನಾಗಿರುವ, ಪರಮಾತ್ಮ ಶ್ರೀಕೃಷ್ಣನು ಈ ಜಗತ್ತಿಗೆ ಅತೀತವಾಗಿರುವ, ಅದನ್ನು ಲಯಗೊಳಿಸುವ ಹಾಗೂ ಅದನ್ನು ವ್ಯಾಪಿಸಿರುವ ಮತ್ತು ನಿಯಂತ್ರಿಸಿರುವ ಚೈತನ್ಯವೇ. ಇಲ್ಲಿ ಅವನು ಪ್ರೇಮದ ಶಕ್ತಿಯಾಗಿರುವ ಅನುಗ್ರಹ ಮೂರ್ತಿಯಾಗಿ ಅಭಿವ್ಯಕ್ತವಾಗಿದ್ದಾನೆ ಮತ್ತು ಸಕ್ರಿಯನಾಗಿದ್ದಾನೆ. ಈ ಶಕ್ತಿ ನಮ್ಮ ಜೀವಕ್ಕೆ ಅದರ ಪೂರ್ಣತೆಯನ್ನು ಮರಳಿ ಗಳಿಸಿಕೊಟ್ಟು, ಸತ್ಯಕ್ಕೂ ನಮಗೂ ಇರುವ ಪ್ರತ್ಯೇಕತೆಯನ್ನು ಕೊನೆಗಾಣಿಸಿ, ಬೆಳಕು ಕತ್ತಲೆಯನ್ನು ಹೋಗಲಾಡಿಸುವಂತೆ, ತಮ್ಮ ದುಃಖವನ್ನು ನಿವಾರಿಸುತ್ತದೆ.

*ಗೀತಾಸಾರ*ದಲ್ಲಿ ನಾವು ನಮ್ಮ ಒಳಗಿರುವ ಎರಡು 'ನಾನು'ಗಳ ಮಾಯೆಯ ಈ ದಡದಲ್ಲಿರುವ "ಪರಿಚಿತ ನಾನು" ಮತ್ತು ಅದರ ಎರಡೂ ದಡದಲ್ಲಿರುವ 'ರಹಸ್ಯ'-ಪರಸ್ಪರ ಸಮಾಗಮವನ್ನು ಅಭಿನಯಿಸುತ್ತೇವೆ. ಇಲ್ಲಿಯ ಕಥಾವಸ್ತು ಮತ್ತು ಉದ್ದೇಶ ರಾಸಲೀಲೆಯಲ್ಲಿ ಇರುವಂಥದೇ. ರಸವನ್ನು (ಆನಂದದ ಸವಿಯನ್ನು) ಅರಿತಿರುವ ಗೋಪಿಯರಿಗೆ ಪ್ರೇಮದ ಸಾಕಾರಮೂರ್ತಿಯನ್ನು ನೋಡುವುದಷ್ಟೇ ಸಾಕು, ಅವರು ಪ್ರೇಮದ ಒಡೆಯನ ಸಂಗಡ ತಾದಾತ್ಮ್ಯ ಪಡೆದು ಆನಂದಿಸಬಲ್ಲರು. ಆದರೆ (ಅರ್ಜುನನಂತೆ ಕ್ರಿಯೆ ಮತ್ತು ತರ್ಕಗಳಿಗೆ ಅಂಟಿಕೊಂಡಿರುವ) ನಾವು ಅಷ್ಟು ಯೋಗ್ಯ ಶಿಷ್ಯರಲ್ಲ ಮತ್ತು ನಮಗೆ ನೀಡಿರುವ ಈ ತಾದಾತ್ಮ್ಯವನ್ನು ವಿರೋಧಿಸುತ್ತೇವೆ. ಬೆಳಕಿನ ಒಡೆಯನಂತೆ ಪ್ರೇಮವು ರಾಮನಂತೆ ಯಾವುದಾದರೂ ಒಂದು ಕಾರ್ಯವನ್ನು ಅಥವಾ ಕೃಷ್ಣನಂತೆ ಯಾವುದಾದರೂ ಒಂದು ಉಪದೇಶವನ್ನು ಮಾಡಬೇಕು. ಅದು ಸಂಪೂರ್ಣವಾಗಿ ತನ್ನ ಆಕರ್ಷಕ ಸೌಂದರ್ಯವನ್ನು ಅವಲಂಬಿಸಿ ಇರಲು ಆಗುವುದಿಲ್ಲ. ಕೃಷ್ಣನ ಈ ಮುಖ್ಯ ಉಪದೇಶವೇ *ಗೀತಾಸಾರ.* ಅಂತೆಯೇ, ಇನ್ನೊಂದು ಕತೆಯಲ್ಲಿನ ಶಿವನ ಉಪದೇಶವೇ *ಉಪದೇಶಸಾರ.*

ನಿಜವಾದ ಮಾನವಜೀವನ ಒಂದು ನಿರಂತರ ಕಲಿಕೆ, ಅರಿಯುವುದರ ಬೆಳವಣಿಗೆ, ಚೈತನ್ಯ ರೂಪವಾಗಿರುವ ಸತ್‌ನಲ್ಲಿ ಸಮಾಪ್ತವಾಗುವ ಒಂದು ವಿಕಸನಕ್ರಿಯೆ. ಮನಸ್ಸು, ದೇಹ ಹಾಗೂ ಬಾಹ್ಯ ಜಗತ್ತನ್ನು ಅರಿಯುವ ಕ್ಷೇತ್ರಜ್ಞನನ್ನು ನಮ್ಮೊಳಗೆ ಮೊದಲು ಅರಸಿ ಆನಂದ ರೂಪನನ್ನಾಗಿ ಅವನನ್ನು ಕಂಡುಕೊಳ್ಳಬೇಕು (ಶ್ಲೋಕಗಳು 2,3=XII 1, 2). ಕ್ಷೇತ್ರಜ್ಞನನ್ನು ಕ್ಷೇತ್ರದಿಂದ ವಿಂಗಡಿಸಿದಾಗ, ಮನಸ್ಸು ಕ್ಷೇತ್ರದ ವರ್ಗದಲ್ಲಿ ಸೇರುತ್ತದೆ ಮತ್ತು ಅದನ್ನು ಅರಿಯುವ ಆದರೆ ಅರಿಯಲಾಗದ ಮೇಲಿನ ಶಕ್ತಿಯೊಂದಕ್ಕೆ ಶರಣಾಗಬೇಕಾಗುತ್ತದೆ.

ಇದೇ ಶುದ್ಧವಾದ 'ನಾನು', ಚೈತನ್ಯರೂಪವಾದ ಸತ್, ಎಲ್ಲರಲ್ಲೂ ಆನಂದರೂಪದಲ್ಲಿರುವ ಪುರುಷ. ಮಹರ್ಷಿಗಳ ಪ್ರಕಾರ 4ನೇ (=X 20) ಶ್ಲೋಕವು ಆಧ್ಯಾತ್ಮಿಕ ಜ್ಞಾನವೆಲ್ಲದರ ಸಾರಸರ್ವಸ್ವವಾಗಿದೆ :

ಎಲ್ಲ ಪ್ರಾಣಿಗಳ ಹೃದಯದಲ್ಲಿರುವ ಆತ್ಮನು ನಾನೇ. ಎಲ್ಲ ಪ್ರಾಣಗಳ ಮೊದಲು, ಮಧ್ಯ ಮತ್ತು ಕೊನೆಯೂ ನಾನೇ.

'ನಾನು' ಎಂಬ ಈ ಅರಿವೇ ನಮ್ಮನ್ನು ಪುರುಷೋತ್ತಮನಲ್ಲಿಗೆ ಕೊಂಡೊಯ್ಯುವ ಸ್ಪಷ್ಟ ವಾಸನೆ. ಎಲ್ಲ ಪ್ರಾಣಿಗಳಲ್ಲಿ ಇರುವ ಪುರುಷನು ಇವನೇ. ನಾವು ಅವನನ್ನು ಕೃಷ್ಣ,

ಬುದ್ಧ, ಏಸು ಅಥವಾ ಆತ್ಮ ಎಂದೆಲ್ಲಾ ಕರೆಯುತ್ತೇವೆ.

5ರಿಂದ 9ರವರೆಗಿನ (=II 27, 20, 24, 17, 16) ಶ್ಲೋಕಗಳು ನಶ್ವರವಾದ ದೇಹ ಮತ್ತು ಅವಿನಾಶಿಯಾದ ಚೈತನ್ಯ ಇವುಗಳಿಗಿರುವ ವ್ಯತ್ಯಾಸವನ್ನು ಒತ್ತಿ ಹೇಳುತ್ತವೆ. ಅನ್ವೇಷಕನು ತನ್ನನ್ನು ದೇಹದೊಡನೆ ಏಕೀಕರಿಸಿಕೊಳ್ಳದೆ ಚೈತನ್ಯದೊಡನೆ ಏಕೀಕರಿಸಿ - ಕೊಳ್ಳಬೇಕು. ಚೈತನ್ಯದೊಡನೆ ನಮ್ಮ ನಿಜವಾದ ಐಕ್ಯವನ್ನು ಕಂಡುಕೊಳ್ಳುವಲ್ಲಿ ಅನಿವಾರ್ಯವಾದ ಮೊದಲನೆ ಹೆಜ್ಜೆ ದೇಹವು ಅಳಿಯುತ್ತದೆ ಎಂಬ ಸಾಮಾನ್ಯ ಸಂಗತಿಯನ್ನು ಎದುರಿಸಿ, ಒಪ್ಪಿ, ಅದನ್ನು ಗೆಲ್ಲುವುದು. ಇದನ್ನು ಮಾಡುವುದೆಂದರೆ ಸೂರ್ಯನ ಕಡೆಗೆ ನಾವು ತಿರುಗಿ ನೆರಳು ನಮ್ಮನ್ನು ಹಿಂಬಾಲಿಸುವಂತೆ ಮಾಡುವುದು. ಮನಸ್ಸು ಮತ್ತು ಜಗತ್ತು, ಜ್ಞಾತೃ ಮತ್ತು ಜ್ಞೇಯ ವಸ್ತುಗಳು ಅನಾತ್ಮವಾದ ಕ್ಷೇತ್ರ. ಚೈತನ್ಯ, ಆತ್ಮ ಅದನ್ನು ಗ್ರಹಿಸುತ್ತದೆ ಮತ್ತು ಮೀರಿ ಹೋಗುತ್ತದೆ.

10ರಿಂದ 13 ರ ವರೆಗಿನ (= XIII. 32, XV. 6, VIII. 21 ಮತ್ತು XV.5) ನಾಲ್ಕು ಶ್ಲೋಕಗಳು ಚೈತನ್ಯದ ಮಹತ್ವ ಮತ್ತು ವೈಭವ, ವ್ಯಾಪಕತ್ವ ಮತ್ತು ಶಾಶ್ವತತ್ವ, ಸಾರ್ವಲೌಕಿಕ ಪ್ರತ್ಯಕ್ಷತ್ವ ಮತ್ತು ಕಲ್ಪಿತ ಅಗ್ರಾಹ್ಯತ್ವ ಇವನ್ನು ಸಾರುತ್ತವೆ. ಈ ಚೈತನ್ಯವೇ ಎಲ್ಲ ಜೀವಂತ ವಸ್ತುಗಳಿಗೂ ಸಮಾನವಾಗಿರುವ ಅಸ್ತಿತ್ವ ಹಾಗೂ ಪರಮಪದ. ದೇವರನ್ನೂ ಮನುಷ್ಯನನ್ನೂ ಒಟ್ಟಿಗೆ ಬಿಗಿದಿರುವ ಕಟ್ಟೂ ಅದೆ.

ಈ ಶ್ಲೋಕಗಳೊಂದಿಗೆ ಸೈದ್ಧಾಂತಿಕ ಉಪದೇಶ, ಅಂದರೆ ವಿಶುದ್ಧಿಗೊಳಿಸುವ ಕರ್ಮ, ಸ್ವಾರ್ಥವನ್ನು ಮರೆತಿರುವ ಭಕ್ತಿ ಮತ್ತು ಆಂತರಿಕವಾದ ಹಾಗೂ ಬಾಹ್ಯವಾದ ಜ್ಞಾನದ ಶೋಧನೆ ಇವುಗಳ ಮೂಲಕ ನಾವು ಕಂಡುಕೊಳ್ಳುವ ಸತ್ಯದ ಬೌದ್ಧಿಕ ಪ್ರತಿಪಾದನೆ ಮುಕ್ತಾಯವಾಗುತ್ತದೆ. ಮುಂದಿನ ಹಾದಿಯನ್ನು ಸ್ಪಷ್ಟವಾಗಿ ತೋರಿಸಿ, ಅದರ ಮೇಲೆ ಉಜ್ವಲವಾದ ಬೆಳಕು ಹಾಯಿಸಿದ ತರುವಾಯ, ಗುರುವು ಈಗ ನಮಗೆ ಚಾಲಕಚಕ್ರದ ನೆನಪು ಕೊಡುತ್ತಾನೆ. 14ನೆ ಶ್ಲೋಕ (= XVI. 23) ಬಹಳ ಮುಖ್ಯವಾದುದು ಮತ್ತು ವಿವಾದಾಸ್ಪದವಾದುದು. ಅದು ಪ್ರಾಚೀನ ಜ್ಞಾನದ ಭಂಡಾರವಾಗಿರುವ ಶಾಸ್ತ್ರವನ್ನು ಕುರಿತಿದೆ. ಸಾಮಾಜಿಕ ವಸ್ತು ಸ್ಥಿತಿಗಳಿಗೆ ಸಂಬಂಧವಿಲ್ಲದ, ನಮ್ಮದೇ ಆದ ಆಂತರಿಕ ಖಾಸಗಿ ಪ್ರಪಂಚವೊಂದರೊಳಗೆ ಆಶ್ರಯಪಡೆಯುವ ಸ್ವೇಚ್ಛೆಯ ಹಾಗೂ ಅಪಾಯಕರವಾದ 'ವೈಯುಕ್ತಿಕ ಕ್ರಾಂತಿ'ಯ ವಿರುದ್ಧ ಅದು ನಿಷ್ಠುರವಾದ ಎಚ್ಚರಿಕೆ ನೀಡುತ್ತದೆ. ಹ್ರಸ್ವವಾದ ಈ ಸುವ್ಯವಸ್ಥಿತ ಶಿಕ್ಷಣ ಕ್ರಮದಲ್ಲಿ ನೀತಿಯನ್ನು ಕುರಿತಿರುವುದು ಇದೊಂದೇ ಶ್ಲೋಕ: ''ಶಾಸ್ತ್ರವನ್ನು ತೊರೆದು, ಕಾಮನೆಯಿಂದ ಪ್ರಚೋದಿತನಾಗಿ ಯಾವನು ಅಧೋಗತಿಯನ್ನು ಹಿಡಿಯುತ್ತಾನೆಯೋ ಅವನಿಗೆ ಸಿದ್ಧಿಯಾಗಲಿ, ಸುಖವಾಗಲಿ, ಪರಾಗತಿಯಾಗಲಿ ದೊರೆಯದು.'' ದೈವೀ ಮತ್ತು ಆಸುರೀ ಗುಣಗಳನ್ನು ಕುರಿತಿರುವ 16ನೆ ಅಧ್ಯಾಯದಿಂದ ತೆಗೆದು ಕೊಂಡಿರುವ ಶ್ಲೋಕ ಇದೊಂದೇ. ಗಾಂಧೀಜಿ ಕೂಡಾ ಈ ಅಧ್ಯಾಯದಿಂದ ಒಂದು ಶ್ಲೋಕವನ್ನೂ ತೆಗೆದುಕೊಂಡಿಲ್ಲ. ಈ ಅಧ್ಯಾಯ ಪೂರ್ತಿ ಆಧ್ಯಾತ್ಮಿಕವಾಗಿದೆ. ಆದ್ದರಿಂದ ಚೆನ್ನಾಗಿ ಬೆಳೆದ, ಸರ್ವಗ್ರಾಸಿಯಾದ, ಇತರರಲ್ಲಿ ಅಸುರರನ್ನೂ ತನ್ನಲ್ಲಿ ದೇವರನ್ನೂ ಕಾಣಲು ಸದಾ ಸಿದ್ಧವಾಗಿರುವ ಅಹಂಭಾವದಿಂದ ಕೂಡಿದ ಆಧುನಿಕ ಮಾನವನಿಗೆ ಇದರ ಓದು ಅಪಾಯದಿಂದ ಕೂಡಿದೆ. ಸಾಧಕನು ಅಸುರಭಾವದಿಂದ ಕೂಡಿದ ಕಾಮ, ಕ್ರೋಧ, ಮತ್ತು

ಲೋಭಗಳನ್ನು ಹಿಂಬಾಲಿಸಿದರೆ ಅವನ ವೈಯುಕ್ತಿಕ ಪ್ರಗತಿಗೆ ಹಾನಿಯೊದಗುವುದೆಂದು ಮಹರ್ಷಿ ಎಚ್ಚರ ನೀಡುತ್ತಾರೆ. ನರಕದ ಮೂರು ಬಾಗಿಲುಗಳಾದ ಕಾಮ, ಕ್ರೋಧ ಮತ್ತು ಲೋಭಗಳನ್ನು ನಾವು ತೊರೆಯಬೇಕು. ಶಾಸ್ತ್ರ ಎಂದರೆ ನಿಯಮ, ಆತ್ಮಸಂಯಮ, ಗೀತೆಯಲ್ಲಿ ಉಪದೇಶಿಸಿರುವ ನಿಷ್ಕಾಮ ಕರ್ಮಯೋಗ, ಮುಕ್ತಿಯ ಅಂತಿಮ ಹಂತವನ್ನು, ಸಹಜವಾದ ಅಪ್ರಯತ್ನ ಪೂರ್ವಕವಾದ ಸದ್ಗುಣದ ಸ್ಥಿತಿಯನ್ನು, ತಲುಪುವವರೆಗೆ ನಮ್ಮನ್ನು ಸೂಕ್ಷ್ಮ ಪ್ರಲೋಭನೆಗಳು, ದರ್ಶನಗಳ, ಕೀರ್ತಿಯ, ಜನಗಳ ಮೇಲೆ ಪ್ರಭಾವದ ಆಸೆ ಕಾಡುತ್ತಿರುತ್ತವೆ. ನಿಜವಾದ ಸಾಧಕನಿಗೆ ವಿನಯವನ್ನು ಬೆಳೆಸಿಕೊಳ್ಳುವ ಧೈರ್ಯವಿರುತ್ತದೆ. ಅಹಂಕಾರದ ಶೂನ್ಯತ್ವವು (ವೈಯಕ್ತಿಕತೆಯ ಅಭಾವವು) ಹಾದಿಯಾಗಿರುವಷ್ಟೇ ಗುರಿಯೂ ಆಗಿರುವುದು ಅವನಿಗೆ ತಿಳಿದಿರುತ್ತದೆ.

15 ಮತ್ತು 16ನೆ (= XIII. 27, XI 54) ಶ್ಲೋಕಗಳು ಕಾಮ, ಅಹಂಕಾರ ಮತ್ತು ಬಲಗಳೆಂಬ ಅಸುರರ ಅಪಾಯದಿಂದ ತಪ್ಪಿಸಿಕೊಳ್ಳುವ ಖಚಿತವಾದ ಮಾರ್ಗವನ್ನು ಸೂಚಿಸುತ್ತವೆ. ಎಲ್ಲ ಪ್ರಾಣಿಗಳಲ್ಲಿಯೂ ಚೈತನ್ಯದ ಅಂಶ ಮತ್ತು ಪ್ರಕಾಶಗಳನ್ನು ಕಂಡು ಭೇದಭಾವವಿಲ್ಲದೆ ಸಮೀಪಿಸಿ ಅವುಗಳ ಸೇವೆಗೆ ಸಿದ್ಧವಾಗಿರುವುದೇ ಈ ಮಾರ್ಗ.

ಶ್ಲೋಕಗಳು 17 ಮತ್ತು 18 (= XVIII. 3, VI. 39) ನಮ್ಮಲ್ಲೇ ಇರುವ ಅಸುರರನ್ನು ಕಂಡ ತರುವಾಯ, ಇತರರಲ್ಲಿರುವ ದೇವರನ್ನು ಕಾಣಲು ನಾವು ಸಿದ್ಧರಾಗಿರುತ್ತೇವೆ. ಸಕ್ರಿಯ ಐಕ್ಯಭಾವನೆಯಿಂದ ಮತ್ತು ಸಂಪೂರ್ಣ ಅನುಭೂತಿಯಿಂದ ಇತರರನ್ನು ಪ್ರೀತಿಸಲು ಮತ್ತು ಸೇವಿಸಲು ಕಲಿಯುತ್ತೇವೆ. ಪ್ರೇಮರೂಪದ ಜ್ಞಾನ ನಿಜವಾದದ್ದು, ಮೂರ್ತವಾದದ್ದು, ಭಾವಪೂರ್ಣವಾದದ್ದು, ಪರಸ್ಪರವಾದದ್ದು. ಜ್ಞಾನ ಅಮೂರ್ತಕಲ್ಪನೆಯಲ್ಲ. 'ಚೈತನ್ಯದ ಕ್ರಿಯಾಶಾಲಿ ಮಲ್ಲ'ನಾದ ಯೋಗಿಯು ಎಲ್ಲರಲ್ಲೂ ದೇವರನ್ನು ವ್ಯಕ್ತಿತ್ವದ ಮೂಲವಾದ ಜ್ಞಾನವನ್ನಾಗಿ ಕಾಣುತ್ತಾನೆ. ಪ್ರತಿ ಪ್ರಾಣಿಯಲ್ಲಿಯೂ ದೇವರನ್ನು ಕಾಣುವ ಮತ್ತು ಸೇವಿಸುವ ಈ ಪ್ರಯತ್ನಕ್ಕೆ ಶ್ರದ್ಧೆಯ ಆಸರೆ ಬೇಕು. ಕಾರ್ಯಾನುಕೂಲವಾದ ಊಹಾಕಲ್ಪನೆಯಾಗಿರುವ ನಂಬಿಕೆಯೇ ಶ್ರದ್ಧೆ. ಅದನ್ನು ನೆಚ್ಚಿ ಕೆಲಸಮಾಡಲು, ಪ್ರಯೋಗದಲ್ಲಿ ಅದನ್ನು ಬಳಸಲು ನಮ್ಮನ್ನು ಪ್ರೇರೇಪಿಸುವಷ್ಟು ಶಕ್ತವಾಗಿರುವ ನಂಬಿಕೆ ಅದು. ಎಲ್ಲ ಪ್ರಾಣಿಗಳಲ್ಲಿಯೂ ಭಗವಂತನು ಜ್ಞಾನಸ್ವರೂಪನಾಗಿ ನೆಲೆಸಿದ್ದಾನೆ ಮತ್ತು ಕರ್ಮಭಕ್ತಿಗಳ ಮೂಲಕ ಅವನನ್ನು ಸಾಕ್ಷಾತ್ಕರಿಸಿಕೊಳ್ಳಬಹುದು ಮತ್ತು ಭದ್ರವಾಗಿ ಅವಲಂಬಿಸಬಹುದು ಎಂಬ ಶ್ರದ್ಧೆ ಇಂದ್ರಿಯಗಳ ಹಿಡಿತವನ್ನು ಸಡಿಲಗೊಳಿಸಿ ಆತ್ಮವಿಚಾರಕ್ಕೆ ಸಹಾಯಮಾಡುತ್ತದೆ.

19-21ರ (=X.10, 11, V. 16) ಶ್ಲೋಕಗಳು ವಿಚಾರ, ಭಕ್ತಿ ಮತ್ತು ಕರ್ಮಗಳನ್ನು ಸತತವಾಗಿ ಅಭ್ಯಾಸಮಾಡುವ ಆತ್ಮನಿಷ್ಠ ಸಾಧಕನಿಗೆ ಒದಗುವ ಜ್ಞಾನಾನುಗ್ರಹವನ್ನು ನಿರೂಪಿಸುತ್ತವೆ. ಬೆಳೆಯುತ್ತಿರುವ ಜ್ಞಾನ ಹಾಗೂ ಇತರರನ್ನು ಅರ್ಥಮಾಡಿಕೊಳ್ಳುವ ಮತ್ತು ಸೇವೆಮಾಡುವ ಶಕ್ತಿಯ ವೃದ್ಧಿ ಇವು ಅನುಗ್ರಹದ ಆಗಮನವನ್ನು ಸೂಚಿಸುತ್ತವೆ. ಈ ಅರಿವಿನ ಬೆಳಕಿನಲ್ಲಿ ಮತ್ತು ಶಕ್ತಿಯಿಂದ ನಮಗೆ ದೇಹ, ಮನಸ್ಸು ಮತ್ತು ಬುದ್ಧಿಗಳ ತರತಮಭಾವ ಗೋಚರವಾಗುತ್ತದೆ. ಇದರಿಂದಾಗಿ ನಾವು ದುರ್ಜಯವಾದ, ನಮ್ಮ ಮನಸ್ಸಿನಲ್ಲಿ ಹುಟ್ಟಿದ ಶತ್ರು, ಕಾಮವನ್ನು ಕೊಂದುಹಾಕಲು ಸಮರ್ಥರಾಗುತ್ತೇವೆ. (ಶ್ಲೋಕಗಳು 22, 23, = III. 42, 43)

ಸತ್ಸಂಗದಿಂದ ಸಾಧಕನು ಪಡೆಯುವ ಲಾಭಗಳನ್ನು 24ರಿಂದ 26ರವರೆಗಿನ (= IV. 37, 19, V. 26) ಶ್ಲೋಕಗಳಲ್ಲಿ ವಿವರಿಸಿದೆ. ಅವು ಕೆಲವು ಋಷಿಗಳ ದೃಷ್ಟಾಂತ ಮತ್ತು ಪ್ರಭಾವಗಳಿಗೆ ನಮ್ಮ ಗಮನ ಸೆಳೆಯುತ್ತವೆ. ಅವರ ಕರ್ಮ ಅಕರ್ಮ (ಕಾಮನಾರಹಿತವಾದ, ಕಾಮದಲ್ಲಿ ನೆಲೆಸಿರದ, ಕರ್ಮ) ಆಗಿರುತ್ತದೆ ಮತ್ತು ಅವರು ಶಾಂತಿಯನ್ನು ಪ್ರಸರಿಸುತ್ತಾರೆ. ಇಂಥ ಸಹಾಯದಿಂದ ಸಾಧಕನು ಅಲೆದಾಡುವ ಮನಸ್ಸನ್ನು ನಿಗ್ರಹಿಸಬೇಕು ಮತ್ತು ಶಾಂತಿಯಲ್ಲಿ ಸ್ಥಿರತೆಯನ್ನು ಪಡೆಯಬೇಕು (ಶ್ಲೋಕಗಳು 27, 28= IV. 25, 26).

ಸಾಧಕನ ಇಂದ್ರಿಯಗಳು, ಮನಸ್ಸು ಮತ್ತು ಬುದ್ಧಿ ಚೈತನ್ಯದ ಪ್ರಭಾವಕ್ಕೆ ಒಳಗಾಗಿ, ಈ ಚೈತನ್ಯದ ಶಾಶ್ವತ ಪೂರ್ಣಸ್ಥಿತಿಯಾದ ಮೋಕ್ಷವನ್ನು ಅವನು ಅರಸಿದಾಗ, ಈ ಸ್ಥಿತಿಯು ಕಾಮ, ಭಯ ಮತ್ತು ಕ್ರೋಧಗಳಿಂದ ಮರೆಮಾಡಲ್ಪಟ್ಟಿದ್ದರೂ ಅದು ಅವನ ಶಾಶ್ವತ ಸ್ವರೂಪವೆಂಬುದು ಅವನಿಗೆ ಗೊತ್ತಾಗುತ್ತದೆ (ಶ್ಲೋಕ 29 = V. 28). ಕ್ಷಣಕಾಲದ ನೋಟಕ್ಕೆ ಸಿಕ್ಕಿದ ಈ ಶುದ್ಧ ಚೈತನ್ಯವನ್ನು, ಎಲ್ಲ ಪ್ರಾಣಿಗಳಲ್ಲೂ ಆತ್ಮನನ್ನು ಮತ್ತು ಎಲ್ಲಾ ಪ್ರಾಣಿಗಳನ್ನೂ ಆತ್ಮನಲ್ಲಿ ಕಾಣುವ, ಯೋಗದ ಅಭ್ಯಾಸದ ಮೂಲಕ ದೃಢವಾಗಿ ಧಾರಣೆ ಮಾಡಬೇಕು. ಎಲ್ಲ ಆತ್ಮಗಳೂ ಒಂದೇ ಮತ್ತು ಇತರರ ಸುಖದುಃಖಗಳು ತನ್ನವೇ ಎಂಬ ಅರಿವು ಆಗುವವರೆಗೆ ಸಾಧಕನು ಹಾಗೆ ಅಭ್ಯಾಸ ಮಾಡಬೇಕು (ಶ್ಲೋಕ 30=VI. 29). ಅಖಂಡ ಚೈತನ್ಯದಲ್ಲಿ ನೆಲೆಸಿರುವುದನ್ನು ಕಲಿತಾಗ, ನಮಗೆ ಆತ್ಮವಿಶ್ವಾಸದ, ದಯೆಯ ಮತ್ತು ಯೋಗಕ್ಷೇಮವನ್ನು ವಹಿಸಿರುವ ಶಕ್ತಿಯ ಪ್ರಾಪ್ತಿ ಅನುಭವಕ್ಕೆ ಬರುತ್ತದೆ (ಶ್ಲೋಕ 31= IX. 22).ಈಗ ಜ್ಞಾನಿ ಮತ್ತು ಭಗವಂತರ ನಡುವಣ ಸಂಬಂಧ ಮತ್ತು ಶಕ್ತಿಯ ಹಂಚಿಕೆ ಪರಸ್ಪರವಾಗಿರುತ್ತದೆ. ಜ್ಞಾನಿಯು ಭಗವಂತನನ್ನು ತನ್ನ ಒಳಗೂ ತನ್ನ ಸುತ್ತಲಿನ ಪ್ರಾಣಿಗಳಲ್ಲೂ ಎರಡೂ ಕಡೆ ಕಾಣುತ್ತಾನೆ. ಅವತಾರ ಪುರುಷನಾದ ಕೃಷ್ಣನೇ ಅಸ್ತಿತ್ವದಲ್ಲಿರುವ ಸರ್ವವೂ ಎಂದು ಕಾಣಲಾಗುತ್ತದೆ (ಶ್ಲೋಕಗಳು 32, 33= VII. 17, 19).

34 ಮತ್ತು 35ನೇ (= II. 55, 71) ಶ್ಲೋಕಗಳು ಸ್ಥಿತಪ್ರಜ್ಞನ ಪ್ರಸಿದ್ಧ ವರ್ಣನೆಯ ಪ್ರಾರಂಭದ ಮತ್ತು ಕೊನೆಯ ಶ್ಲೋಕಗಳು ಅವು ನಮ್ಮ ಪ್ರಗತಿಯನ್ನು ಅಳೆಯುವ ಒಂದು ಮಾನದಂಡವನ್ನು ಒದಗಿಸುತ್ತವೆ.

ಜ್ಞಾನಿಯು ಕರ್ಮದಿಂದ ವಿರಮಿಸಬೇಕಾಗಿಲ್ಲ, ಪೂರ್ಣ ವಿರಕ್ತಿಯಿಂದ ಜಗತ್ತಿನಲ್ಲಿ ಕೆಲಸ ಮಾಡುತ್ತಿರಬಹುದು ಎಂಬುದನ್ನು 36ರಿಂದ 40ರವರೆಗಿನ (=XII. 15, XIV. 25, III. 17, 18, IV. 22) ಶ್ಲೋಕಗಳಲ್ಲಿ ಸ್ಪಷ್ಟಪಡಿಸಿದೆ. ಅವನಲ್ಲಿ ಕರ್ತೃತ್ವದ ಭಾವ ಇಲ್ಲದಿರುವುದರಿಂದ ಕರ್ಮ ಅವನಿಗೆ ಅಕರ್ಮವಾಗುತ್ತದೆ.

ಎಲ್ಲ ಪ್ರಾಣಿಗಳಲ್ಲಿಯೂ ಭಗವಂತನ ಸಕ್ರಿಯ ಸಾನ್ನಿಧ್ಯ ಮತ್ತು ಪೂರ್ಣ ಶರಣಾಗತಿಯನ್ನು ಅನುಸರಿಸಿ ಬರುವ ಪರಮಶಾಂತಿ ಇವನ್ನು ಕೊನೆಯ ಎರಡು ಶ್ಲೋಕಗಳಲ್ಲಿ (ಶ್ಲೋಕ 41, 42 =XVII. 61,62) ದೃಢಪಡಿಸಿದೆ.

ಪರ್ಯಾಯವಾಗಿ ಜಗತ್ತನ್ನು ಆಂತರೀಕರಿಸುವ ಮತ್ತು ಆತ್ಮವನ್ನು ಬಾಹ್ಯೀಕರಿಸುವ ಕ್ರಿಯೆಗಳಿಂದ ಸ್ವಾತಂತ್ರ್ಯದ ಅಥವಾ ಮೋಕ್ಷದ 'ನಾನು' ಮತ್ತು ಕರ್ತವ್ಯದ ಅಥವಾ ಧರ್ಮದ 'ನಾನು' ಇವನ್ನು ಗಂಟುಹಾಕಲಾಗುತ್ತದೆ, ತನ್ನ ಮತ್ತು ಇತರರ ನಡುವಣ ಗೋಡೆಯನ್ನು

ಒಡೆದು ಹಾಕಲಾಗುತ್ತದೆ, ಸ್ವಾರ್ಥಕಾಮನೆಯನ್ನು ಜಯಿಸಲಾಗುತ್ತದೆ, ಮತ್ತು ಕರ್ಮವು ಬೀಜವಾಗದೆ ಹಣ್ಣು, ಸದ್ಯದ ಸರ್ವಸಮಾನ ಅಗತ್ಯವೊಂದಕ್ಕೆ ಸ್ಫುರಿಸಿದ ಸಹಜ ಪ್ರತಿಕ್ರಿಯೆ, ಆಗುತ್ತದೆ. ಪ್ರೇಮಪೂರ್ವಕವಾದ ಅಂಥ ಕರ್ಮವು, ಕ್ರಿಯೆಯಲ್ಲಿ ತೊಡಗಿರುವ ಚೈತನ್ಯದ ರೂಪದಲ್ಲಿ ಆಸ್ವಾದ್ಯವಾಗಿ, ಪರಿಪೂರ್ಣತೆಯ ಬೆಳವಣಿಗೆಗೆ ಸಹಾಯ ಮಾಡುತ್ತದೆ ಮತ್ತು ಅದರ ಹಿಂಬದಿಯಲ್ಲಿ 'ಕರ್ತೃ' ಇಲ್ಲದಿರುವುದರಿಂದ ಅಕರ್ಮವಾಗುತ್ತದೆ. ಹೀಗೆ ಕೃಷ್ಣನ ಅನುಗ್ರಹವು ಕರ್ತವ್ಯದ ನಿರ್ವಹಣೆಗೆ ಜ್ಞಾನದ ಆನಂದವನ್ನು ತರುತ್ತದೆ. ದೇವಾಧಿಪತ್ಯವು ಇತರಾಧಿಪತ್ಯವಾಗಿರದೆ ಸ್ವಯಾಮಾಧಿಪತ್ಯದ ಸಾಫಲ್ಯವಾಗಿರುವುದು ಕಂಡುಬರುತ್ತದೆ. ಸ್ಥಿತಿ ಮತ್ತು ಗತಿ ಒಂದೇ ಆಗಿರುವ ಸೃಜನಾತ್ಮಕ ಜೀವನಕ್ಕೆ ಆಚಾರ್ಯ ಕೀಲಿಯಾಗಿರುವ *ಗೀತಾಸಾರ*ವು ಪ್ರಾಚೀನ ದರ್ಶನದ ಪಕ್ವವಾದ ಕೆಂಪು ಹೃದಯವನ್ನು ನವೀನದರ್ಶನವಾದ ರಮಣಮಹರ್ಷಿಗಳ ಸಂಕಲಿತ ಕೃತಿಗಳ ದಷ್ಟಪುಷ್ಟ ದೇಹದಲ್ಲಿ ನೆಡುತ್ತದೆ.

# ಅಧ್ಯಾಯ 12

# ಸಂಭಾಷಣೆಗಳು

ಎ. ದೇವರಾಜ ಮುದಲಿಯಾರ್‌ರ *ಭಗವಾನರೊಡನೆ ದಿನಂಪ್ರತಿ* 1945ರ ಮಾರ್ಚಿಯಿಂದ 1947ರ ಜನವರಿವರೆಗಿನ ಅವಧಿಯನ್ನು ವರದಿ ಮಾಡಿದೆ. ಸುರಿ ನಾಗಮ್ಮನವರ *ಶ್ರೀರಮಣಾಶ್ರಮದ ಪತ್ರಗಳು* 1945ರ ನವೆಂಬರ್‌ನಿಂದ 1950ರ ಜನವರಿವರೆಗಿನ 50 ತಿಂಗಳುಗಳಲ್ಲಿ ಬರೆದ ಕಾಗದಗಳನ್ನು ಒಳಗೊಂಡಿದೆ. ಇವೆರಡೂ ರಮಣ ಮಹರ್ಷಿಗಳ ಜೀವನ ಚರಿತ್ರೆಗೆ ಸಂಬಂಧಿಸಿದ ಬಹಳ ವಿಷಯವನ್ನು ಒಳಗೊಂಡಿವೆ. ಮಹರ್ಷಿಗಳ ಸುಂದರವಾದ ಅಥವಾ ಸೂಕ್ಷ್ಮವಾದ ಅನೇಕ ಉಕ್ತಿಗಳನ್ನೂ ವರದಿಮಾಡುತ್ತವೆ. ಮುನಗಾಲ ವೆಂಕಟರಾಮಯ್ಯ (ರಾಮಾನಂದ ಸರಸ್ವತಿ) ಸಂಪಾದಿಸಿರುವ *ಸಂಭಾಷಣೆಗಳು* ಅನೇಕ ವ್ಯಕ್ತಿಗಳೊಡನೆ ಮಹರ್ಷಿಗಳ ಮಾತುಕತೆಗಳನ್ನು ದಾಖಲೆಮಾಡಿದೆ ಮತ್ತು 1935ರ ಮಾರ್ಚಿಯಿಂದ 1939ರ ಮೇ ವರೆಗಿನ ಅವಧಿಯಲ್ಲಿ ವಿವಿಧ ಸಂದರ್ಶಕರು ಮಹರ್ಷಿಗಳಿಂದ ಹೊರಸೆಳೆದ ಅಭಿಪ್ರಾಯ ಮತ್ತು ಉತ್ತರಗಳನ್ನು ಉಲ್ಲೇಖಿಸಿವೆ. ಈ ಕೃತಿಗಳು ಅನಧಿಕೃತ ರೂಪದಲ್ಲಿದ್ದರೂ ಅವು ಪ್ರಾಮಾಣಿಕವೂ ನಿಷ್ಕೃಷ್ಟವೂ ಆಗಿವೆ. ಸಂದರ್ಭ, ವಾತಾವರಣ ಹಾಗೂ ಮಹರ್ಷಿಗಳ ಅಭಿಪ್ರಾಯಗಳನ್ನು ಸರಿಯಾಗಿ ತಿಳಿಸುತ್ತವೆ. ಇವುಗಳಲ್ಲಿ ನಾವು ಮಹರ್ಷಿಗಳ ಮಾನವ ಸಹಜ ಗುಣಗಳ ಯಥಾವತ್ತಾದ ಪರಿಜ್ಞಾನವನ್ನು ಪಡೆಯಬಹುದು. ಅಂತೆಯೇ ತತ್ತ್ವಶಾಸ್ತ್ರದ ಮೂಲತತ್ತ್ವಗಳ ಮೇಲೆ ಮತ್ತು ಆಧ್ಯಾತ್ಮಿಕ ಅನ್ವೇಷಣೆ ಎಂದು ಕರೆದಿರುವುದರ ತಲೆ ಕೆಡಿಸುವ ಜಟಿಲತೆಗಳ ಮತ್ತು ವಿರೋಧಾಭಾಸಗಳ ಮೇಲೆ ಅವರು ಚೆಲ್ಲಿದ ವ್ಯಾವಹಾರಿಕ ಜ್ಞಾನದ ಸ್ಪಷ್ಟ ಬೆಳಕನ್ನೂ ಕಾಣಬಹುದು.

ಬ್ರಹ್ಮ (ಚೈತನ್ಯ)ದಿಂದ ಬೇರೆಯಾದುದಾಗಿ ಅಥವಾ ಸ್ವತಂತ್ರವಾದುದಾಗಿ ಪರಿಗಣಿಸಿದ ಜಗತ್ತು ಅಸತ್, ಅಸ್ತ್ಯಯ ಆದುದು. ಆದರೆ ಜೀವ ಮತ್ತು ಈಶ್ವರರೊಡನೆ ಬ್ರಹ್ಮದ ಅಭಿವ್ಯಕ್ತಿಯಾಗಿ ಅದನ್ನು ಪರಿಗಣಿಸಿದಾಗ, ಅದು ಸತ್ಯವಾದುದೇ. ಸತ್‌ನ ಏಕೈಕ ಆಧಾರಭೂಮಿಯಾದ ಚೈತನ್ಯದಿಂದ ಅದು ತನ್ನ ಸತ್ಯತೆಯನ್ನು ಪಡೆಯುತ್ತದೆ. ಚಿನ್ನ ಅಥವಾ ಕಲ್ಲಿನಂತೆ ಚೈತನ್ಯವು ಮೂಲವಸ್ತು. ಒಡವೆಗಳು ಅಥವಾ ವಿಗ್ರಹಗಳಂತೆ, ಜೀವ, ಈಶ್ವರ ಮತ್ತು ಗತ್ತು ರೂಪಗಳು. ಇತರ ಜನರಂತೆಯೇ, ಮುನಿಯೂ ಜಗತ್ತನ್ನು ನೋಡುತ್ತಾನೆ, ಅದರಲ್ಲಿ ಬದುಕುತ್ತಾನೆ ಮತ್ತು ವ್ಯವಹಾರ ಮಾಡುತ್ತಾನೆ. ಆದರೆ ಅವನು ಅದನ್ನು ಆತ್ಮದಿಂದ ಬೇರೆಯಾದುದನ್ನಾಗಿ ನೋಡುವುದಿಲ್ಲ. ''ಜಗತ್ತು ಅಶಾಶ್ವತ ಎಂದು ಶಾಸ್ತ್ರಗಳು ಹೇಳುವಾಗ, ಅವುಗಳ ಗುರಿ ಅದು ಶಾಶ್ವತ ಎಂಬ ಭ್ರಾಂತಿಯಿಂದ ನಮ್ಮನ್ನು ಪಾರು ಮಾಡುವುದಷ್ಟೇ ಆಗಿರುತ್ತದೆ. ಇನ್ನೂ ಉತ್ತಮ ರೀತಿಯಲ್ಲಿ ಹೇಳುವುದಾದರೆ ಜಗತ್ತನ್ನು

ಅನಿತ್ಯ ಎಂದು ತೆಗಳದೆ ಚೈತನ್ಯರೂಪವಾದ ನಾವು ನಿತ್ಯ ಎನ್ನುವುದು.''

ಚೈತನ್ಯದ ನಿರುಪಾಧಿಕ ಸತ್ಯತ್ವವನ್ನು ಪ್ರತಿಪಾದಿಸಿ, ವ್ಯಾವಹಾರಿಕ ಜಗತ್ತಿಗೆ ಮತ್ತು ನಮ್ಮ ಅನುಭವಾತ್ಮಕ ಬದುಕಿಗೆ ಕೇವಲ ಸೋಪಾಧಿಕ ಸತ್ಯತ್ವವನ್ನು ನೀಡುವುದರ ಉದ್ದೇಶ ನಮ್ಮನ್ನು ಕಾರ್ಯ ಮಾಡದಿರುವಂತೆ ತಡೆಯುವುದಲ್ಲ. ನಮ್ಮಲ್ಲಿನ ವೈಯುಕ್ತಿಕ ಕರ್ತೃತ್ವದ ಭಾವನೆಯನ್ನು ಮತ್ತು ನಮ್ಮನ್ನು ಅವಿವೇಕದ ಕಾರ್ಯಕ್ಕೆ ದೂಡುವ ಸ್ವಾರ್ಥ ಕಾಮನೆಗಳನ್ನು ದುರ್ಬಲಗೊಳಿಸುವುದು.

''ಶಂಕರಾಚಾರ್ಯರು ನಿಷ್ಕ್ರಿಯತ್ವವನ್ನು ಬೋಧಿಸಿದರು. ಆದರೆ ಅವರು ವ್ಯಾಖ್ಯಾನಗಳನ್ನು ಬರೆಯಲಿಲ್ಲವೇ, ದೇಶವನ್ನೆಲ್ಲಾ ಸುತ್ತಲಿಲ್ಲವೇ ಮತ್ತು ಚರ್ಚೆಗಳಲ್ಲಿ ಭಾಗವಹಿಸಲಿಲ್ಲವೇ? ಕರ್ಮಗಳು ಬಂಧಿಸುವುದಿಲ್ಲ. 'ನಾನು' ಕರ್ತ ಎನ್ನುವ ಮಿಥ್ಯಾಜ್ಞಾನವೇ ಬಂಧನ. ಅಕರ್ಮ ಎನ್ನುವುದು ನಿರಂತರ ಕ್ರಿಯೆ. ಜ್ಞಾನಿಯು ತೀವ್ರವಾದ ಒಂದು ಕ್ರಿಯಾಸ್ಥಿತಿಯಲ್ಲಿ ಇರುತ್ತಾನೆ. ಬಿರುಸಾಗಿ ಸುತ್ತುತ್ತಿರುವ ಬುಗುರಿಯಂತೆ, ಅವನ ನಿಶ್ಚಲತೆ ಕೇವಲ ತೋರಿಕೆಯದು. ನಿಷ್ಕ್ರಿಯವಾಗಿರುವುದಕ್ಕೆ ತೀರ ವಿರುದ್ಧವಾದ ಅತ್ಯಂತ ತೀವ್ರ ಕಾರ್ಯಶೀಲತೆ ಅದು.''

ಚೈತನ್ಯದೊಡನೆ ತಾದಾತ್ಮ್ಯವನ್ನು ಹೆಚ್ಚಿಸಿಕೊಳ್ಳುವುದು ಆಲೋಚನೆಯ ವಿಷಯವಲ್ಲ. ಅದು ಅನುಭವದ ವಿಷಯ. ''ದೇಹದೊಡನೆ ತಾದಾತ್ಮ್ಯ ಹೊಂದಿರುವುದು ದ್ವೈತ. ಚೈತನ್ಯದೊಡನೆ ತಾದಾತ್ಮ್ಯ ಹೊಂದಿರುವುದು ಅದ್ವೈತ. ಆದರೆ ವ್ಯತ್ಯಾಸವಿರುವುದು ಸಿದ್ಧಾಂತದಲ್ಲಿ ಮಾತ್ರ. ನಮ್ಮಾಳ್ವಾರರು ಹೇಳುವಂತೆ: 'ಅಜ್ಞಾನದಿಂದ ಅಹಂಕಾರವನ್ನೇ ನಾನು ಎಂದು ಕೊಂಡಿದ್ದೆ; ಸರಿಯಾದ ಜ್ಞಾನವಾದೊಡನೆ, ಅಹಂಕಾರ ಎಲ್ಲೆಲ್ಲಿಯೂ ಇಲ್ಲದಾಗಿದೆ ಮತ್ತು ನೀನು ಮಾತ್ರವೇ ಆತ್ಮರೂಪನಾಗಿ ನೆಲೆಸಿದ್ದೀಯೆ.' ''

ನಮಗೆ ಹಿಡಿಸಲಿ ಬಿಡಲಿ, ನಮಗೆ ಗೊತ್ತಿರಲಿ ಇಲ್ಲದಿರಲಿ, ನಾವೆಲ್ಲರೂ ಚೈತನ್ಯ-ರೂಪವಾದ ಶುದ್ಧ ಸತ್‌ನಲ್ಲಿ ಅದ್ವೈತಿಗಳು; ಆಲೋಚನೆ, ಮತ್ತು ಕ್ರಿಯೆಯಲ್ಲಿ ದ್ವೈತಿಗಳು. ಬದುಕಿನ ಈ ಎರಡೂ ಮುಖಗಳನ್ನು ನಿರೂಪಿಸಲು ಮಹರ್ಷಿ ಅನೇಕ ವೇಳೆ ಸಿನೆಮಾದ ಉಪಮಾನವನ್ನು ಬಳಸುತ್ತಾರೆ. ಇದು ಹಳೆಯ ಉಪಮಾನವಾದ ನಾಟಕಕ್ಕಿಂತ ಉತ್ತಮವಾದುದು. ''ಪರದೆ, ಚಿತ್ರ, ಪ್ರೇಕ್ಷಕರು, ಚಿತ್ರ ಬಿಡುವವರು, ಬೆಳಕು ಮತ್ತು ಉಳಿದ ಎಲ್ಲವೂ ಆತ್ಮದಲ್ಲಿ ಸೇರಿವೆ. ಆತ್ಮದಿಂದ ಪ್ರತಿಫಲಿತವಾದ ಬೆಳಕಿನಿಂದ ಮನಸ್ಸು ಬೆಳಗುತ್ತದೆ. ತೀಕ್ಷ್ಣವಾದ ಪ್ರಕಾಶದಲ್ಲಿ ಅಥವಾ ಪೂರ್ಣ ಅಂಧಕಾರದಲ್ಲಿ ಚಿತ್ರಗಳು ಕಾಣುವುದಿಲ್ಲ. ಅಂತೆಯೇ ಜಗತ್ತಿನ ಚಿತ್ರವು ಅವಿದ್ಯೆಯ ಕತ್ತಲಿನ ಮೂಲಕ ಆತ್ಮದ ಪ್ರತಿಫಲಿತ ಬೆಳಕಿನಲ್ಲಿ ಮಾತ್ರವೇ ಗೋಚರಿಸುತ್ತದೆ. (ನಿದ್ದೆಯಲ್ಲಿರುವಂತೆ) ಶುದ್ಧ ಅವಿದ್ಯೆಯಲ್ಲಿ ಅಥವಾ (ಹೃದಯದಲ್ಲಿ ಮನಸ್ಸು ಲಯಹೊಂದಿರುವ ಆತ್ಮ ಸಾಕ್ಷಾತ್ಕಾರದ ಸ್ಥಿತಿಯಲ್ಲಿರುವಂತೆ) ಶುದ್ಧ ಪ್ರಕಾಶದಲ್ಲಿ ಜಗತ್ತು ಕಾಣಿಸುವುದಿಲ್ಲ. ವೈವಿಧ್ಯದ ಮೂಲ ಅವಿದ್ಯೆ. ನೋಡುತ್ತಿರುವ ವ್ಯಕ್ತಿ ಮತ್ತು ಅಭಿನಯಿಸುತ್ತಿರುವ ವ್ಯಕ್ತಿಗಳು, ಜ್ಞಾತೃ ಮತ್ತು ಜ್ಞೇಯವಸ್ತುಗಳು ಸತ್ಯದ ಒಂದೇ ಮಜಲಿಗೆ ಸೇರಿದವು. ಮಿಥ್ಯಾವ್ಯಕ್ತಿ ಮಿಥ್ಯಾಜಗತ್ತನ್ನು ನೋಡುತ್ತಿರುತ್ತಾನೆ.''

''ಸತ್ತ್ವವು ಪ್ರಕಾಶ. ರಜಸ್ಸು ಜ್ಞಾತೃ. ತಮಸ್ಸು ವಿಷಯ. ಮನ ಆಕಾಶವು ಭೂತಾಕಾಶದ ರೂಪದಲ್ಲಿ ಪ್ರತಿಫಲಿಸುತ್ತದೆ. ವಿಷಯಗಳು ಜ್ಞಾತೃವಿನಿಂದ ಪ್ರತ್ಯೇಕವಾದ ವಸ್ತುಗಳಾಗಿ

ಕಂಡುಬರುತ್ತದೆ.''

''ವ್ಯವಹಾರದಶೆಯಲ್ಲಿಯೂ ಸಮಾಧಿ (ಮೂಲಾನುಭವ) ಇರುತ್ತದೆ. ಚಿತ್ರಗಳನ್ನು ಹಾಯಿಸಿದಾಗ ಮತ್ತು ಹಾಯಿಸದಿದ್ದಾಗ ಎರಡೂ ಕಾಲಗಳಲ್ಲಿ ಪರದೆ ಇದ್ದೇ ಇರುತ್ತದೆ. ವ್ಯವಹಾರದಲ್ಲಿ ಮತ್ತು ಶಾಂತಿಯಲ್ಲಿ ಆತ್ಮವು ಸದಾ ಇರುತ್ತದೆ. ಸಿನೆಮಾಪರದೆ ತನ್ನನ್ನು ತಾನೇ ನೋಡಲಾರದು. ಆದ್ದರಿಂದ ಅದು ಪ್ರೇಕ್ಷಕನೊಬ್ಬನನ್ನು ಅಪೇಕ್ಷಿಸುತ್ತದೆ. ಆದರೆ ಪ್ರೇಕ್ಷಕನು ಸಂಪೂರ್ಣ ಚೈತನ್ಯ ಸ್ವರೂಪ. ಪರದೆ, ಬೆಳಕು, ಪ್ರೇಕ್ಷಕ ಮತ್ತು ಚಿತ್ರದಲ್ಲಿನ ನಟರು ಎಲ್ಲವೂ ಅವನೇ.''

ಜಗತ್ತು ನಮ್ಮಲ್ಲಿರುವ ಮತ್ತು ನಾವು ಜಗತ್ತಿನಲ್ಲಿರದ ಚೈತನ್ಯರೂಪದ ಸತ್‌ಸ್ವರೂಪವನ್ನು ಕನಸುಗಳಲ್ಲಿ ಮತ್ತು ಕಾವ್ಯ ಹಾಗೂ ರಸಾಸ್ವಾದ ರೂಪದ ಸರ್ವರಿಗೂ ಸಮಾನವಾಗಿರುವ ಕನಸಿನಲ್ಲಿ ಅನುಭವಕ್ಕೆ ತಂದುಕೊಳ್ಳಬಹುದು. ವ್ಯಾವಹಾರಿಕ ಜಗತ್ತು ಸತ್ಯ, ಅದು ಒಟ್ಟು ಸೇರಿ ಹಾಗೂ ವೈಯಕ್ತಿಕವಾಗಿ ನಾವು ಸೃಷ್ಟಿಸಿದ ಒಂದು ಕಲ್ಪನೆಯ ವಸ್ತುವಲ್ಲ ಎಂದು ನಾವು ಭಾವಿಸಿದಲ್ಲಿ, ಅದಕ್ಕೆ ಕಾರಣ ನಾವು ನಮ್ಮನ್ನು ದೇಹನಿಷ್ಠ ಅಹಂಕಾರಕ್ಕೆ ಸೀಮಿತಗೊಳಿಸಿಕೊಳ್ಳುವುದು, ಬದುಕಿನ ಈ ಆಶುನಾಟಕದಲ್ಲಿ ಪ್ರೇಕ್ಷಕನಟರಾಗಿ ನಾವು ಇತರ ನಟರನ್ನು ಅರ್ಥಮಾಡಿಕೊಳ್ಳಲು ಆಲಸ್ಯತೋರುವುದು ಹಾಗೂ ಜೊತೆಗೆ ಕಥಾ ವಸ್ತುವನ್ನು ಬದಲಾಯಿಸಲು ಅತಿ ಉತ್ಸಾಹದಿಂದಿರುವುದು.

ಮಹರ್ಷಿಗಳು ತಮ್ಮನ್ನು ಒಬ್ಬ ಮಹರ್ಷಿ ಎಂದು ಎಂದೂ ಹೇಳಿಕೊಳ್ಳಲಿಲ್ಲ. ಉಪದೇಶಕ್ಕಾಗಿ ಬಂದ ಎಲ್ಲ ಪ್ರಾರ್ಥನೆಗಳನ್ನೂ ಅವರು ತಳ್ಳಿ ಹಾಕಿದರು. ''ನಾನು ಜ್ಞಾನಿಯಾಗಿದ್ದಲ್ಲಿ, ನಾನು ಮಾತನಾಡಲು ನನಗಿಂತ ಪ್ರತ್ಯೇಕವಾಗಿ ಇರುವವನು ಯಾವನೂ ಇರುವುದಿಲ್ಲ. ನಾನು ಸಾಮಾನ್ಯ ಮನುಷ್ಯನಾಗಿದ್ದಲ್ಲಿ, ಆಗ ನಾನು ಉಳಿದವರಷ್ಟೇ ಅಜ'' ಎಂದು ಹೇಳಿದರು.

ಮಧ್ಯಸ್ಥಗಾರನಾಗಿ ವರ್ತಿಸಲು ನಿರಾಕರಿಸಿದರೂ, ಅವರು ಪೂರ್ಣ ಜೀವನದ ಕಲೆಯನ್ನು ತಾಯಿಯಂತೆ, ಪ್ರೇಮಿಯಂತೆ ಅಥವಾ ಮಗುವಿನಂತೆ ಉಪದೇಶಿಸಿದರು. ಜ್ಞಾನಿಯ ಸ್ಥಿತಿ ಮಗುವಿನ ಸ್ಥಿತಿಯಂತೆ ಇರುತ್ತದೆ ಎಂದು ಅವರು ಹೇಳುತ್ತಾರೆ. ಜ್ಞಾನಿ ಮತ್ತು ಮಗು ಇಬ್ಬರೂ ಅಹಂಕಾರರಹಿತರು ಮತ್ತು ನೆನಪುಗಳ ಹೊರೆಯಿಂದ ಹಾಗೂ ಕಾಮನೆಗಳ ಪ್ರಲೋಭನೆಗಳಿಂದ ರಹಿತರಾಗಿ ವರ್ತಮಾನಕಾಲದಲ್ಲಿ ಸುಖವಾಗಿ ಬಾಳುತ್ತಾರೆ. ಮಗುವಿನ ಅಹಂಕಾರ ಸುಪ್ತವಾಗಿರುತ್ತದೆ. ಅದು ಇನ್ನೂ ಬೆಳೆಯಬೇಕಾಗಿದೆ. ಜ್ಞಾನಿಯ ಅಹಂಕಾರವಾದರೋ ಕೊನೆಗೊಂಡಿದೆ. ಹೀಗೆ ಜ್ಞಾನಿಗೆ ವಿವೇಕದ ಮುಗ್ಧತೆ ಸಿದ್ಧಿಸಿದೆ, ಅಜ್ಞಾನದ್ದಲ್ಲ. ಅಂಶಗಳಲ್ಲಿ ಅವನು ಪೂರ್ಣವನ್ನು ಕಾಣುತ್ತಾನೆ. ಆದ್ದರಿಂದ ತಾಯಿ ಓದುವುದನ್ನು ಕಲಿಸುವಂತೆ ಅವನು ಪೂರ್ಣಜೀವನದ ಕಲೆಯನ್ನು ಕಲಿಸಬಲ್ಲ. ಮುದ್ರಿತ ಪುಟವನ್ನು ನೋಡುತ್ತ ಬುದ್ಧಿವಂತ ಮಗು ಸಾಲಾಗಿರುವ ಅಕ್ಷರಗಳ ಹೆಸರನ್ನು ಶೀವಿಯಲ್ಲಿ ಗಟ್ಟಿಯಾಗಿ ಓದುತ್ತದೆ. ಆದರೆ ತಾಯಿ ಒಂದೇ ನೋಟದಲ್ಲಿ ಅರ್ಥವನ್ನು ಗ್ರಹಿಸಿ ಅಕ್ಷರಗಳನ್ನು 'ನೋಡು'ವುದಿಲ್ಲ. ಆದರೂ ಮಗುವಿನ ಜೊತೆಯಲ್ಲಿ, ಮಗುವಿಗಾಗಿ ಅಕ್ಷರಗಳನ್ನು ನೋಡುತ್ತಾಳೆ. ದ್ವೈತವು ಸೃಷ್ಟಿಸಿದ ಸಂಶಯ ಮತ್ತು ತೊಂದರೆಗಳನ್ನು ಜ್ಞಾನಿ ಅನುಭವಿಸಿದ್ದಾನೆ. ಅವನಿಗೆ ತಾಯಿಯ ತಾಳ್ಮೆ ಮತ್ತು ಗ್ರಹಣಶಕ್ತಿ ಇವೆ. ಇಂಥ ಉಪದೇಶ

ಬೌದ್ಧಿಕವಲ್ಲ. ಅದು ಪೂರ್ಣರೂಪದ್ದು ಮತ್ತು ಅನ್ವೇಷಣ ವಿಧಾನದ್ದು. ಸಂಕೀರ್ಣ ಸತ್ಯವೊಂದರ ಪೂರ್ಣಭಿವ್ಯಕ್ತಿಗೆ ನೀಡಿದ ಕರೆ ಅದು. ಅನುಕರಿಸಲು, ಅಭ್ಯಾಸ ಮಾಡಲು ಮತ್ತು ತಿದ್ದಲು ಅದು ವಿಶ್ಲೇಷಣೆಗಿಂತ ಹೆಚ್ಚು ಅನುಕೂಲವಾಗಿದೆ. ಮಗುವಿನಂತೆ ಶಿಷ್ಯನೂ ಅರಿವಿಲ್ಲದೆಯೇ ಕಲಿಯುತ್ತಾನೆ. ಅದು ಹೇಗೆ ಎನ್ನುವುದು ಅವನಿಗೆ ತಿಳಿಯದು. ಆದರೆ ಆತ್ಮ ವಿಶ್ವಾಸದಿಂದ ಅವನು ಕಲಿಯುತ್ತಾನೆ. ಭೂಮಿಯಲ್ಲಿ ಬೀಜದ ಬೆಳವಣಿಗೆಯಂತೆಯೇ, ಆಧ್ಯಾತ್ಮಿಕ ಬೆಳವಣಿಗೆ ಕತ್ತಲೆಯಲ್ಲಿ ಹಾಗೂ ಬೆಳಕಿನಲ್ಲಿ ಜರುಗುತ್ತದೆ. ಪದೇ ಪದೇ ನಡೆಸುವ ಆತ್ಮ ಶೋಧನೆ ಅಪಾಯಕರವಾದುದು, ಏಕೆಂದರೆ ಅದು ಅಹಂಕಾರದ ಬಗ್ಗೆ ನಮ್ಮ ಆಸಕ್ತಿಯನ್ನು ಕೇವಲ ಹೆಚ್ಚಿಸುತ್ತದೆ.

''ಪುನರ್ಜನ್ಮ ಎಂದರೆ ಪುನಃ ಸಮಗ್ರವಾಗುವುದು, ಮತ್ತೆ ಮಗುವಿನಂತಾಗುವುದು.'' ಜ್ಞಾನ ಎಂದರೆ ಹೆಚ್ಚು ಗಂಭೀರವಾದ ಸ್ತರದಲ್ಲಿ, ಅಹಂಕಾರರಹಿತ ಪೂರ್ಣತ್ವದ ಆದ್ಯ ನಿರ್ಮಲ ಸ್ಥಿತಿಯ ಪುನಸ್ಸಂಪಾದನೆ. ಪೂರ್ಣಸತ್ಯದಲ್ಲಿ ಬೇರುಬಿಟ್ಟಿರುವ ವರ್ತನೆಯ ಈ ಸಮಗ್ರತೆ ಮಗುವಿನ ವರ್ತನೆಯಂತೆ ಅಕ್ಷರಜ್ಞಾನಕ್ಕಿಂತ ಪೂರ್ವದ್ದಾಗಿರಬಹುದು ಅಥವಾ ಜ್ಞಾನಿಯ ವರ್ತನೆಯಂತೆ ವೈಜ್ಞಾನಿಕ ಜ್ಞಾನದ ತರುವಾಯದ್ದಾಗಿರಬಹುದು. ಎರಡೂ ಸಂದರ್ಭದಲ್ಲಿ, ಅದನ್ನು ಶಬ್ದಗಳಲ್ಲಿ ವರ್ಣಿಸುವುದು ಸುಲಭವಲ್ಲ. ಅದನ್ನು ಮೌನ, ಯಥೋಚಿತ ಕ್ರಿಯೆ ಅಥವಾ ಕಥೆಗಳು ಮತ್ತು ಸಂಕೇತಗಳು ಇವುಗಳ ಮೂಲಕ ಮಾತ್ರ ತಿಳಿಸಬಹುದು. ವ್ಯಾವಹಾರಿಕ ಜಗತ್ತನ್ನು ಸತ್ಯವಾಗಿರುವುದಕ್ಕಿಂತ ಹೆಚ್ಚಾಗಿ ಕಾಲ್ಪನಿಕವಾಗಿ ಕಂಡಿದ್ದ ಮಹರ್ಷಿಗಳು ಶಿವವಿಷ್ಣುಗಳ ಪ್ರಭಾವೀ ಹೆಸರುಗಳನ್ನು ಮತ್ತು ಕತೆಗಳನ್ನು ಧಾರಾಳವಾಗಿ ಬಳಸುತ್ತಿದ್ದರು. ಅವು ಕಲ್ಪಿತಕತೆಗಳು ಮತ್ತು ಸಂಕೇತಗಳು ಎಂದು ಗೊತ್ತಿದ್ದರೂ ಆ ಕಾರಣಕ್ಕಾಗಿ ಅವು ಹೇಯ ಅಥವಾ ತ್ಯಾಜ್ಯ ಎಂದು ಭಾವಿಸಲಿಲ್ಲ. ಇತರ ಹಿಂದೂಗಳಂತೆಯೇ, ಅವರು ಪ್ರಪಂಚವನ್ನು ಎರಡೂ ಕಣ್ಣುಗಳಿಂದ, ಕಾವ್ಯದ ಕಣ್ಣು ಮತ್ತು ವ್ಯವಹಾರದ ಕಣ್ಣುಗಳಿಂದ ನೋಡಿದರು.

''ಶಿವ, ವಿಷ್ಣು ಹಾಗೂ ಅವರ ನಿವಾಸಗಳಾದ ಕೈಲಾಸ ಮತ್ತು ವೈಕುಂಠ ನಮ್ಮ ಶರೀರಗಳಷ್ಟೇ, ನಾವಿರುವ ಪ್ರಪಂಚದಷ್ಟೇ ಸತ್ಯ. ಅವು ನಮ್ಮೊಳಗೆ ಇವೆ. ವ್ಯಾವಹಾರಿಕ ಜಗತ್ತೂ ಅಂತೆಯೇ ನಮ್ಮೊಳಗಿದೆ. ಆಕಾಶ ನಿಮ್ಮಲ್ಲಿದೆ. ದೇಹ ಆಕಾಶದಲ್ಲಿದೆ. ನೀವು ಆಕಾಶದಲ್ಲಿಲ್ಲ.''

''ವಾರಣಾಸಿಯ ಪಾವಿತ್ರ್ಯ ವಸ್ತುಭೂತ ಮತ್ತು ಶ್ರದ್ಧೆಯ ವಿಷಯ ಎರಡೂ ಆಗಿದೆ.''

''ನಿಜವಾದ ಗಂಗೆ ನಿಮ್ಮೊಳಗಿದೆ. ಅದರಲ್ಲಿ ಸ್ನಾನ ಮಾಡಿ.''

''ಅರುಣಾಚಲದ ಶಕ್ತಿಯನ್ನು ನಿರಾಕರಿಸಲಾಗುವುದಿಲ್ಲ. ಅದೇ ಸಮಯಕ್ಕೆ ಅರುಣಾಚಲವು ಒಳಗಿದೆ, ಹೊರಗಿಲ್ಲ.''

''ಪರ್ವತದ ರಹಸ್ಯವೇ ಆತ್ಮದ ರಹಸ್ಯ.'' ಶಿವನು ಆನಂದವನ್ನು, ಮಂಗಳವನ್ನು, ಪರಮಾತ್ಮನನ್ನು, ಶುದ್ಧ ನಿರ್ವಿಷಯಕ ಜ್ಞಾನವನ್ನು ಸಂಕೇತಿಸುತ್ತಾನೆ. ''ಹಿರಿಯ ಶೈವ ಸಂತಕವಿಗಳು ನಾಲ್ವರೂ, ಪ್ರತಿಯೊಬ್ಬರೂ ತಮ್ಮ ಮೊದಲನೆಯ ಪದ್ಯದಲ್ಲಿಯೇ, ಒಂದೇ ಅನುಭವವನ್ನು ಸರಿಸುಮಾರು ಒಂದೇ ಬಗೆಯ ಶಬ್ದಗಳಲ್ಲಿ ನುಡಿದಿದ್ದಾರೆ. ಅವು (1) ಭೇದ ಭಾವನೆಯಿಲ್ಲದ ಭಕ್ತಿ; (2) ಅವಿಚ್ಛಿನ್ನ ಸ್ಮೃತಿ; (3) ಆಲೋಚನೆಯ ಅನುದಯ;

(4) ಅಹಂಕಾರ ಎನ್ನುವುದು ಇಲ್ಲ, ಇರುವುದು ಆತ್ಮವೊಂದೇ.'' *ಸದ್ದರ್ಶನದ* ಮೊದಲನೆ ಎರಡು ಶ್ಲೋಕಗಳಲ್ಲಿ ಸಾರಿರುವುದು ಪರಮೇಶ್ವರ ಅಥವಾ ಸಗುಣಬ್ರಹ್ಮದೊಡನೆ ಸತ್-ಚಿತ್‌ನ ಈ ತಾದಾತ್ಮ್ಯವನ್ನೇ.

ಮಹರ್ಷಿಗಳ ಉಪದೇಶ ಯಾವಾಗಲೂ ಪ್ರಾಯೋಗಿಕವಾಗಿ, ವೈಯುಕ್ತಿಕವಾಗಿ ಹಾಗೂ ನೇರವಾಗಿ ಇರುತ್ತಿತ್ತು. ಜಾತಿ, ಸ್ಥಾನ ಅಥವಾ ಪೂರ್ವಸಿದ್ಧತೆ ಇವಾವುದನ್ನೂ ಪರಿಗಣಿಸದೆ ಅವರು ಶ್ರದ್ಧಾವಂತ ಸಾಧಕರೆಲ್ಲರಿಗೂ ಆತ್ಮವಿಚಾರದ ವಿಧಾನವನ್ನು ಕೂಡಲೇ ಹಿಡಿಯುವಂತೆ ಸೂಚಿಸುತ್ತಿದ್ದರು. ಈ ವಿಧಾನ ಒಂದು ಬೌದ್ಧಿಕ ಅಭ್ಯಾಸ ಆಗಿರಲಿಲ್ಲ. ಅದು ಸಹಾಯಕ ನಿಯಮವಾಗಿ ಅಕರ್ಮ (ಇತರರಿಗಾಗಿ ಮಾಡುವ ಕೆಲಸ) ಮತ್ತು ಮುಖ್ಯ ಪ್ರಯತ್ನವಾಗಿ ಜ್ಞಾನ (ತನ್ನ ಮೇಲೇಯೇ ಮಾಡಿಕೊಳ್ಳುವ ಕೆಲಸ) ಇವುಗಳನ್ನು ಸಮನ್ವಯಗೊಳಿಸುವುದಾಗಿತ್ತು.

ಬುದ್ಧ, ಏಸು ಶಂಕರ ಅಥವಾ ರಾಮಕೃಷ್ಣ ಇವರು ಸಾಧಿಸಿದ್ದ ಸಾಕ್ಷಾತ್ಕಾರದ ಸ್ಥಿತಿಯ ಬಗ್ಗೆ ಜನ ಅವರನ್ನು ಅನೇಕ ಸಲ ಪ್ರಶ್ನೆ ಮಾಡಿದ್ದರು. ಸಾಮಾನ್ಯವಾಗಿ ಮೊಟಕಾಗಿರುತ್ತಿದ್ದ ಅವರ ಉತ್ತರ, ''ಇತರರ ಬಗ್ಗೆ ಏಕೆ ಚಿಂತಿಸುತ್ತೀರಿ. ನಿಮ್ಮ ಆತ್ಮವನ್ನು ಸಾಕ್ಷಾತ್ಕರಿಸಿಕೊಳ್ಳಿ'' ಎಂದಿರುತ್ತಿತ್ತು. ದೇವರನ್ನು ಕುರಿತ ಕುತೂಹಲವನ್ನೂ ಅವರು ಪ್ರೋತ್ಸಾಹಿಸುತ್ತಿರಲಿಲ್ಲ. ''ದೇವರನ್ನು ಅವನ ಪಾಡಿಗೆ ಬಿಡಿ. ನಿಮ್ಮ ವಿಷಯ ಏನು? ಮೋಕ್ಷವನ್ನು ಅದರಷ್ಟಕ್ಕೆ ಬಿಡಿ. ಬಂಧನ ಇದೆಯೇ? ನೀವು ಬಂಧನದಲ್ಲಿದ್ದೀರಾ? ಬಂಧನದಲ್ಲಿರುವವರು ಯಾರು?'' ಎನ್ನುತ್ತಿದ್ದರು.

''ಎಲ್ಲರೂ ಮುಕ್ತರೇ. ಪ್ರತಿಯೊಬ್ಬನೂ ಈಗಾಗಲೇ ಮುಕ್ತನಾಗಿದ್ದಾನೆ ಮತ್ತು ಸದಾ ಮುಕ್ತನಾಗಿದ್ದಾನೆ. ನಾವು ನಮ್ಮನ್ನು ಬದ್ಧರೆಂದು ಭಾವಿಸುವುದಕ್ಕೆ ಕಾರಣ ದೇಹವನ್ನು ಅನಂತ, ಶುದ್ಧ ಚೈತನ್ಯವಾದ ಆತ್ಮವೆಂದು ನಾವು ಭ್ರಮಿಸುವುದು. ಮುಕ್ತಿ ಎಂದು ನಾವು ಕರೆಯುವುದು ನಾನು ಮುಕ್ತನಲ್ಲ ಎಂಬ ತಪ್ಪುಭಾವನೆಯನ್ನು ಪರಿಹರಿಸಿಕೊಳ್ಳುವುದರಲ್ಲಿದೆ. ಮುಕ್ತಿ ಹೊಸದಾಗಿ ಪಡೆದ ಪದಾರ್ಥವಲ್ಲ. ಅದು ಕೇವಲ ಅಜ್ಞಾನದ, ಅವಿದ್ಯೆಯ ನಾಶ. ಭೇಧಭಾವನೆಯೇ ಅವಿದ್ಯೆ. ನಾವೆಲ್ಲರೂ ಒಂದೇ ಚೈತನ್ಯವಾಗಿರುವುದರಿಂದ ಅದು ಮಿಥ್ಯೆ. ಇರುವುದು ಏಕಮಾತ್ರ ಆತ್ಮ. ಸೀಮಿತವಾದಾಗ, ಅದು ಅಹಂಕಾರ; ಅಸೀಮಿತವಾದಾಗ ಅದು ಅನಂತ ಆತ್ಮ, ಏಕಮಾತ್ರ ಸತ್ಯ. ನೀರಿನ ಗುಳ್ಳೆಗಳಂತೆ ಅಹಂಕಾರಗಳು ಭಿನ್ನ ಭಿನ್ನ ಹಾಗೂ ಅನೇಕ. ಆತ್ಮ, ಸಾಗರದಂತೆ ಒಂದೇ. ಸದ್ವಸ್ತುವಿನೊಡನೆ ನಿಮ್ಮ ಏಕತ್ವವನ್ನು ಒಪ್ಪಿಕೊಳ್ಳಿ. ನೀರಾಗಿ; ಗುಳ್ಳೆಯಾಗಬೇಡಿ. ಒಳಕ್ಕೆ ಮುಳುಗಿ.''

ವ್ಯಾವಹಾರಿಕವಾದ 'ನಾನು' ಎಂಬುದನ್ನು ಹುಡುಕುತ್ತ, ಅದು ಅದೃಶ್ಯವಾಗುವುದನ್ನು ಕಾಣುವ ಈ ಅಂತರವಗಾಹನವೇ ಆತ್ಮವಿಚಾರ. ಅಹಂಕಾರದ ಸ್ಥಾನ 'ಅಳಿಯನ ಗೆಳೆಯ' ಎಂದು ತಪ್ಪಾಗಿ ಭಾವಿಸಿದ್ದ ವ್ಯಕ್ತಿಯದಕ್ಕಿಂತ ಹೆಚ್ಚಿನದೇನೂ ಅಲ್ಲ. ಅಹಂಕಾರವು ದೇಹಕ್ಕಾಗಲಿ ಆತ್ಮಕ್ಕಾಗಲಿ ಸಂಬಂಧಿಸಿಲ್ಲ. ಅದರ ಸ್ವರೂಪ, ಮೂಲ ಮತ್ತು ಸಂಬಂಧಗಳ ಬಗ್ಗೆ ಗಂಭೀರವಾದ ತನಿಖೆ ಮಾಡಿದಾಗ ಅದು ಅದೃಶ್ಯವಾಗುತ್ತದೆ. ''ಅಹಂಕಾರ ಒಂದು ವಸ್ತುವಲ್ಲ. ಪರೀಕ್ಷಿಸಿದ ಕೂಡಲೇ ಅದು ಮಾಯವಾಗುತ್ತದೆ. ಆಗ ಸತ್ಯ ಸ್ವತಃ ಪ್ರಕಾಶಿಸುತ್ತದೆ.''

ನೇರವಾದ ವಿಧಾನ ಇದು. ಇತರ ವಿಧಾನಗಳು 'ಮನಸ್ಸನ್ನು ಶುದ್ಧಿಗೊಳಿಸಲು' ಉಪಯುಕ್ತವಾಗಿವೆ. ಅದಕ್ಕಿಂತ ಹೆಚ್ಚೇನೂ ಅಲ್ಲ. ಅವು ಬಳಸುದಾರಿ ಮತ್ತು ಪೂರ್ವಸಿದ್ಧತೆ. ಈ ಇತರ (ಕರ್ಮ, ಯೋಗ ಮತ್ತು ಭಕ್ತಿ) ವಿಧಾನಗಳಲ್ಲಿ ಸಾಧಕನು ತನ್ನ ವೈಯುಕ್ತಿಕತೆಯನ್ನು ಉಳಿಸಿಕೊಂಡಿರುತ್ತಾನೆ. ಅಪರಿಹಾರ್ಯವಾದ ಅಂತಿಮ ಪ್ರಶ್ನೆ ಅನಿಶ್ಚಿತವಾಗಿ ಮುಂದೂಡಲ್ಪಡುತ್ತದೆ. ನೇರ ವಿಧಾನದಲ್ಲಿ ಇರುವುದು ಅಂತಿಮ ಪ್ರಶ್ನೆಯೊಂದೇ ಮತ್ತು ಅದನ್ನು ಪ್ರಾರಂಭದಲ್ಲಿಯೇ ಎತ್ತಲಾಗಿರುತ್ತದೆ. ಅನ್ವೇಷಣೆಯು ಏಕಕಾಲದಲ್ಲಿ ಸ್ವಂತವಾಗಿ ಕೈಗೊಂಡದ್ದೂ ಸಮಗ್ರವಾದದ್ದೂ ಆಗಿರುವುದರಿಂದ, ಜ್ಞಾನ ಮತ್ತು ಕರ್ಮಗಳ ಸಮ್ಮಿಶ್ರಣವಾಗಿರುವುದರಿಂದ, ಅದಕ್ಕೆ ಯಾವ ಪೂರ್ವಸಿದ್ಧತೆಯೂ ಬೇಕಾಗಿಲ್ಲ, ಅದನ್ನು ಮುಂದೂಡಲು ಅವಕಾಶವೂ ಇಲ್ಲ. ''ಅಹಂಕಾರವನ್ನು ನಾಶಮಾಡುವುದೊಂದೇ ಸಾಧಿಸಬೇಕಾದ ವಿಷಯ. ಅಹಂಕಾರವನ್ನು ನಾಶ ಮಾಡಬೇಕೆನ್ನುವುದನ್ನು ಎಲ್ಲರೂ ಒಪ್ಪುತ್ತಾರೆ. ಒಪ್ಪಿರುವ ಅಂಶದ ಮೇಲೆ ನಾವು ಇದೀಗಲೇ ಕಾರ್ಯನಿರತರಾಗೋಣ.''

ಮಹರ್ಷಿಗಳ ವಿಧಾನ ಕೇವಲ ಧ್ಯಾನವಲ್ಲ. ಇರುವುದು ಮತ್ತು ಪರಿಣಾಮ ಹೊಂದುವುದು ಈ ಎರಡೂ ರೂಪದಲ್ಲಿ, ಜ್ಞಾನ ಮತ್ತು ಕರ್ಮ ಈ ಎರಡೂ ರೂಪದಲ್ಲಿ, ನಮ್ಮ ಸ್ವರೂಪದ ವಿಷಯದಲ್ಲಿ ಅದು ಒಂದು ಪ್ರಾಮಾಣಿಕವಾದ, ಶ್ರಮಪೂರ್ವಕವಾದ ಜಿಜ್ಞಾಸೆ. ''ಜ್ಞಾನ ಮತ್ತು ಸಹಜ ಸ್ಥಿತಿ. ಧ್ಯಾನವು ಕರ್ತೃತಂತ್ರ, ಕರ್ತನೊಬ್ಬನ ಕ್ರಿಯೆ. ಜ್ಞಾನವು ವಸ್ತುತಂತ್ರ, ಸತ್ಯದ ಕ್ರಿಯೆ.'' ''ದೈವೀಜ್ಞಾನವನ್ನು ಮೇಲಿನಿಂದ ಕೆಳಕ್ಕೆ ತರುವ'' ವಿಷಯದ ಎಲ್ಲ ಮಾತುಗಳನ್ನೂ ಅವರು ವಿರೋಧಿಸುತ್ತಾರೆ. ಅವರು ಕೇಳುವುದು: ''ದೈವೀಜ್ಞಾನವು ಈಗಾಗಲೇ ಹೃದಯಲ್ಲಿ ಇಲ್ಲವೇ? ಆತ್ಮನು ಹೃದಯಾಕಾಶದಲ್ಲಿ ಇದ್ದಾನೆಂದು ಶ್ರೀಕೃಷ್ಣನು ಹೇಳುತ್ತಾನೆ. ಸೂರ್ಯನಲ್ಲಿ ಇರುವವನೇ ಈ ಮಾನವ ವ್ಯಕ್ತಿಯಲ್ಲಿಯೂ ಇದ್ದಾನೆಂದು ಉಪನಿಷತ್ತು ಹೇಳುತ್ತದೆ. ಸ್ವರ್ಗದ ರಾಜ್ಯ ನಿಮ್ಮೊಳಗೇ ಇದೆ ಎಂದು ಏಸು ಹೇಳುತ್ತಾನೆ. ಸತ್ಯವು ನಮ್ಮೊಳಗಿದೆ ಎಂಬುದನ್ನು ಎಲ್ಲರೂ ಒಪ್ಪುತ್ತಾರೆ. ಯಾರು ಯಾವುದನ್ನು, ಎಲ್ಲಿಂದ ಮತ್ತು ಹೇಗೆ ತರಬೇಕು? ಕೊಠಡಿಯೊಳಕ್ಕೆ ನೀವು ಆಕಾಶವನ್ನು ಅಥವಾ ಸೂರ್ಯನ ಬೆಳಕನ್ನು ತರುವುದಿಲ್ಲವಷ್ಟೆ. ಅಲ್ಲಿರುವ ಸಾಮಾನನ್ನು ಮಾತ್ರ ಹೊರಹಾಕುತ್ತೀರಿ ಅಥವಾ ಕಿಟಕಿಯನ್ನು ತೆರೆಯುತ್ತೀರಿ.''

ಆತ್ಮ ಎಂದೂ ಬಂಧನದಲ್ಲಿಲ್ಲ ಮತ್ತು ಅದಕ್ಕೆ ಯಾವುದೇ ವಿಮೋಚನೆಯ ಅಗತ್ಯವಿಲ್ಲ. ಎಲ್ಲ ತೊಂದರೆಗಳನ್ನೂ ಉಂಟುಮಾಡಿ, ಎಲ್ಲ ಅಡಚಣೆಗಳನ್ನೂ ಒಡ್ಡಿ, ಅನಂತರ ವಿಮೋಚನೆಗಾಗಿ ಹಾತೊರೆಯುವುದು ದೇಹಬಂಧನದಲ್ಲಿರುವ ಅಹಂಕಾರ.

ಆದರೆ ಈ ಪ್ರತ್ಯೇಕತಾಭಾವನೆ ಒಂದು ಭ್ರಾಂತಿ. ಆದ್ದರಿಂದ ಈಗ ಮೂಡಿಸ ಬೇಕಾಗಿರುವುದು ಆತ್ಮಸಾಕ್ಷಾತ್ಕಾರವನ್ನಲ್ಲ, ನಾವು ದೇಹ ಎಂಬ ನಮ್ಮ ಸದ್ಯದ ತಪ್ಪಿನ ಅರಿವನ್ನು. ತಪ್ಪನ್ನು ಅರಿತುಕೊಳ್ಳುವ ಅಥವಾ ಕತ್ತಲೆಯನ್ನು ಹೋಗಲಾಡಿಸುವ ಕ್ರಮಕ್ಕೆ ಹೆಚ್ಚು ಕಾಲ ಬೇಕಾಗಿಲ್ಲ. ಜ್ಞಾನದ ಪ್ರಾಪ್ತಿಗೆ ಬಹಳ ವರ್ಷಗಳು ಹಿಡಿಸುತ್ತವೆ ಎಂದು ಒಬ್ಬ ಭಕ್ತ ಗೊಣಗಿದಾಗ, ಮಹರ್ಷಿಗಳು, ''ಬಹಳ ವರ್ಷಗಳು ಏಕೆ? ಕಾಲದ ಕಲ್ಪನೆ ಇರುವುದು ನಿನ್ನ ಮನಸ್ಸಿನಲ್ಲಿ. ಆತ್ಮದಲ್ಲಿ ಕಾಲವಿಲ್ಲ. ಕಾಲ ಎನ್ನುವುದು ಅಹಂಕಾರ ಉದಯಿಸಿದ

ತರುವಾಯ ಹುಟ್ಟುವ ಒಂದು ಕಲ್ಪನೆ. ಕಾಲದೇಶಗಳ ಆಚೆಗೆ ಇರುವ ಆತ್ಮ ನೀನು'' ಎಂದು ಉತ್ತರ ನೀಡಿದರು.

ಆತ್ಮಸಾಕ್ಷಾತ್ಕಾರ ಎಂದರೆ ಅನಾತ್ಮದ ತ್ಯಾಗ ಅಷ್ಟೆ. ''ನಾಡಿಗಳು, ಕುಂಡಲಿನಿಗಳು ಅಥವಾ ಷಟ್ಚಕ್ರಗಳ ವಿಷಯಗಳನ್ನು ವಿಶದಗೊಳಿಸುವ ಬದಲು ಎಂದೆಂದಿಗೂ ಬಗೆಹರಿಯದ ಗೊಂದಲವನ್ನು ಮಾತ್ರ ಕಲ್ಪಿಸುತ್ತವೆ. ಆತ್ಮ ಸ್ಪಷ್ಟಗೋಚರವಾಗಿದೆ ಮತ್ತು ಸದಾ ಸನ್ನಿಹಿತವಾಗಿದೆ. ಆತ್ಮರೂಪವಾಗಿಯೇ ಏಕೆ ಇದ್ದು ಬಿಡಬಾರದು? ಅನಾತ್ಮವನ್ನು ಏಕೆ ವಿವರಿಸಬೇಕು?'' ಧರ್ಮವನ್ನೇ ಅವರು ''ನಟನೆಯ ಒಂದು ದೊಡ್ಡ ಆಟ'' ಎಂದು ಕರೆಯುತ್ತಾರೆ. ''ಎಲ್ಲ ಧರ್ಮಗಳ ಗುರಿ ನಮ್ಮ ಆದಿಸ್ಥಿತಿಯಾದ ಸಚ್ಚಿದಾನಂದಕ್ಕೆ ನಮ್ಮನ್ನು ಹಿಂದಕ್ಕೊಯ್ಯುವುದು. ಈ ಸರಳ ಸತ್ಯವನ್ನು ಬೋಧಿಸಲು ಎಷ್ಟೋ ಪಂಥಗಳು, ಗ್ರಂಥಗಳು, ಮತಗಳು ಮತ್ತು ವಿಧಾನಗಳು ಹುಟ್ಟಿಕೊಂಡಿವೆ. ಇದಕ್ಕೆ ಕಾರಣ ಜನಗಳಿಗೆ ಸಂಕೀರ್ಣತೆ ಬೇಕು. ವಾದ ವಿವಾದವನ್ನು ಎಬ್ಬಿಸುವ ವಿಸ್ತಾರವಾದ ಹಾಗೂ ತೊಡಕಿನ ವಿಷಯಗಳು ಅವರಿಗೆ ಬೇಕು. ಸ್ವರ್ಗದ ರಾಜ್ಯ ನಿಮ್ಮೊಳಗೇ ನಿಮ್ಮ ಹಿಡಿಯಲ್ಲೇ, ನೇರ ನಿಮ್ಮ ಮಧ್ಯದಲ್ಲೇ ಇದೆ. ಸರಳ ಸತ್ಯ ಇದಿಷ್ಟೇ. ಆದರೆ ಪರಿಪಕ್ವವಾದ ಮನಸ್ಸು ಮಾತ್ರವೇ ಈ ಸತ್ಯವನ್ನು ಅದರ ಅನಾವೃತಸ್ಥಿತಿಯಲ್ಲಿ ಗ್ರಹಿಸಬಲ್ಲದು. ಆತ್ಮದಂತೆ ಇದ್ದು, ವರ್ತಿಸಿ, ಹೊಸ ಬಾಳೊಂದನ್ನು ಪ್ರಾರಂಭಿಸುವುದನ್ನು ಬಿಟ್ಟು, ಸ್ವರ್ಗ, ನರಕ, ಪುನರ್ಜನ್ಮ ಮತ್ತು ಇತರ ರಹಸ್ಯಗಳು ಇವೆನೆಲ್ಲಾ ತಿಳಿದುಕೊಳ್ಳಲು ಜನ ಅಪೇಕ್ಷಿಸುತ್ತಾರೆ. ಧರ್ಮಗಳು ಎನಿಸಿಕೊಂಡಿರುವವು ಅವರು ಕೇಳಿದ್ದನ್ನೆಲ್ಲ ಒದಗಿಸುತ್ತವೆ. ಇಷ್ಟೆಲ್ಲಾ ಸುತ್ತಾಡಿದ ಮೇಲೆ ನೀವು ಆತ್ಮಕ್ಕೇ ಹಿಂದಿರುಗಬೇಕಾಗಿದೆ. ಆದ್ದರಿಂದ ಈಗಲೇ, ಇಲ್ಲಿಯೇ ಆತ್ಮದಲ್ಲಿ ಏಕೆ ನೆಲಸಬಾರದು? ಈ ಶಬ್ದಾಡಂಬರವನ್ನೆಲ್ಲ ಬಿಟ್ಟುಬಿಡಿ. ನೀವು ಸಹಜವಾಗಿ ಇರುವಂತೆ ಇರಿ. ನೀವು ಯಾರು ಎನ್ನುವುದನ್ನು ಕಂಡುಕೊಳ್ಳಿ. ಆತ್ಮವಾಗಿ, ಚೈತನ್ಯರೂಪವಾಗಿ ಮತ್ತು ಹುಟ್ಟು, ಬರುವುದು, ಹೋಗುವುದು, ಮತ್ತೆ ಬರುವುದು ಇವುಗಳಿಂದ ಮುಕ್ತರಾಗಿ ಇರಿ. ಭ್ರಾಂತಿರೂಪವಾದ ಅವಿದ್ಯೆಯನ್ನು ತೊಡೆದುಹಾಕಲು ಅಷ್ಟೆಲ್ಲಾ ಪ್ರಯತ್ನಗಳು ಮತ್ತು ಅಷ್ಟೆಲ್ಲಾ ನಿಯಮನಿಷ್ಠೆ ಏಕೆ ಬೇಕು?''

ಸಂಪೂರ್ಣವಾಗಿ ಅಂತರ್ಮುಖರಾಗಿ ಪರಮಜ್ಞಾನವನ್ನು ಪಡೆಯಲು, ಸತ್ಯದ ಎರಡೂ ವರ್ಗಗಳನ್ನು ಕೂಡಲೇ ಅಂಗೀಕರಿಸಲು ಹಠಾತ್ತಾಗಿ ನೀಡಿದ ಇಂಥ ಕರೆ ಪಂಡಿತರಾಗಿದ್ದರೂ ಜಡಬುದ್ಧಿಯುಳ್ಳವರಿಗೆ ಖಂಡಿತವಾಗಿಯೂ ಮುಜುಗರ ಉಂಟು ಮಾಡುತ್ತದೆ. ಆದ್ದರಿಂದಲೇ ಕೆಲವು ವಿದ್ವಾಂಸರು ಮಹರ್ಷಿಗಳ ಉಪದೇಶ ತೀರ ಋಜುವಾದುದು, ಸರಳವಾಗಿ ಕಂಡರೂ ಅವರ ವಿಧಾನ ಕಷ್ಟವಾದುದು, ಅವರ ಮಾರ್ಗ ಬಹಳ ಕಡಿದು ಮತ್ತು ಹ್ರಸ್ವ, ಪ್ರಾರಂಭದ ಸ್ಥಳದಿಂದ ಕೊನೆಯ ತಾಣದವರೆಗೆ ನಡುವೆ ಮೆಟ್ಟಿಲುಗಳೇ ಇಲ್ಲದ್ದು ಎಂದೆಲ್ಲಾ ಆಕ್ಷೇಪಿಸಿದರು. ಆದರೆ ದಿ **ಇನ್‌ಫಿನಿಟ್** ವೇ (ಅನಂತ ಪಥ)ದ ಜೊಯೆಲ್ ಗೋಲ್ಡ್ ಸ್ಮಿತ್‌ನಂತೆ, ಮಹರ್ಷಿಗಳು ಸದ್ಯೋಮುಕ್ತಿಯ, ಈ ಕ್ಷಣದಲ್ಲಿಯೇ ವಿಮೋಚನೆಯ ಸತ್ಯತೆಯನ್ನು ಘೋಷಿಸುತ್ತಾರೆ. ಆತ್ಮವಾಗಿ, ಆತ್ಮದಂತೆ ವ್ಯವಹರಿಸುವ ಬದಲು 'ಆತ್ಮವನ್ನು ಅರಿಯುವ' ಮಿಥ್ಯಾರೂಪದ ದ್ವೈತವನ್ನು ಅವರು ಸಹಿಸರು. ಆತ್ಮವಾಗಿ, ಆತ್ಮದಂತೆ ಎಂದರೆ ಪರಿಸ್ಥಿತಿಗೆ ಅನುಗುಣವಾಗಿ ಪ್ರತ್ಯೇಕವಾದ, ಸಾಪೇಕ್ಷವಾದ, ಪಾಲುಗೊಂಡ ಅಥವಾ

ನಿರುಪಾಧಿಕವಾದ ಚೈತನ್ಯರೂಪವಾಗಿ ಎಂದು. ದೇಹಗಳಾಗಿಲ್ಲದೆ, ಜ್ಞಾನರೂಪವಾಗಿ ಆ ರೀತಿ ಇರುವುದು ಮತ್ತು ವರ್ತಿಸುವುದು ಮಾತ್ರವೇ, ಅವರ ಪ್ರಕಾರ ನಿಜವಾಗಿ ಮಾನವರಾಗಿರುವ ಮಾರ್ಗ. ಒಮ್ಮೊಮ್ಮೆ ಮೋಕ್ಷದ ಆನಂದವನ್ನು ಸವಿಯುತ್ತ ಮತ್ತು ಕೆಲವೊಮ್ಮೆ ಸಾಹಸಕಥೆಯ ವೀರರಂತೆ ವರ್ತಿಸುತ್ತ ಇರುವ ಮಾನವತ್ವವು ದೇವತ್ವವನ್ನು ಒಳಗೊಂಡರೂ, ಮಾನವರಾಗುವುದನ್ನು ನಾವು ಮುಂದೂಡಲಾಗುವುದಿಲ್ಲ. ವೀರತ್ವದ ಮೂಲಕ ದೇವತ್ವ ಪಡೆಯುವುದು ನಿಜವಾಗಿ ನಮ್ಮ ಅಪರಿಹಾರ್ಯವಾದ ವಿಧಿ. ಇತರ ಜೀವರ ಸಂಗಡ ಘರ್ಷಣೆಯಲ್ಲಿರುವ ಅಸುರ ಜೀವರಾಗುವ ಮೂಲಕ ಮಾತ್ರವೇ ನಾವು ಆ ವಿಧಿಯನ್ನು ತಪ್ಪಿಸಿಕೊಳ್ಳಬಹುದು. ನಮ್ಮೊಳಗಿರುವ ಅಮರಚೈತನ್ಯವು ನಮಗೆ ಗಂಟುಬಿದ್ದದ್ದು. ಅದನ್ನು ನಾವು ತೊರೆಯಲಾಗುವುದಿಲ್ಲ. ಆದರಿಂದ ಬಿಡಿಸಿಕೊಳ್ಳಲೂ ಆಗುವುದಿಲ್ಲ. ಅದೇ ಏಕಮಾತ್ರ ಸತ್ಯವೆಂದು ಕೊನೆಯಲ್ಲಿ ನಾವು ಕಂಡುಕೊಳ್ಳುತ್ತೇವೆ. ವಾಸ್ತವಿಕ ಶಬ್ದಗಳಲ್ಲಿ ನಿರೂಪಿಸುವುದಾದರೆ, ಅವರ ಉಪದೇಶವು ಅಖಂಡತೆಯ ದುಂಡು ಹಿಡಿಯಿಂದ ಚಾಕುವನ್ನು ಹಿಡಿದುಕೊಂಡು ಪ್ರತಿ ಸಂದರ್ಭದಲ್ಲಿಯೂ ವ್ಯಕ್ತಿಗಳೊಡನೆ ವ್ಯವಹರಿಸುವುವಾಗ ಎಲ್ಲರೂ ಸಮಾನವಾಗಿ ಹೊಂದಿರುವ ಜ್ಞಾನವನ್ನು ಬಳಸುತ್ತ ಮತ್ತು ಭಾವನೆಗಳು, ಸಂಸ್ಥೆಗಳು ಹಾಗೂ ಇತರ ನಿರ್ಜೀವ ಪದಾರ್ಥಗಳನ್ನು ನಿರ್ದಯವಾಗಿ ಕತ್ತರಿಸಿಹಾಕುವುದಕ್ಕೆ ಸಮನಾಗಿದೆ.

ಅಂಥ ಅಖಂಡ ಸತ್ಯದಲ್ಲಿ ಇಲ್ಲಿಯೇ ಇಂದೇ ಬಾಳನ್ನು ಪ್ರಾರಂಭಿಸುವಂತೆ ಸಾಮಾನ್ಯ ಜನಕ್ಕೆ ಸಹಾಯ ಮಾಡಲು ಮಹರ್ಷಿ 'ನಾನು ಯಾರು?' ಎಂಬ ಮೂಲಭೂತ ಪ್ರಶ್ನೆಯನ್ನು ಒದಗಿಸಿದ್ದಾರೆ. ಈ ಪ್ರಶ್ನೆಯನ್ನು ಒಂದು ಬೀಜದಂತೆ ನಮ್ಮ ಹೃದಯದಲ್ಲಿ ನೆಟ್ಟು, ನಮ್ಮ ಸ್ಥಿತಿಯಲ್ಲಿ ಸ್ಥಿರವಾಗಿ ನಿಂತು, ನಮ್ಮ ಸ್ವಧರ್ಮವನ್ನು ಅವಲಂಬಿಸಿ ನಮ್ಮ ಸ್ವಂತ ಉತ್ತರಗಳನ್ನು ಶಬ್ದಗಳ ಮೂಲಕ ಬೆಳೆಸದೆ ಜ್ಞಾನದ ನಿಶ್ಶಬ್ದ ಆನಂದದಲ್ಲಿ ಮತ್ತು ಕರ್ಮದ ಎಲೆ, ಹೂವು, ಹಣ್ಣುಗಳಲ್ಲಿ ಬೆಳೆಸುವಂತೆ ನಮಗೆ ಹೇಳಲಾಗಿದೆ. ಮನಸ್ಸನ್ನು ಹೆಚ್ಚು ಹೆಚ್ಚು ನಿರ್ಮಲವಾಗಿಸುವ ಮತ್ತು ಹೆಚ್ಚು ಮೃದುವಾಗಿಸುವ, ಸದಾ ಹೊಸದಾಗಿರುವ ಮತ್ತು ಮರ್ಮಭೇದಿಯಾದ ಈ ಪ್ರಶ್ನೆಯ ಮೂಲಕ ಮಹರ್ಷಿ ಪ್ರಾಚೀನ ಜ್ಞಾನ ಪರಂಪರೆಯನ್ನು ಆಧುನಿಕ ಪ್ರಪಂಚದ ಮಾರುಕಟ್ಟೆಯ ಜಾಗಕ್ಕೆ ತರುತ್ತಾರೆ. ಪ್ರತಿಯೊಬ್ಬ ವ್ಯಕ್ತಿಯೂ ಹಿಂದಿನದಕ್ಕೆ ಗಮನಕೊಡದೆ, ಇಂದು ಪೂರ್ತಿ ಅರಿವು ಪಡೆದಿದ್ದು, ಸುಖದ ಹಾಗೂ ಒಳಿತಿನ ಸಾಮ್ರಾಜ್ಯವನ್ನು ವಿಸ್ತರಿಸಲು ಸ್ವಾತಂತ್ರ್ಯ ಹೊಂದಿದ್ದು ತನ್ನ ಭವಿಷ್ಯತ್ತಿನ ಪೂರ್ಣ ಜವಾಬ್ದಾರಿಯನ್ನು ಸಾಕ್ಷಾತ್ತಾಗಿ ವಹಿಸಬೇಕೆಂದು ಅವರು ಒತ್ತಾಯ ಪೂರ್ವಕವಾಗಿ ಹೇಳುತ್ತಾರೆ. ಪ್ರತ್ಯೇಕವಾದ ಅಹಂಕಾರದ ಬುಡಕ್ಕೆ 'ನಾನು ಯಾರು?' ಎಂಬ ಕೊಡಲಿಯನಿಟ್ಟು, ಕರ್ಮವನ್ನು ಜ್ಞಾನದ ಲೆಕ್ಕದಲ್ಲಿ ಬೆಲೆಕಟ್ಟಿ ಅವರು ಒಂದೇ ಏಟಿನಲ್ಲಿ ವಾದವಿವಾದಗಳ ದಟ್ಟಕಾಡನ್ನು ಮತ್ತು 'ಒಬ್ಬನ ಸ್ಥಾನ ಹಾಗೂ ಅದರ ಕರ್ತವ್ಯಗಳ' ಜಟಿಲ ನೀತಿನಿಯಮಗಳನ್ನು ಕಡಿದು ಹಾಕುತ್ತಾರೆ. ನಮ್ಮಿಂದ ಅತ್ಯಂತ ಜವಾಬ್ದಾರಿಯನ್ನು ಬೇಡುವ ಮತ್ತು ಇತರರಿಗೆ ಅತ್ಯಂತ ಹೆಚ್ಚಿನ ಸ್ವಾತಂತ್ರ್ಯವನ್ನು ನೀಡುವ 'ದೇವಾನುಗ್ರಹದ' ಬೆಳಕಿಗೆ ಪ್ರವೇಶ ಕಲ್ಪಿಸುತ್ತಾರೆ.

ಪ್ರಾಪಂಚಿಕ ವಸ್ತುಗಳು ಮಾನವನ ಬೆನ್ನೇರಿ ಮಾನವಕುಲವನ್ನು ನಡೆಸುತ್ತಿರುವ

ಜಗತ್ತಿನಲ್ಲಿ, ಮಹರ್ಷಿಗಳು ಮಾನವವ್ಯಕ್ತಿಗೆ ದೇವರಾಜ್ಯದ ಸ್ವರಾಜ್ಯವನ್ನು, ತನ್ನ ನಿಜ ಸ್ವರೂಪದಲ್ಲಿರುವ, ಮತ್ತು ಸೃಷ್ಟಿಶೀಲ ಚೈತನ್ಯ ಹಾಗೂ ಸಹಜಕ್ರಿಯೆಗಳ ಜೀವಂತ ಕೇಂದ್ರವಾಗಿ ನಿರ್ದಿಷ್ಟ ವರ್ಗವೊಂದರ ಜವಾಬ್ದಾರಿಯುಕ್ತ ಸದಸ್ಯನಾಗಿ ವರ್ತಿಸುವ, ನೈತಿಕ ಧೈರ್ಯವನ್ನು ಹಿಂದಕ್ಕೆ ತಂದುಕೊಡುತ್ತಾರೆ. ''ಹೃದಯದಲ್ಲಿರುವ ಅಹಂ ಅನ್ನು ನೆನಪಿನಲ್ಲಿಟ್ಟಿರುವ ವ್ಯಕ್ತಿಗೆ ಧರ್ಮಾಧರ್ಮಗಳ ಸಮಸ್ಯೆಗಳ ಸಂಬಂಧವಿಲ್ಲ. ಅವನ ಕ್ರಿಯೆಗಳು ಭಗವಂತನವು. ಆದ್ದರಿಂದ ಅವು ಯಾವಾಗಲೂ ಸರಿಯಾದವೇ ''ಎಂದು ಅವರು ಸ್ಪಷ್ಟವಾಗಿ ಘೋಷಿಸುತ್ತಾರೆ. ಅಂತಸ್ಸಾಕ್ಷಿ ಮತ್ತು ಚಿಂತನೆ ನಮ್ಮನ್ನು ಹೇಡಿಗಳನ್ನಾಗಿ ಮಾಡಿದರೆ, ನಮ್ಮೊಳಗಿರುವ ಅಹಂ ಅನ್ನು ನೆನೆದು ಸದ್ಯದ ಅಗತ್ಯಕ್ಕೆ ಅನುಗುಣವಾಗಿ ಸಹಜವಾಗಿ ಕೆಲಸಮಾಡುವ ಮೂಲಕ ನಾವು ಪುರುಷೋಚಿತ ಬಲವನ್ನು ಸಂಪಾದಿಸುತ್ತೇವೆ. ಅಂಥ ಕೆಲಸ ಯಾರಿಗೂ ಬಂಧಕವಾಗುವುದಿಲ್ಲ. ಅದು ಅಕರ್ಮಕ್ಕೆ ಸಮಾನವಾಗುತ್ತದೆ. ''ಒಳಕ್ಕೆ ತಿರುಗಿಸಿದ ಮನಸ್ಸುಳ್ಳ ಅಂತರ್ಮುಖಿಗೆ ಶಾಸ್ತ್ರದ ಅಥವಾ ಶೃತಿಪ್ರಮಾಣದ ಅವಶ್ಯಕತೆ ಇಲ್ಲ ಆತ್ಮ ಪುಸ್ತಕಗಳಲ್ಲಿಲ್ಲ. ಅದು ನಮ್ಮೊಳಗಿದೆ.''

ಆತ್ಮ ವಿಚಾರವು ಭಕ್ತಿ, ಯೋಗ, ಬೌದ್ಧಿಕ ಚರ್ಚೆಯಂಥ ಎಲ್ಲಾ ವಿಧಾನಗಳನ್ನೂ ಒಳಗೊಂಡಿದೆ. ಆದರೆ ಜ್ಞಾನವು ಉದಯಿಸುವ ಮುನ್ನ ವಾಸನೆಗಳನ್ನು ತ್ಯಜಿಸಬೇಕು. ''ಸತ್ಯಕ್ಕಾಗಿ ಎಲ್ಲವನ್ನೂ ತ್ಯಾಗಮಾಡಲು ಸಿದ್ಧವಾಗಿರಬೇಕು. ತ್ಯಾಗದ ಮಟ್ಟವೇ ನಮ್ಮ ಪ್ರಗತಿಯ ಅಳತೆ. ತುಪ್ಪ ಸುರಿದು ಬೆಂಕಿಯನ್ನು ಆರಿಸಲಾಗದಂತೆ, ಕಾಮನೆಗಳಿಗೆ ವಶರಾಗಿ ಅವನ್ನು ದುರ್ಬಲಗೊಳಿಸಲಾಗುವುದಿಲ್ಲ. ಆತ್ಮ ಸಂಯಮ ಅದಕ್ಕೆ ಬೇಕು. ಈ ಸಂಯಮವನ್ನು ಜ್ಞಾನ ಬಲಗೊಳಿಸುತ್ತದೆ. ನೀವು ಮನಸ್ಸಲ್ಲ ಮತ್ತು ಕಾಮನೆಗಳಿರುವುದು ಮನಸ್ಸಿನಲ್ಲಿ ಎಂಬುದನ್ನು ಅರಿತುಕೊಳ್ಳಿ. ಇದನ್ನು ಅರಿತರೆ ಅವನ್ನು ನಿಯಂತ್ರಿಸುವುದಕ್ಕೆ ಸಹಾಯವಾಗುತ್ತದೆ. ಕಾಮನೆಗಳಿಗೆ ವಶವಾಗದಿರಲು ಪದೇ ಪದೇ ಪ್ರಯತ್ನ ಮಾಡಿದಲ್ಲಿ ಕಾಲಕ್ರಮೇಣ ಅವು ದುರ್ಬಲವಾಗುತ್ತವೆ. ನಿಮ್ಮ ನಿಜವಾದ ಸ್ವರೂಪ ಶುದ್ಧ ಚೈತನ್ಯ ಎಂಬುದನ್ನು ಎಂದಿಗೂ ಮರೆಯಬೇಡಿ.''

ಇತರರ ಒಳಿತಿಗಾಗಿ ಅಥವಾ ಯಾವುದೋ ನಿಸ್ವಾರ್ಥ ಉದ್ದೇಶಕ್ಕಾಗಿ ಮಾಡುವ ನಿಷ್ಕಾಮಕರ್ಮ ನಮ್ಮ ದೃಷ್ಟಿಯನ್ನು ವಿಶಾಲಗೊಳಿಸುತ್ತದೆ. ಮನಸ್ಸನ್ನು ಶುದ್ಧಿಗೊಳಿಸುತ್ತದೆ ಮತ್ತು ಅಹಂಕಾರವನ್ನು ತಗ್ಗಿಸುತ್ತದೆ. ಸ್ವರಾಜ್ಯದ ಕೆಲಸದಲ್ಲಿ ವ್ಯಕ್ತಿ ದೇಶಸೇವೆಯಲ್ಲಿ ಲೀನವಾಗಿದ್ದ. ನಿಷ್ಕಾಮಕರ್ಮ ಸ್ವಾರ್ಥರಹಿತ ಕ್ರಿಯೆ, ಆತ್ಮವಿಚಾರಕ್ಕೆ ಸಹಾಯ ಮಾಡುತ್ತದೆ. ಗಾಂಧೀಜಿಯಲ್ಲಿ ಕ್ರಿಯಾಶೀಲವಾಗಿದ್ದ ಮತ್ತು ಅವರನ್ನು ಮುನ್ನಡೆಸುತ್ತಿದ್ದ ಆಧ್ಯಾತ್ಮಶಕ್ತಿಯನ್ನು ಮಹರ್ಷಿ ಗುರುತಿಸಿದರು. ಅಂಥ ಅನಾಸಕ್ತಿ ಮತ್ತು ಮೇಲಿನ ಶಕ್ತಿಯೊಂದಕ್ಕೆ ಶರಣಾಗತಿಗಳನ್ನು ಬೆಳೆಸಿಕೊಳ್ಳುವಂತೆ ಇತರರಿಗೆ ಸಲಹೆಯಿತ್ತರು. ಕೆಲಸ ಮತ್ತು ಪೂಜೆ ಸಮಸಮನಾಗಿ ಹೋಗಬಲ್ಲವು. ''ಗೋಪಿಯರು ಕುಣಿಯುತ್ತ. ಹಾಡುತ್ತ ಮತ್ತು ಮೊಸರು ಕಡೆಯುತ್ತ ಇದ್ದಂತೆ, ಕೃಷ್ಣನನ್ನು ಚಿಂತಿಸುತ್ತಿದ್ದರು. ಭಕ್ತಿ ಮತ್ತು ಕರ್ಮ ಇಲ್ಲಿ ಹೇಗೆ ಒಂದೇ ಯೋಗವಾಗಿವೆ ಎಂಬುದನ್ನು ನೋಡಿ.'' ಭಕ್ತಿ ಶರಣಾಗತಿಗೆ ಒಯ್ಯುತ್ತದೆ. ಈ ಶರಣಾಗತಿ ''ಯಾವುದೇ ಕಲ್ಪನೆಯೊಂದಕ್ಕೆ, ಯಾವುದೇ ದೇವತಾರೂಪಕ್ಕೆ, ಒಬ್ಬ ಸದ್ಗುರುವಿಗೆ, ಒಟ್ಟಿನಲ್ಲಿ ಮಾನವಕುಲಕ್ಕೆ, ಸೌಂದರ್ಯ ಅಥವಾ ಧರ್ಮದ ಭಾವನೆಗೆ''

ಆಗಬಹುದು.

ಜ್ಞಾನದ ಬೌದ್ಧಿಕಮಾರ್ಗ ಮತ್ತು ಭಕ್ತಿಯ ಭಾವಮಾರ್ಗ ಇವೆರಡರ ಗುರಿಯೂ ಒಂದೇ. ಎರಡೂ ಸಂದರ್ಭಗಳಲ್ಲಿ 'ನಾನು' ಎನ್ನುವುದರ ಪ್ರತ್ಯೇಕ ಅಸ್ತಿತ್ವ ಇಲ್ಲದಾಗಿರುತ್ತದೆ. ಭಕ್ತಿಯಲ್ಲಿ 'ನನ್ನದು' ಎನ್ನುವುದು ಮೊದಲು ಅಳಿಯುತ್ತದೆ. ಜ್ಞಾನದಲ್ಲಿ 'ನಾನು' ಎನ್ನುವುದು ಮೊದಲು ಅಳಿಯುತ್ತದೆ. ಆದರೆ ಜ್ಞಾನಮಾರ್ಗದಲ್ಲಿ ಪ್ರಾರಂಭದ ಬೌದ್ಧಿಕ ಪ್ರಯತ್ನ ಅನಿವಾರ್ಯವಾಗಿದೆ. ಅದನ್ನು ಮಾಡಲು ಮತ್ತು ಮುಂದುವರೆಸಲು ನಾವು ಸಿದ್ಧರಾಗಿರಬೇಕು. ಇಲ್ಲಿ ಅನುಸರಿಸಬೇಕಾದ ಮಾದರಿ ಬೆಕ್ಕಿನ ಮರಿಯದ್ದಕ್ಕಿಂತ ಹೆಚ್ಚಾಗಿ ಕಪಿಯ ಮರಿಯದು. ನಾವು ಹಿಡಿದುಕೊಳ್ಳಲು ಕಲಿಯಬೇಕು. ನಮ್ಮನ್ನು ಎತ್ತಿಕೊಂಡು ಹೋಗುವುದನ್ನು ನಿರೀಕ್ಷಿಸಬಾರದು. ದೇವರು ಮತ್ತು ಗುರು ಸಹಾಯ-ಕರಾಗಬಹುದು, ಆದರೆ ಅವರೇ ಕೆಲಸಮಾಡುವುದಿಲ್ಲ. ''ನಿಮ್ಮ ಪರವಾಗಿ ಕನ್ನಡಕವು ಸೂರ್ಯನನ್ನು ನೋಡಲಾಗುತ್ತದೆಯೇ?''

ಎಲ್ಲಿ ಪ್ರಾರಂಭ ಮಾಡಬೇಕು ಎನ್ನುವುದರ ಬಗ್ಗೆ ಕಾಲಹರಣ ಮಾಡುವ ಬದಲು ಮತ್ತು ಗುರುವಿಗಾಗಿ ಅಥವಾ ಸತ್ಸಂಗದ ಅವಕಾಶಕ್ಕಾಗಿ ಕಾಯುವ ಬದಲು ಎಲ್ಲಿಯೋ ಒಂದು ಕಡೆ ಶುರು ಮಾಡಿ ಮತ್ತು ಈಗಲೇ ಶುರು ಮಾಡಿ, ''ಆತ್ಮ ಸತ್. ಆತ್ಮರ ಆತ್ಮ ಸಾಧು. ಆದ್ದರಿಂದ ಯಾರೂ ಸತ್ಸಂಗದಿಂದ ಅಥವಾ ಸಾಧುಗಳ ಸಂಗದಿಂದ ದೂರವಾಗಿಲ್ಲ. ಗುರು ಹೊರಗಿಲ್ಲ. ಸಾಧಕನು ಉಪಾಸನೆಯಲ್ಲಿ, ಭಕ್ತಿಯಲ್ಲಿ ಮತ್ತು ಧ್ಯಾನದಲ್ಲಿ ಸಿಕ್ಕಿಬೀಳಬಾರದು. 'ನಾನು ಯಾರು?' ಎಂಬ ಪ್ರಶ್ನೆಯನ್ನು ಹಾಕಿ ಅವನು ಸಾಧನೆಯನ್ನು ಪ್ರಾರಂಭಿಸಬೇಕು.''

ಚೈತನ್ಯವು ಏಕಮಾತ್ರ ಸತ್ಯವಾಗಿರುವುದರಿಂದ, ಸಮಾಜದಲ್ಲಿನ ಜೀವನವಷ್ಟೇ ಅಲ್ಲದೆ, ಮಾನವನ ಮತ್ತು ಪ್ರಕೃತಿಯ ಅಸ್ತಿತ್ವವು ನಿರಂತರವೂ ಅವಿಚ್ಛಿನ್ನವೂ ಆಗಿದೆ. ''ಮರವು ಅಚಲ ಮನುಷ್ಯ, ಮನುಷ್ಯನು ಚಲಿಸುವ ಮರ. ಗಿಡಗಳು ಸದಾ ನಿದ್ದೆಯಲ್ಲಿರುತ್ತವೆ; ಪ್ರಾಣಿಗಳು ಕನಸು ಕಾಣುತ್ತವೆ ಹಾಗೂ ನಿದ್ದೆ ಮಾಡುತ್ತವೆ; ದೇವತೆಗಳು ಸದಾ ಎಚ್ಚರವಾಗಿರುತ್ತಾರೆ. ಮಾನವನಿಗೆ ಈ ಮೂರು ಅವಸ್ಥೆಗಳೂ ಉಂಟು. ಯೋಗಿಯು ಇವೆಲ್ಲವನ್ನೂ ಮೀರಿರುವ ತುರೀಯದಲ್ಲಿರುತ್ತಾನೆ. ಕಾಲದೇಶಾತೀತವಾದ ಪರಮ ಚೈತನ್ಯದ ಸ್ಥಿತಿಗೆ ಅರ್ಹನಾಗಿರುವವನು ಮಾನವನು ಮಾತ್ರವೇ. ಇತರ ಮೂರು ಅವಸ್ಥೆಗಳು ಪರಸ್ಪರ ವಿರುದ್ಧವಾಗಿವೆ. ಆದರೆ ನಿಜವಾದ ಚೈತನ್ಯ ಅವೆಲ್ಲವನ್ನೂ ಒಳಗೊಳ್ಳುತ್ತದೆ.''

ಆಲೋಚನೆ ಮತ್ತು ಕ್ರಿಯೆ ಎರಡೂ ತಾತ್ಕಾಲಿಕ. ಸತ್‌ನ ಸಾಗರದಲ್ಲಿ ಅವು ಗುಳ್ಳೆಗಳು ಅಥವಾ ಅಲೆಗಳು. ಸಮಾಧಿ ನಮ್ಮ ನಿಜ ಸ್ಥಿತಿ. ಎಚ್ಚರ, ನಿದ್ದೆ ಹಾಗು ಕನಸಿನ ಸ್ಥಿತಿಗಳ ಕೆಳಗೆ ಅದು ಒಳಪ್ರವಾಹದಂತೆ ಹರಿಯುತ್ತಿರುತ್ತದೆ. ಅದು ಪ್ರಯತ್ನದಿಂದ ಸಾಧಿಸಿದ ನಿಷ್ಕ್ರಿಯ ಸ್ಥಿತಿ, ಎಚ್ಚರವಾಗಿರುವಾಗಲೇ ಅನುಭವಿಸುವ ನಿದ್ದೆಯ ಅಹಂಕಾರರಹಿತ ಸ್ಥಿತಿ. ಅನುಭವಕಾಲ ಮತ್ತು ಸ್ಮೃತಿಯ ಕಾಲ ಎರಡೂ ಕಾಲಗಳಲ್ಲಿ ಅದು ಸ್ಪಷ್ಟವಾದ, ತೀವ್ರವಾದ ಆನಂದದ ಸ್ಥಿತಿ. ಅದರ ಲಕ್ಷಣ ವಿಷಯರಹಿತವಾದ ಜ್ಞಾನ, ಚಿಂತನೆಯ ಅಭಾವ. *ಹರಿಜನ*ದಲ್ಲಿ ಗಾಂಧೀಜಿಯ ಅಭಿಪ್ರಾಯವೊಂದನ್ನು ಉಲ್ಲೇಖಿಸುತ್ತ, ಮಹರ್ಷಿ ''ಸಾಮಾನ್ಯ ವ್ಯಕ್ತಿಗೆ ಚಿಂತನೆ ಮಾಡದೆ ಇರುವುದು ಕಷ್ಟವಾಗಿರುವಂತೆ, ಜ್ಞಾನಿಗೆ ಆಲೋಚನೆಯಲ್ಲಿ ತೊಡಗುವುದು

ಕಷ್ಟವಾಗುತ್ತದೆ'' ಎಂದರು. ಮಾನವ ಜೀವನದ ಮೂಲ ಸತ್ತ್ವವು ಭಾವನೆ, ಮಾತು ಅಥವಾ ಕರ್ಮವಾಗಿರದೆ ಅದು ಸತ್-ಚಿತ್ ಆಗಿರುವುದನ್ನು ಅನುಭವದಿಂದ ಕಂಡು ಕೊಳ್ಳುವ ಅಗೋಪ್ಯ ಅನುಭಾವವನ್ನು ಮಹರ್ಷಿ ಮತ್ತು ಗಾಂಧೀಜಿ ಇಬ್ಬರೂ ಭಿನ್ನ ಭಿನ್ನ ಮಟ್ಟಗಳಲ್ಲಿ ನಿದರ್ಶಿಸುತ್ತಾರೆ.

ನಿಜವಾದ ಅರಿವು, ಸ್ಫುರಣ, ಏಕತ್ವದ, ಪೂರ್ಣತ್ವದ, ಆನಂದದ ಸದಾ ಹೊಸದಾದ ಅನುಭವ. ಅದು ಸಂವೇದನೆಯ ವಿಷಯವೇ ವಿನಾ ನಿಂತಾಗ, ನಾನಿದ್ದೇನೆ ಎಂಬ ಸ್ಫುರಣ ಹಠಾತ್ತಾಗಿ ಉದಯಿಸುತ್ತದೆ ಮತ್ತು ಆಲೋಚನಾರಹಿತ ಜ್ಞಾನವಾಗಿ ಮುಂದುವರೆಯುತ್ತದೆ. ಜ್ಞಾತೃ ಮತ್ತು ಜ್ಞೇಯ ವಿಷಯ ಎರಡೂ ಕಾಣದಾಗುವ ಅರಿವು ಸರ್ವಸಾಮಾನ್ಯವಾದ ಒಂದು ಅನುಭವ. ಪ್ರೇಮಿಗಳು, ತಾಯಂದಿರು ಮತ್ತು ಮಕ್ಕಳು, ಭಾವಪರವಶರಾದ ಭಕ್ತರು, ಸಾಹಸಕಾರ್ಯದಲ್ಲಿ ತೊಡಗಿದ ವೀರರು ಮತ್ತು ಕಾವ್ಯ ಸಂಗೀತಗಳ ಪ್ರಿಯರು ಇವರೆಲ್ಲರಿಗೂ ಅದು ಪರಿಚಿತ. ಆದರೆ (ನಮ್ಮ ನಿದ್ದೆಯ ಮತ್ತು ಕನಸಿನ ಸ್ಥಿತಿಗಳಂತೆ) ಅಂಥ ಹೊನ್ನ-ಗಳಿಗೆಗಳನ್ನು ನಾವು ಸರಿಯಾಗಿ ಅರ್ಥಮಾಡಿಕೊಂಡಿಲ್ಲ ಅಥವಾ ಘೋಷಿಸಿಲ್ಲ. ನಮ್ಮ ಅಸ್ತಿತ್ವದ ಅವಸ್ಥೆಗಳನ್ನು ಗಮನಿಸಲು ಮತ್ತು ಜ್ಞಾತೃ ಹಾಗೂ ವಿಷಯಗಳು ಆನಂದದ ಪೂರ್ಣತೆಯಲ್ಲಿ ಒಂದಾಗಿ ಲೀನವಾಗುವ, ನಾವು ಇನ್ನೊಂದನ್ನು ನೋಡದ, ಇನ್ನೊಂದನ್ನು ಕೇಳದ, ಸತ್ಯದ ನೆಲೆಯಾದ ಆತ್ಮವನ್ನು, ಭೂಮವನ್ನು ಸ್ಪರ್ಶಿಸುವ ನಮ್ಮ ಉತ್ತುಂಗ ಅನುಭವಗಳಲ್ಲಿ ದೀರ್ಘಕಾಲ ನೆಲೆಸುವುದನ್ನು ನಾವು ಕಲಿಯುವುದಾದಲ್ಲಿ ಶೈಶವದ ಸಮಗ್ರ ಆನಂದವನ್ನು ಎಂದಿಗೂ ಕಳೆದುಕೊಳ್ಳಬೇಕಾಗಿಲ್ಲ.

ಮಾನವನು ಪರಿಪೂರ್ಣತೆಗಾಗಿ, ಅನಂತತೆಗಾಗಿ, ಶಾಶ್ವತ ಸುಖಕ್ಕಾಗಿ ಹಾತೊರೆಯುತ್ತಾನೆ, ಏಕೆಂದರೆ ಇದು ಅವನ ನಿಜವಾದ ಸ್ವಭಾವ, ನಿಜವಾದ ಆತ್ಮ. ಅದನ್ನು ಹೊರಗಡೆ ಹುಡುಕುವುದರಿಂದ ಬಳಲಿ ಅವನು ಒಳಗಡೆಗೆ ತಿರುಗುತ್ತಾನೆ ಮತ್ತು ಒಳಗಡೆ ಪಡೆಯುತ್ತಾನೆ. ಈ ಅಂತರ್ಮುಖತೆ ಮತ್ತು ಅಂತರನ್ವೇಷಣೆ ಬೌದ್ಧಿಕಕ್ರಿಯೆಗಳು. ''ದೀರ್ಘಕಾಲ ನಿರಂತರ ಅಭ್ಯಾಸದ ತರುವಾಯ ಬುದ್ಧಿ ತಾನು ಕೆಲಸ ಮಾಡುವುದು ಯಾವುದೋ ಮೇಲಿನ ಶಕ್ತಿಯ ಸಹಾಯದಿಂದ ಎನ್ನುವುದನ್ನು ಕಂಡುಕೊಳ್ಳುತ್ತದೆ. ಆಗ ಅದು ಈ ಮೇಲಿನ ಶಕ್ತಿಗೆ ತನ್ನನ್ನು ಒಪ್ಪಿಸಿಕೊಳ್ಳುತ್ತದೆ. ಈ ಶಕ್ತಿ ಈಗ ತಾನೇ ತಾನು ಏಕಮಾತ್ರವಾಗಿ ಉಳಿಯುತ್ತದೆ. ಬುದ್ಧಿಯ ಗುರಿ ತಾನು ತನಗಿಂತ ಮೇಲಿರುವ ಶಕ್ತಿಯೊಂದನ್ನು ಅವಲಂಬಿಸಿರುವುದನ್ನು ಅರಿಯುವುದು. ಈ ಗುರಿಯನ್ನು ತಲುಪುವ ಮೊದಲು ಅದು ತನ್ನನ್ನು ತಾನು ನಾಶಪಡಿಸಿಕೊಳ್ಳಬೇಕು. ಆದ್ದರಿಂದ ಸತ್ಯವನ್ನು ಬೌದ್ಧಿಕವಾಗಿ ಅರ್ಥಮಾಡಿಕೊಳ್ಳಬೇಕು'' ಎಂದು ಮಹರ್ಷಿ ಹೇಳುತ್ತಾರೆ. ''ಚಿತ್-ಆನಂದ ಮಾತ್ರವೇ ಸತ್ಯ. ಇದರಲ್ಲಿ ದೃಢವಾದ ಶ್ರದ್ಧೆಯಿಟ್ಟು ಅನ್ವೇಷಣೆಯಲ್ಲಿ ನಿರತರಾಗಬೇಕು ಮತ್ತು ಸಾಕ್ಷಾದನುಭವವನ್ನು ಪಡೆಯಬೇಕು.'' ಆದರೆ ಬೌದ್ಧಿಕ ನಂಬಿಕೆಯೇ ಬೇರೆ, ಸಾಕ್ಷಾತ್ಕಾರವೇ ಬೇರೆ ಎನ್ನುವುದನ್ನು ನೆನಪಿನಲ್ಲಿಡಬೇಕು.

ನಿಷ್ಕ್ರಿಯ ಸ್ಥಿತಿಯನ್ನು ತಲುಪುವ ಮೊದಲು ಬಹಳ ಪ್ರಯತ್ನ ಬೇಕಾಗುತ್ತದೆ. ಈ ಪ್ರಯತ್ನ ಮಹರ್ಷಿಗಳ ಪ್ರಕಾರ ಆತ್ಮವಿಚಾರ ಮತ್ತು ಮಹಾತ್ಮಾ ಗಾಂಧೀಯವರ ಪ್ರಕಾರ ಸೇವೆ. ವ್ಯತ್ಯಾಸ ಇರುವುದು ಮಾರ್ಗದಲ್ಲಿ ಮತ್ತು ಒತ್ತಿನಲ್ಲಿ ಮಾತ್ರ. ಇವುಗಳಲ್ಲಿ ಒಂದು

ವಿಧಾನವನ್ನು ಅಭ್ಯಾಸಮಾಡುತ್ತಿರುವವನು ಜ್ಞಾನದ ಆನಂದ ಮತ್ತು ಕರ್ಮದ ಮಾಧುರ್ಯವನ್ನು, ವ್ಯಕ್ತಿಗಳಲ್ಲಿ ಮತ್ತು ಘಟನೆಗಳಲ್ಲಿ ಹೆಚ್ಚಿನ ಸ್ನೇಹಭಾವವನ್ನು, ಹಾಗೂ ತಾನು ಯಾವುದೋ ಒಂದು ಮೇಲಿನ ಶಕ್ತಿಯ ರಕ್ಷಣೆಯಲ್ಲಿರುವುದರ ದೃಢ ಆಶ್ವಾಸನೆಯನ್ನು ಕಂಡುಕೊಳ್ಳುತ್ತಾನೆ. ''ಅನುದಿನದ ಜೀವನವೂ ಸಾಧನೆಯ ಅಂಶವೇ. ಆಧ್ಯಾತ್ಮಿಕ ಮತ್ತು ಲೌಕಿಕಗಳು ಎರಡು ವಿಭಿನ್ನ ಲೋಕಗಳಲ್ಲ. ಅವು ವಿಭಿನ್ನವೆಂದು ಭಾವಿಸುವುದು ದೊಡ್ಡ ತಪ್ಪು ಮತ್ತು ಎಲ್ಲ ಕ್ಲೇಶದ ಮೂಲ ಅದು.''

ಧ್ಯಾನವನ್ನು ಅಭ್ಯಾಸ ಮಾಡಲು ಗುಹೆಯೊಂದರಲ್ಲಿ ಏಕಾಂತವಾಸಮಾಡಲು ಇಚ್ಛಿಸಿದ ಸ್ವಾಮಿಯೊಬ್ಬರಿಗೆ, ಮಹರ್ಷಿಗಳು ಹೀಗೆ ಹೇಳಿದರು: ''ಕಾವಿ ಉಡುಪನ್ನು ಧರಿಸಿ ತಾನು ಲೋಕವನ್ನು ತ್ಯಜಿಸಿದ್ದೇನೆಂದು ಹೇಳುವವನಿಗಿಂತ ಲೋಕದಲ್ಲಿ ಕಾರ್ಯನಿರತನಾಗಿದ್ದು, ಆದರೂ ನಿಷ್ಕಾಮನಾದ ಮತ್ತು ತನ್ನ ಮೂಲ ಸ್ವರೂಪವನ್ನು ನೆನಪಿನಲ್ಲಿಡುವ ವ್ಯಕ್ತಿ ಉತ್ತಮನಾದ ಸಂನ್ಯಾಸಿ.''

ತಾನು ಆತ್ಮ ವಿಚಾರದ ವಿಧಾನವನ್ನು ಅನುಸರಿಸಬಹುದೇ ಮತ್ತು ಅದನ್ನು ಅನುಸರಿಸಿಯೂ ತನ್ನ ಮಾತೃಧರ್ಮಕ್ಕೆ ನಿಷ್ಠನಾಗಿರಬಹುದೇ ಎಂದು ತಿಳಿದುಕೊಳ್ಳಲು ಕ್ರೈಸ್ತಮತೀಯನೊಬ್ಬ ಕುತೂಹಲ ವ್ಯಕ್ತಪಡಿಸಿದಾಗ, ಮಹರ್ಷಿ ಈ ಉತ್ತರ ನೀಡಿದರು. ''ನಾನು ಹೇಳುವುದು ಕ್ರೈಸ್ತ ಧರ್ಮದ ಸಾರವೇ. ದೇವಲೋಕ ಮತ್ತು ಈ ಪ್ರಪಂಚ ಎರಡು ವಿಭಿನ್ನ ಪ್ರದೇಶಗಳಲ್ಲ. ದೇವಲೋಕ ನಿಮ್ಮ ಹಿಡಿಯಲ್ಲಿ ನಿಮ್ಮ ನಡುವೆ ಇದೆ. ಜ್ಞಾನಿಯು ಈ ಪ್ರಪಂಚವನ್ನು ದೇವಲೋಕವನ್ನಾಗಿ ಕಾಣುತ್ತಾನೆ. ಇತರರು ಕೇವಲ ಈ ಪ್ರಪಂಚವನ್ನಾಗಿ ಮಾತ್ರ ಕಾಣುತ್ತಾರೆ. ಈ ವ್ಯತ್ಯಾಸ ಇರುವುದು ದೃಷ್ಟಿಕೋನದಲ್ಲಿ''. ಸಾಧಕನು ಸತ್ಯಯುಗಕಾರಿಯಾಗಿ, ಸತ್ಯಯುಗ ಈಗಾಗಲೇ ಸಂಭವಿಸಿರುವಂತೆ ವರ್ತಿಸುವ ವ್ಯಕ್ತಿಯಾಗಿ ಇರಬೇಕು. ಸತ್ಯಯುಗವಾದಿಯಾಗಿ, ಸತ್ಯಯುಗ ಯಾವುದೋ ಒಂದು ದಿನ ಸಾಧ್ಯ ಎಂದು ವಾದಿಸುವವನಾಗಿ, ಇರಕೂಡದು. ಔದಾರ್ಯದಂತೆ, ಸುಧಾರಣೆಯೂ ನಮ್ಮ ಮನೆಯಲ್ಲಿ, ನಮ್ಮಿಂದ ಪ್ರಾರಂಭವಾಗುತ್ತದೆ. ''ಆತ್ಮ ಸುಧಾರಣೆ ತಾನಾಗಿಯೇ ಸಮಾಜ ಸುಧಾರಣೆಯನ್ನು ತರುತ್ತದೆ. ಆತ್ಮ ಸುಧಾರಣೆಯನ್ನು ಪಟ್ಟಾಗಿ ಹಿಡಿಯಿರಿ, ಸಮಾಜ ಸುಧಾರಣೆ ತನ್ನ ಪಾಡನ್ನು ನೋಡಿಕೊಳ್ಳುತ್ತದೆ. ಶರಣಾಗತಿಯ ಮೂಲಕ ಶಕ್ತಿ ಗಳಿಸಿಕೊಳ್ಳಿ. ನೀವು ಗಳಿಸಿದ ಶಕ್ತಿಗೆ ಅನುಗುಣವಾದ ಪ್ರಮಾಣದಲ್ಲಿ ನಿಮ್ಮ ಪರಿಸರ ಉತ್ತಮಗೊಳ್ಳುವುದು ನಿಮಗೆ ಗೋಚರವಾಗುತ್ತದೆ.''

# ಅಧ್ಯಾಯ 13

# ಸೂಕ್ತಿಗಳು

ಮಹರ್ಷಿಗಳ ಸೂಕ್ತಿಗಳ ಅತ್ಯಂತ ವ್ಯಾಪಕವಾದ ಮತ್ತು ಅಧಿಕೃತವಾದ ಸಂಗ್ರಹ ***ಗುರುವಾಚಕಕೋವೈ*** (ಗುರುವಿನ ಸೂಕ್ತಿಗಳ ಮಾಲೆ). ಇದನ್ನು ರಚಿಸಿ ಕಲಾತ್ಮಕವಾಗಿ ಜೋಡಿಸಿದವರು ಕವಿ ಮುರುಗನಾರ್. ಈ ದೊಡ್ಡ ತಮಿಳು ಕೃತಿಯಲ್ಲಿ 1282 ಪದ್ಯಗಳಿವೆ. ಅವುಗಳಲ್ಲಿ 1254 ಮುರುಗನಾರ್‌ರ ರಚನೆ, 28 ಮಹರ್ಷಿಗಳದ್ದು. ಅವುಗಳಲ್ಲಿ ಪ್ರತಿಯೊಂದು ಪದ್ಯವೂ ಮಹರ್ಷಿಗಳ ತುಟಿಗಳಿಂದ ಉದುರಿದ ಸೂಕ್ತಿಮುಕ್ತಕವೊಂದನ್ನು ಕುಶಲವಾಗಿ ಕೆಲಸಮಾಡಿ, ಚೆನ್ನಾಗಿ ಮೆರುಗಿಟ್ಟ ಕಟ್ಟಡದಲ್ಲಿ ಕೂರಿಸುತ್ತದೆ. ತಾರ್ಕಿಕವಾಗಿ ಅತ್ಯಂತ ಪರಿಣಾಮಕಾರಿಯಾದ ಕ್ರಮದಲ್ಲಿ, 231 ಅಧ್ಯಾಯಗಳಲ್ಲಿ, ಪದ್ಯಗಳನ್ನು ಜೋಡಿಸಲಾಗಿದೆ. ಅವುಗಳಲ್ಲಿ ಬಹುಭಾಗವನ್ನು ಮಹರ್ಷಿ ನೋಡಿ ಒಪ್ಪಿಗೆ ನೀಡಿದ್ದರು. ಅಂಶವೊಂದನ್ನು ಒತ್ತಿ ಹೇಳಲು ಅಥವಾ ನಿರೂಪಣೆಯನ್ನು ಬಿಗಿಗೊಳಿಸಲು ಅಥವಾ ವಿಶದೀಕರಿಸಲು ಅವರು ಕೆಲವು ಸಂಯೋಜಕ ವಾಕ್ಯಗಳನ್ನೂ, ತಮ್ಮ ಅಭಿಪ್ರಾಯಗಳ ಪುನರ್ನಿರೂಪಣೆಗಳನ್ನೂ ಒದಗಿಸಿದರು.

ರಮಣ ಪ್ರಸ್ಥಾನತ್ರಯದ ಮುಖ್ಯ ಶಿಲ್ಪಿ ಮುರುಗನಾರ್ ಎಂದು ಶ್ರೀ ಸಾಧು ಓಂ ಹೇಳಿರುವುದು ಯುಕ್ತವಾಗಿದೆ. ಮುರುಗನಾರ್ ***ಉಪದೇಶಸಾರ*** ವನ್ನು ಹೊರಸೆಳೆದರು; ***ಸದ್ದರ್ಶನ***ಕ್ಕೆ ಅಂತಿಮ ರೂಪ ಮತ್ತು ಸುಸಂಬದ್ಧ ರಚನೆಗಳನ್ನು ಒದಗಿಸುವುದರಲ್ಲಿ ಸಹಾಯ ಮಾಡಿದರು; ***ಗುರುವಾಚಕಕೋವೈ*** ಪದ್ಯಗಳಲ್ಲಿನ ಹೆಚ್ಚಿನ ಭಾಗವನ್ನು ತಾವೇ ರಚಿಸಿದರು ಮತ್ತು ಅದರ ಕ್ರಮವನ್ನು ನಿರ್ಧರಿಸಿದರು. ಈ ಕೊನೆಯ ಕೃತಿ ಮಹರ್ಷಿಗಳ ಉಪದೇಶಗಳ ಸುವ್ಯವಸ್ಥಿತವಾದ, ವಿವರವಾದ ನಿರೂಪಣೆ. ಅದು ಅವರ ಅಧಿಕೃತ ಮುದ್ರೆಯನ್ನು ಒತ್ತಿದೆ. ಏನೇ ಆದರೂ ತಮಿಳು ಓದುಗನಿಗಂತೂ ಅದು ಸಾಹಿತ್ಯಾಸ್ವಾದದ ಒಂದು ಸಾರ್ವಕಾಲಿಕ ಆಕರವಾಗಿದೆ.

ಈ ಕೃತಿ ಮೂರು ವಿಭಾಗಗಳಲ್ಲಿದೆ. ಅವು ಕ್ರಮವಾಗಿ ಸಿದ್ಧಾಂತ, ಅಭ್ಯಾಸ ಮತ್ತು ಅನುಭವಗಳನ್ನು ಕುರಿತಿವೆ.

### ವಿಭಾಗ I

### ಸಿದ್ಧಾಂತದ ನಿರೂಪಣೆ: ವಿಚಾರ ಮತ್ತು ಅಭ್ಯಾಸದ ಪ್ರಾರಂಭ

'ಅಹಂ' ಎಂಬ ಮಿಥ್ಯಾಕಲ್ಪನೆಯ ಹಿಂಬದಿಯಲ್ಲಿರುವ ವಸ್ತುವಿನ ಸಂಪೂರ್ಣ ಶಾಂತತೆಯ ಕೇಂದ್ರದಲ್ಲಿರುವ ಜ್ಞಾನದ, ಶುದ್ಧ ಸತ್‌ನ ಅನುಭವವೇ ಆದ್ಯಂತವಾದ ಪಾರಮಾರ್ಥಿಕ

ಸತ್ಯ. (16)

ಮಾಯೆಯ ಮೂಲಕ ಜೇಡನ ಬಾಯಿ ಬಲೆಯನ್ನು ಹೊರಸೂಸಿ ಮತ್ತೆ ಒಳಕ್ಕೆ ಎಳೆದುಕೊಳ್ಳುವಂತೆ, ಮನಸ್ಸು ಈ ಜಗತ್ಪುಷ್ಪವನ್ನು ಬಿಡುತ್ತದೆ ಮತ್ತು ಪುನಃ ಒಳಕ್ಕೆ ತೆಗೆದುಕೊಳ್ಳುತ್ತದೆ. (31)

ಜಗತ್ತಿನ ಆಕರ್ಷಣೆ ಅಳಿಯದೆ ಮುಕ್ತಿಯ ನಿಜವಾದ ಆನಂದ ಉದ್ಭವಿಸುವುದಿಲ್ಲ. ಜಗತ್ತಿನ ದೃಶ್ಯದೊಳಕ್ಕೆ ಸತ್ಯವನ್ನು ತುಂಬುವುದು ಕುರುಡು ಪ್ರೇಮಿಯೊಬ್ಬ ಸೂಳೆಯೊಬ್ಬಳ ಮೇಲೆ ಪಾತಿವ್ರತ್ಯ ಹೊರಿಸಿದಂತೆ. (74)

ನಿಮ್ಮ ನಿಜ ಸ್ವಭಾವ ಮತ್ತು ಸ್ವರೂಪವನ್ನು ಸ್ಪಷ್ಟವಾಗಿ ಅರಿತು, ಒಪ್ಪಿ, ಶುದ್ಧ ಕೇವಲ ಆತ್ಮದಂತೆ ಸದಾ ಹೃದಯದಲ್ಲಿ ನೆಲೆಸಿದ್ದು, ನಿಮ್ಮ ಮಾನವ ಪಾತ್ರವನ್ನು ಸರಿಯಾಗಿ ನಿರ್ವಹಿಸಿ ಎಲ್ಲ ಜೀವಿಗಳೊಂದಿಗೆ ಸಮಾನವಾಗಿ ಪ್ರತಿ ಸುಖ-ದುಃಖವನ್ನೂ ಸವಿಯಿರಿ. (81)

ಜ್ಞಾನಿಗಳು ಎಲ್ಲವನ್ನೂ ಪರೀಕ್ಷಿಸಿ ಪಾರಮಾರ್ಥಿಕ ಸತ್ಯವನ್ನು ಸಾಧಿಸಿದರೂ, ಅವರು ಸ್ವಲ್ಪವೂ ವಿಚಿತ್ರವಾಗಿ ವರ್ತಿಸುವುದಿಲ್ಲ. ಆದ್ದರಿಂದ ನಿಮ್ಮ ಬಾಹ್ಯ ನಡವಳಿಕೆ ನಿಮ್ಮ ಜನಗಳ ನಡವಳಿಕೆಗೆ ಅನುಗುಣವಾಗಿರಲಿ. (82)

ಹಾವಿನ ರೂಪ ಕೇವಲ ಭಾವನೆಯಲ್ಲದೆ ಮತ್ತೇನೂ ಅಲ್ಲ. ಭಾವನೆಯ ಈ ಶಕ್ತಿಯನ್ನು ಚೆನ್ನಾಗಿ ಗಮನಿಸಿ. ಭಾವನೆಯ ರೂಪದ್ದಲ್ಲದ ಹಗ್ಗದಲ್ಲಿ ಭಾವನೆಯು ತನ್ನ ಭಯಭ್ರಾಂತಿಗೆ ಕಾರಣವಾದ ಹಾವನ್ನು ಸೃಷ್ಟಿಸಿದೆ, ಪೋಷಿಸಿದೆ, ಅನಂತರ ನಾಶಮಾಡಿದೆ. (88)

ದೇಹವಿಲ್ಲದೆ ಜಗತ್ತಿಲ್ಲ. ಮನಸ್ಸಿಲ್ಲದೆ ದೇಹವಿಲ್ಲ. ಜ್ಞಾನವಿಲ್ಲದೆ ಮನಸ್ಸಿಲ್ಲ. ಸತ್ ಇಲ್ಲದೆ ಜ್ಞಾನವಿಲ್ಲ. (99)

ವಿವಿಧ ಬುದ್ಧಿಗಳ ಅಪೇಕ್ಷೆಗಳನ್ನು ಪೂರೈಸಲು ಗುರು ವಿವಿಧ ಸಿದ್ಧಾಂತಗಳನ್ನು ಪ್ರತಿ-ಪಾದಿಸಿದರು. ತಮ್ಮ ಸ್ವಂತ ಅನುಭವದಿಂದ ಅವರು ಉಪದೇಶಿಸಿದ್ದು ಅಜಾತ (ಜನ್ಮ ರಹಿತ)ದ ಸಿದ್ಧಾಂತವನ್ನು ಮಾತ್ರ. (100)

ಭಗವಂತನು ಅರ್ಜುನನಿಗೆ ಮೊದಲು (ಗೀತೆಯ ಎರಡನೆ ಅಧ್ಯಾಯದಲ್ಲಿ) ಉಪ-ದೇಶಿಸಿದ್ದು ಈ ಪರಮಸತ್ಯವನ್ನೇ. ಆದರೆ ತನ್ನ ಸ್ನೇಹಿತನ ಮನಸ್ಸು ದಿಗ್ಭ್ರಮೆಯಿಂದ ತತ್ತರಿಸುವುದನ್ನು ಕಂಡು, ಕೃಷ್ಣನು ತರುವಾಯ ಇತರ ಸಿದ್ಧಾಂತಗಳನ್ನು ಹೇಳಿದನು. (101)

ಅಂತರ್ಮುಖನಾಗಿ 'ನಾನು ಯಾರು?' ಎಂದು ಹೃದಯದೊಳಗೆ ಹುಡುಕುತ್ತ ಸಾಧಕನು ಅದೃಶ್ಯನಾಗುತ್ತಾನೆ ಮತ್ತು ಶಿವನು ಮಾತ್ರ ಪ್ರಕಾಶಿಸುತ್ತಾನೆ. ಆಸಕ್ತನಾದ ಪ್ರೇಕ್ಷಕನೇ ಅದೃಶ್ಯನಾದಾಗ, ದೃಶ್ಯ ಜಗತ್ತು ಸತ್ಯವೆಂದು ಸಾಧಿಸುವುದು ಹುಚ್ಚುತನ. (110)

ಜಗತ್ತು ಮತ್ತು ನಾನು ಭಗವಂತನಂತೆಯೇ ಸತ್ಯವಾದಲ್ಲಿ ಭಗವಂತನ ಪೂರ್ಣತೆಗೆ ಕುಂದುಂಟಾಗುತ್ತದೆ. ಭಗವಂತನನ್ನು ವಿಭಾಗಮಾಡಬಹುದು ಎಂದು ನಾವು ಒಪ್ಪದಿದ್ದಲ್ಲಿ, ಅವನ ವಿನಾ ಇನ್ನಾವುದೂ ಸತ್ಯವಾಗಲಾರದು. (112)

ಜ್ಞಾನಿಗಳಾದ ಮುಕ್ತರಿಗೆ ವ್ಯಕ್ತಿತ್ವವನ್ನು ಆರೋಪಿಸುವುದು ಕೇವಲ ಪಂಡಿತರ ದಡ್ಡತನ. ಸತ್‌ನ ಶುದ್ಧ ಆಕಾಶದಲ್ಲಿ ಮುಕ್ತರ ಪ್ರತ್ಯೇಕ ಅಸ್ತಿತ್ವವು ಇನ್ನೂ ಬದ್ಧಾವಸ್ಥೆಯಲ್ಲಿರುವ

ಪ್ರೇಕ್ಷಕರ ಪ್ರತ್ಯೇಕತೆಯು ಚೆಲ್ಲಿದ ನೆರಳು ಮಾತ್ರ. (119)

ಆತ್ಮ ಅನ್ವೇಷಕರ ಹೃದಯಗಳಲ್ಲಿ ಚೈತನ್ಯವು ಏಕ ಮಾತ್ರ ಸತ್ ಆಗಿ ನೆಲೆಸಿರುವುದರಿಂದ ಮತ್ತು ದೇಹದ ಬಗ್ಗೆ ಅಭಿಮಾನ ಇಲ್ಲದಾಗಿರುವುದರಿಂದ, 'ಅವನು ಅಥವಾ ಇವನು ಅಸದೃಶನಾದ ಜ್ಞಾನಿ' ಎಂದು ನಾವು ಹೇಳಲಾಗದು. ಜ್ಞಾನಿಗಳು ಕೇವಲ ದೇಹಗಳೇ? ಆದ್ದರಿಂದ ಅವರು ಒಂದಕ್ಕಿಂತ ಹೆಚ್ಚು ಮಂದಿಯೇ? (120)

ಅಯ್ಯಾ, ಈ ಮಹಾತ್ಮನನ್ನು ಮತ್ತು ಆ ಮಹಾತ್ಮನನ್ನು ನೋಡಲು ತೀವ್ರ ಆಸಕ್ತಿಯಿಂದ ಸುತ್ತುವವರೇ, ಎಲ್ಲ ಮಹಾತ್ಮರೂ ಒಬ್ಬನೇ ಮಹಾತ್ಮನಲ್ಲವೆ? ಆ ಒಬ್ಬನು ನಿಮ್ಮೊಳಗೇ ಇರುವ, ಸಂಧಿಸಲು, ಅರಿಯಲು ಮತ್ತು ಅಂತಾಗಲು ನಿಮ್ಮವನೇ ಆಗಿರುವವ ನಲ್ಲವೇ? (121)

ಅಸ್ತಿತ್ವ ಸೂಚಕ ಕ್ರಿಯಾಪದ 'ಇದ್ದೇನೆ' ಎಂಬುದರಿಂದ ಕೂಡಿದ, ಸ್ವತಂತ್ರ ಕರ್ತೃ, ಉತ್ತಮ ಪುರುಷ, 'ನಾನು' ಎಂಬುದನ್ನು ಅಹಂಕಾರ ಅಳಿದ ಯಾವನು ಆದ್ಯಂತವಾಗಿ ಅರಿಯುತ್ತಾನೆಯೋ ದಿಟವಾಗಿ ಅವನು ಮತ್ತು ಅವನು ಮಾತ್ರವೇ ನಿಜವಾದ ಜ್ಞಾನಿ. (137)

ಸರಿಯಾಗಿ ನೋಡಿದಾಗ, ಆದಿ ನಿಯಾಮಕನ ಜಗನ್ನಾಟಕ ಇಂತಿರುತ್ತದೆ. ಅಹಂಕಾರ ಉದಿಸಿದಾಗ, ಎಲ್ಲ ಪದಾರ್ಥಗಳೂ ಉದಿಸುತ್ತವೆ; ಅದು ಲಯವಾದಾಗ, ಅವೆಲ್ಲವೂ ಲಯವಾಗುತ್ತವೆ. (166)

ಆವಿಯ ಶಕ್ತಿಯಿಂದ ಅತ್ಯಂತ ಭಾರವಾದ ಹೊರೆಗಳನ್ನು ಹುಲ್ಲುಕಡ್ಡಿಗಳಂತೆ ಸಾಗಿಸುತ್ತಿರುವ ವೇಗವಾದ ರೈಲಿನಲ್ಲಿ ಕುಳಿತಿರುವ ವಿವೇಕಿ ಪ್ರಯಾಣಿಕರು ತಮ್ಮ ಸಾಮಾನನ್ನು ತಮ್ಮ ತಲೆಗಳ ಮೇಲೆ ಹೊರುವುದಿಲ್ಲ. (172)

ಅಂತೆಯೇ ಪರಶಕ್ತಿಯು ಎಲ್ಲ ವಸ್ತುಗಳನ್ನು ಧರಿಸಿರುವುದರಿಂದ, ಜನ ತಮ್ಮ ಚಿಂತೆಯ ಹೊರೆಗಳನ್ನು ಚೈತನ್ಯದ ಮೇಲಿರಿಸಿ, ತಾವು ಹಾಯಾಗಿ ಇರಬೇಕು. (173)

ಅಗಲವಾಗಿ ಬಿಚ್ಚಿದ್ದು, ಗಾಳಿ ಮಳೆ ಬಿಸಿಲುಗಳಿಂದ ಜೀರ್ಣವಾಗುವ ದೋಣಿಯ ಪಟದಂತಿರದೆ, ವಿಶಾಲ ಸಾಗರದ ಆಳದಲ್ಲಿ ಮುಳುಗಿರುವ ಸಾಮಾನ್ಯ ಲಂಗರಿನಂತೆ ಮನಸ್ಸು ಹೃದಯದೊಳಕ್ಕೆ ನುಗ್ಗಿ ಅಲ್ಲಿ ನೆಲೆಸುವುದು ವಿವೇಕ. (191)

ಪರಮಪದದ ಅನುಭವವನ್ನು ಅರಸುವ ಧರ್ಮಿಷ್ಠ ವ್ಯಕ್ತಿ ಮಾಡಬೇಕಾದ ಏಕಮಾತ್ರ ಧೀರಕಾರ್ಯವೆಂದರೆ ಹೊರಗೋಡುವ ಮನಸ್ಸನ್ನು ಒಳಕ್ಕೆಳೆದು ದೃಢವಾಗಿ ಹೃದಯದಲ್ಲಿ ಅದನ್ನು ನೆಡುವುದು. (192)

ಈ ದೇಹವೇ ನಾವು ಎಂದು ಬಗೆದು, ಸ್ವರ್ಗ ದೂರದಲ್ಲೆಲ್ಲಿಯೋ ಇದೆ ಎಂದು ನಾವು ಭಾವಿಸುತ್ತೇವೆ. ಶಿವಲೋಕ ಹೋಗಬೇಕಾದ ಜಾಗವೇನೂ ಅಲ್ಲ. ನಿನ್ನ ಹೃದಯ ದಲ್ಲಲ್ಲದೆ ಅದು ಮತ್ತೆಲ್ಲಿಯೂ ಇಲ್ಲ. (194)

ಶುದ್ಧ ಪ್ರಕಾಶವಾದ ನೀನು ಪರಲೋಕಕ್ಕೆ ಅವಕಾಶ ಕಲ್ಪಿಸುತ್ತೀಯೆ, ಅದರ ಬಗ್ಗೆ ಆಶ್ಚರ್ಯ ಪಡುತ್ತೀಯೆ ಮತ್ತು ಮಾತನಾಡುತ್ತೀಯೆ. ಅದನ್ನು ಅರಿಯಬೇಕಾದಲ್ಲಿ, ನಿನ್ನನ್ನು ಅರಿತುಕೊ. ದೇವಲೋಕ ನಿನ್ನೊಳಗೇ ಇದೆ. (195)

ಯಾವ ಪರಮಾನಂದವನ್ನು ಸವಿದ ತರುವಾಯ ಮನಸ್ಸು ಇನ್ನು ಮುಂದಿನ

ಅನ್ವೇಷಣೆಯನ್ನು ನಿಲ್ಲಿಸುವುದೋ, ಯಾವ ಹೃದಯದಿಂದ ನಿತ್ಯನೂತನ ಅನುಭವ ಮಹಾಪೂರ ಹರಿಯುತ್ತದೆಯೋ, ಈ ಆನಂದದ ಹೃದಯ, ಮನಮೋಹಕ ಮತ್ತು ಶಾಶ್ವತ. ಇದು ಶಿವ. (202)

ವಿಧಿ ನಿಯಮಿಸಿದ್ದ ದಿವಸಗಳಿಂದ ಆಚೆಗೂ ಮಾರ್ಕಂಡನು ಮೃತ್ಯುವನ್ನು ಧಿಕ್ಕರಿಸಿ ಜೀವಿಸಿದ. ಕಾಲನಿಗೆ ಕಾಲನಾದ ಶಿವನ ಪೂಜೆ ಕಾಲದ ಪಾಶಗಳನ್ನು ಜೀರ್ಣಗೊಳಿಸಿ ಕತ್ತರಿಸಿ ಹಾಕುತ್ತದೆ. (205)

ಈಗ, ಶಿವಪೂಜೆ ಎಂದರೇನು? ಪಂಚಭೂತಗಳಲ್ಲಿ ಅವನ ದಿವ್ಯ ಸಾನ್ನಿಧ್ಯವನ್ನು ಕಾಣುವುದಷ್ಟೆ. ಸೂರ್ಯ, ಚಂದ್ರ ಮತ್ತು ಪ್ರತಿ ಜೀವಂತ ಪ್ರಾಣಿ ಇವುಗಳಿಗೆ ಉಚಿತವಾದ ಪ್ರತಿಯೊಂದು ಪ್ರತಿಕ್ರಿಯೆ ಮತ್ತು ಸಕಾಲಿಕವಾದ ಸೇವೆ ಶ್ರೇಷ್ಠವಾದ ಮತ್ತು ಸದಾ ಶುದ್ಧವಾದ ಶಿವಪೂಜೆಯಾಗುತ್ತದೆ. (206)

ಆತ್ಮಶಕ್ತಿಗೆ ಸಾಧಿಸಲು ಕಷ್ಟವಾದ ಕೆಲಸವೇ ಇಲ್ಲ. ಆತ್ಮಶಕ್ತಿ ದೈವೀಪ್ರೇಮದ ಶಕ್ತಿ. ಆತ್ಮಶಕ್ತಿಗೆ ಸಾಧ್ಯವಾಗದ್ದನ್ನು ಸಂಖ್ಯಾಬಾಹುಳ್ಯ ಅಥವಾ ಆಯುಧಗಳು ಮಾಡ ಬಲ್ಲವು ಎನ್ನುವುದು ಹೇಯ ದೇಹವನ್ನು ಅವಲಂಬಿಸಿರುವುದರ ಮೌಢ್ಯ ಮಾತ್ರ. (215)

ಶಕ್ತಿ ಮತ್ತು ಶಾಂತಿ ಭಿನ್ನವಸ್ತುಗಳೆಂದು ಸಾಧಿಸುವವರಿಗೆ ಸತ್ಯಸಂಗತಿ ತಿಳಿಯದು. ಒಳಗೆ ಶಾಂತಿಯಾಗಿ ನೆಲೆಸಿರುವುದೇ ಹೊರನೋಟಕ್ಕೆ ಶಕ್ತಿಯಾಗಿ ಕಾಣಿಸಿಕೊಳ್ಳುತ್ತದೆ. (216)

ಮೋಕ್ಷದ ಅನ್ವೇಷಕನು ವಿವಿಧ ಸಿದ್ಧಿಗಳ ಮೇಲೆ ಮನಸ್ಸಿಟ್ಟರೆ, ಅಹಂಕಾರದ ಬೇರುಗಳು ಬಲಿತು ದಪ್ಪ ಮತ್ತು ಬಲಿಷ್ಠ ಆಗುವುದರಿಂದ, ಬಂಧನ ಬಿಗಿಯಾಗುತ್ತದೆ. (222)

ಕನಸಿನಲ್ಲಿ ಸಿಂಹವನ್ನು ಕಂಡು ಆನೆ ನಿದ್ದೆಯಿಂದೇಳುತ್ತದೆ. ಅಂತೆಯೇ ಕನಸಿನಂತಿರುವ ತನ್ನ ಅಜ್ಞಾನದ ಜಾಗ್ರತೆ ಜೀವನದಲ್ಲಿ ಸಾಧಕನು ಗುರುವನ್ನು ಕಂಡು ತಮಸ್ಸಿನ ನಿದ್ದೆಯಿಂದ ಎದ್ದೇಳುತ್ತಾನೆ. (283)

ಎರಡು ಜೊತೆ ಕಣ್ಣುಗಳು-ಮೌನದ ಮೂಲಕ ಬೋಧಿಸುವ ಗುರುವಿನದು ಮತ್ತು ಅವನ ಯೋಗ್ಯ ಶಿಷ್ಯನದು-ಸಂಧಿಸಿ ವ್ಯವಹರಿಸುವಾಗ, ಮಾತುಗಳು ಶುದ್ಧ ವ್ಯರ್ಥ. ಉಳಿದೆಲ್ಲ ವಸ್ತುಗಳನ್ನು ನಾಶಮಾಡಿ ತಾನುಳಿಯುವ ಬೆಳಕನ್ನು ಆ ನೋಟ ನೀಡುತ್ತದೆ. (286)

ಪಾಪವನ್ನು ನಾಶ ಮಾಡಿ, ಭಕ್ತನ ಪ್ರೀತಿಯ ಹೃದಯದಲ್ಲಿ ತನ್ನ ಒಡ್ಡೋಲಗ ನಡೆಸುವ ಗುರುವಿನ ವೈಭವ ಪರ್ವತದಂತೆ ಘನವಾಗಿ ಏರುತ್ತದೆ. ಏರುವ ಈ ಆನಂದದ ರಹಸ್ಯ ಅನಿರ್ವಚನೀಯವಾದುದು. ಏಕೆಂದರೆ ಅದನ್ನು ಅರಿತಿರುವವರು ಮಾತಾಡರು. ಅದರ ವಿಷಯ ಮಾತಾಡುವವರು ಅದನ್ನು ಅರಿಯರು. (325)

ತನ್ನ ಜ್ಞಾನಿಸೇವಕರೊಡನೆ ಬೆರೆಯಲು ಸುಪ್ರೀತನಾಗಿ ಶಿವನು ದೃಢಭಕ್ತಿಯುಳ್ಳ ಸಂತರ ಗುಂಪನ್ನು ಹೊಗುತ್ತಾನೆ. ತನ್ನ ರೂಪವನ್ನು ಮರೆಸಿಕೊಂಡು, ಇನ್ನೊಂದು ರೂಪ ತಾಳಿ, ಪ್ರೇಮದ ಉನ್ಮಾದದಿಂದ ಲೀಲೆಯಾಡುತ್ತಾನೆ. (334)

ಒಳಗೆ ಅರಸುತ್ತ, ''ನಾನು, ಈ ಅವರ್ಜನೀಯನಾದ, ಸತ್ಯವಾದ, ಜೀವಂತ ಆತ್ಮ ಯಾರು?'' ಎಂದು ಕೇಳುವ ಅನ್ವೇಷಣೆ ಶಾಶ್ವತವಾದ ಬದುಕಿನ ಮಾರ್ಗವನ್ನು ಬೋಧಿಸುವ ಎಲ್ಲ ಧರ್ಮಗಳ ಮೂಲಕ ಸ್ಪಂದಿಸುತ್ತ ಹರಿಯುವ ಏಕಮಾತ್ರ ಜೀವನ ಪ್ರವಾಹ. (338)

ವ್ಯಾಪಕವಾದ ಅಂತರಾಕಾಶದಲ್ಲಿ ನಿಂತಿರುವ ತುರೀಯದ ಹಿಮಾಲಯವನ್ನು ಯಾವ

ಶಬ್ದವೂ ಹೆಸರಿಸಲಾಗದಿರುವಾಗ, ಪರತತ್ತ್ವವನ್ನು ಚರ್ಚಿಸುವ ಮತಗಳ ಮತ್ತು ಪಂಥಗಳ ಆರ್ಭಟದ ವಾದವಿವಾದಗಳು ಅಂಗಡಿಬೀದಿಯ ಗದ್ದಲವಲ್ಲದೆ ಮತ್ತಿನ್ನೇನು? (341)

ಯಾರು ತಮ್ಮೊಳಗೆ ಅರಸಿ, ಅಲ್ಲಿ ನೆಲಸಿರುವ, ಸ್ಪಷ್ಟವಾಗಿ ಪ್ರಕಾಶಿಸುತ್ತಿರುವ, ಪ್ರಾಣಕ್ಕೆ ಪ್ರಾಣಭೂತನಾದ ಭಗವಂತನನ್ನು ಕಂಡಿರುವರೋ ಅವರು ಇತರರಿಂದ ನಿಕೃಷ್ಟವಾಗಿ ಕಾಣಲ್ಪಟ್ಟ ಸಣ್ಣ ಕ್ರಿಮಿಯೊಂದರಲ್ಲೂ ಪರಮಾತ್ಮನ ಪ್ರಿಯ ಸಾನ್ನಿಧ್ಯವನ್ನು ಕಾಣುತ್ತಾರೆ. (345)

ಸಮ್ಯಕ್‌ಜ್ಞಾನದ ಧಗಧಗಿಸುವ ಹೋಮಾಗ್ನಿಯಲ್ಲಿ ಯಾರು ತಮ್ಮ ಮನಸ್ಸುಗಳನ್ನು ಹವಿಸ್ಸಾಗಿ ಶಿವನಿಗೆ ಅರ್ಪಿಸಿ, ಅವನನ್ನು ಅರ್ಚಿಸಿ, ಅವನ ಬಿಂಬದಲ್ಲಿ ಐಕ್ಯವಾಗುತ್ತಾರೆಯೋ, ಅವರು ಶಿವನ ದಿವ್ಯ ನಿರಾಕಾರವನ್ನು ಹೊಂದುತ್ತಾರೆ. (353)

'ಈ ಪ್ರತ್ಯೇಕ ಜೀವನವನ್ನು ನಾನು ಪೂರ್ತಿಯಾಗಿ ತೊರೆದುಬಿಟ್ಟರೆ ಏನಾಗುತ್ತದೆ?' ಎಂದು ಭಯದಿಂದ, ಸಂಶಯದಿಂದ ಕೇಳಬೇಡ. ತಾನು ನೇತುಹಾಕಿಕೊಂಡಿರುವ ಕೊಂಬೆಯನ್ನು ಕೈಬಿಟ್ಟವನು ಗಟ್ಟಿ ನೆಲದ ಮೇಲೆ ಇಳಿಯುತ್ತಾನೆ. ನಿಜವಾದ ಆತ್ಮನನ್ನು ನೀನು ಪಡದೇ ಪಡೆಯುತ್ತೀಯೆ. (354)

ದೇಹದ ಶಿಲುಬೆಯ ಮೇಲೆ ಅಹಂಕಾರ ಏಸುಕ್ರಿಸ್ತ ಬಿಗಿಯಲ್ಪಟ್ಟು, ಚಿತ್ರಹಿಂಸೆಯಿಂದ ಸಾಯುತ್ತದೆ. ಯಾತನೆ ಮುಗಿದ ಮೇಲೆ ನಿಜವಾದ ಆತ್ಮ ಪರಮಾತ್ಮನಾಗಿ ಪ್ರಕಾಶಿಸುತ್ತದೆ. ದೇವರ ಪುನರುಜ್ಜೀವನ ಇಂಥದು. (365)

ದೂರದಿಂದ ನೋಡಿದಾಗ ಮೇರುವಿನಂತೆ ಕಂಡ ಒಂದು ಚಿಕ್ಕ ಅಣು ನಾವು ಹತ್ತಿರ ಹೋದಾಗ ಇಳಿಜಾರಾದ ಒಂದು ಅಗಲವಾದ ಶೂನ್ಯ ಕಂದರವಾಗಿದೆ. ಆಸೆ ತಳವಿಲ್ಲದ, ಭರ್ತಿಮಾಡಲಾಗದ ಹಳ್ಳದಂತೆ, ತಣಿಸಲಾಗದ ವಸ್ತು. (371)

ನಾನು ಎಂಬುದನ್ನು ನಿಜವಾಗಿ ಹುಡುಕುತ್ತಿರುವ ಜೀವ 'ನಾನು' ಎನ್ನುವುದಿಲ್ಲದ ಆತ್ಮವಾಗಿ ಶಾಂತವಾಗುತ್ತದೆ. (388)

ಆತ್ಮವಿಚಾರದ ಸುರಕ್ಷಿತವಾದ ನೇರ ಹಾದಿಯಲ್ಲಿ ಹೊರಟವನು ಎಂದಿಗೂ ದಾರಿ ತಪ್ಪುವುದಿಲ್ಲ. ಆತ್ಮವನ್ನು ಮತ್ತೆ ಕೂಡಿಕೊಳ್ಳಬೇಕು ಎನ್ನುವವನಿಗೆ ಪ್ರತಿ ಹೆಜ್ಜೆಯಲ್ಲೂ ದಾರಿ, ಬೆಳ್ಳಗೆ ಸ್ಪಷ್ಟವಾಗಿ ಬೆಳಗುವ ಸೂರ್ಯನಂತೆ, ಸರಿಯಾಗಿರುವುದು ಕಾಣಿಸುತ್ತದೆ. (393)

ಎಲ್ಲೆಡೆಯೂ ವ್ಯಾಪಿಸಿರುವ ಆನಂದದ ಮಹಾಸಾಗರದ ನಡುವೆ ನಿಂತಿರುವ ಕೆಲವು ಜನ ತಾವು ದುಃಖದ ಬೆಂಕಿಯಲ್ಲಿ ಬೆಂದುಹೋಗುತ್ತಿರುವವುದಾಗಿ ಏಕೆ ಭಾವಿಸುತ್ತಾರೆ? ಅದಕ್ಕೆ ಕಾರಣ ಅಜ್ಞಾನದ ಮಾಯೆಯಿಂದಾಗಿ ಅವರು ಕೇವಲ ಕರ್ತವ್ಯವಾಗಿ ಮಾಡುವ ತಪಸ್ಸನ್ನು ಇಷ್ಟಪಡುವುದಿಲ್ಲ. (411)

ಗಾಳಿಯಲ್ಲಿ ಹಕ್ಕಿಗಳು ಮತ್ತು ನೀರಿನಲ್ಲಿ ಮೀನುಗಳು ಓಡಾಡುತ್ತವೆ, ಆದರೆ ಅವು ತಮ್ಮ ಜಾಡಿನ ಗುರುತನ್ನು ಬಿಡುವುದಿಲ್ಲ. ಆತ್ಮನನ್ನು ಅರಸಿ ಪಡೆದವರು ಹಿಡಿದ ಹಾದಿಯನ್ನು ಯಾರೂ ಕಾಣಲಾರರು. (413)

ಜ್ಞಾನದ ಹೊನ್ನಗುಡಿಯಲ್ಲಿ ಶುದ್ಧ ಜ್ಞಾನ ಸ್ವರೂಪನಾದ ಶಿವನನ್ನು ಕಂಡು, ಅವನಿಗೆ ಜ್ಞಾನದ ಪೂಜೆಯನ್ನು ಅರ್ಪಿಸುವವನ ಜ್ಞಾನವೇ ಪರಮಸತ್ಯ. (417)

ಜ್ಞಾನವನ್ನಲ್ಲದೆ ಬೇರೊಂದನ್ನು ಅರಿಯದ ಜ್ಞಾನವೇ ಜ್ಞಾನದ ನಿಜವಾದ ಸಾಫಲ್ಯ. ಜ್ಞಾನ ತನ್ನದೇ ಜ್ಞಾನವಾಗುವವರೆಗೆ ಅದಕ್ಕೆ ಸ್ವಲ್ಪವೂ ಶಾಂತಿ ಸಿಗುವುದಿಲ್ಲ. (418)

ಮನುಷ್ಯನಂತೆ ಕಾಣುವ ಮಣ್ಣಿನ ಬೊಂಬೆಗೆ ಯಾವುದೇ ಗ್ರಂಥವಾಗಲಿ ಜ್ಞಾನವನ್ನು ಉಪದೇಶಿಸುವುದು ಹೇಗೆ? ತಿಳಿದ ವಸ್ತುಗಳು ಆಧಾರವಿಲ್ಲದೆ ಬಿದ್ದುಹೋದಾಗ ಅದರ ಅರಿವು ಸಹ ಆ ಬೊಂಬೆಗೆ ಇರುವುದಿಲ್ಲ. (431)

ಜ್ಞಾನವೇ ವೈರಾಗ್ಯ, ಜ್ಞಾನವೇ ವಿಶುದ್ಧಿ, ಜ್ಞಾನ ದೇವರಿಗೆ ಸದೃಶವಾದುದು. ಅವಿಸ್ಮೃತ ಜ್ಞಾನವೇ ಭಯದಿಂದ ವಿಮುಕ್ತಿ ಮತ್ತು ಅಮೃತತ್ವ. ಅದೇ ಪ್ರತಿಯೊಂದು ವಸ್ತು ಮತ್ತು ಎಲ್ಲ ವಸ್ತು. (438)

'ನಿನ್ನ ಜೀವವನ್ನು ದೇವರಿಗೆ ಅರ್ಪಿಸು' ಎನ್ನುತ್ತಾರೆ. ಆದರೆ ಅರ್ಪಿಸಲು ಅದು ನನ್ನದೇ? ಈಗಾಗಲೇ ಅದು ದೇವರಿಗೆ ಸೇರಿದ್ದಲ್ಲವೇ? ಅದರ ಬದಲು, 'ಈಗ ಕದ್ದುದಕ್ಕೆ ಪಶ್ಚಾತ್ತಾಪಪಡು. ಕದ್ದ ನಿಧಿಯನ್ನು ಅವನ ಚರಣಕಮಲಕ್ಕೆ ಹಿಂದಿರುಗಿಸು' ಎನ್ನು. (480)

ಬೆಲ್ಲದ ವಿಗ್ರಹದಿಂದ ಒಂದು ಚೂರು ಮುರಿದು ಅದೇ ಸಿಹಿಬೆಲ್ಲದಿಂದ ಮಾಡಿದ ದೇವರಿಗೆ ಅದನ್ನು ಅರ್ಪಿಸುವಂತೆ, ಪೂರ್ಣಚೈತನ್ಯರೂಪನಾದ ಭಗವಂತನಿಗೆ ನಮ್ಮ ಸ್ವರೂಪವನ್ನು ಅರ್ಪಿಸುವುದು ಅಷ್ಟೇ ಸ್ಪಷ್ಟವಾದ ದಡ್ಡತನ. (486)

ತನ್ನನ್ನೇ ಎಲ್ಲದರಲ್ಲೂ ಕಾಣುತ್ತ, ದೀನನಿಗಿಂತ ದೀನನಾಗಿ, ಅತ್ಯಂತ ನಮ್ರನಾಗಿ, ನಮ್ರತೆ ಮೂಲಕ ಪರಮಾತ್ಮನು ಪಾರಮ್ಯವನ್ನು ಸಾಧಿಸುತ್ತಾನೆ. (497)

ನಿಕೃಷ್ಟ ಹುಲ್ಲುಕಡ್ಡಿ ನೀರಿನ ಮೇಲೆ ತೇಲುತ್ತದೆ. ಮುತ್ತುಗಳು ಮುಳುಗಿ ತಳದಲ್ಲಿ ಇರುತ್ತವೆ. ಲೋಕದಲ್ಲಿ ಜನ ಮೇಲೋ ಕೀಳೋ ಆಗಿರುವುದು ಅವರು ಏನಾಗಿದ್ದಾರೆ ಎಂಬುದರಿಂದ, ಎಲ್ಲಿದ್ದಾರೆ ಎಂಬುದರಿಂದಲ್ಲ. (499)

## ವಿಭಾಗ II
## ಸತತಾಭ್ಯಾಸ

ಸತ್ಯವನ್ನು ಪ್ರಕಟಗೊಳಿಸುವುದಕ್ಕಿಂತ ಹೆಚ್ಚಾಗಿ ಪದಗಳು ಅದನ್ನು ಮಸುಕು ಮಾಡಿ ಮರೆಮಾಡುತ್ತವೆ. ಸತ್ಯವು ಪದಗಳಲ್ಲಿ ಹೂತುಹೋಗದೆ ತಾನಾಗಿಯೇ ಪ್ರಕಾಶಿಸುವಂತೆ ಮಾಡಲು ಪದ ಮತ್ತು ಆಲೋಚನೆ ಎರಡನ್ನೂ ಹೃದಯದಲ್ಲಿ ಲಯಗೊಳಿಸಿ. (525)

ಗಾಣದಲ್ಲಿ ಸುರಿದ ಲಕ್ಷಾಂತರ ಎಳ್ಳಿನ ಬೀಜಗಳಲ್ಲಿ ಇರುವ ನಿಜವಾದ ಏಕೈಕ ಸಾರ ಎಣ್ಣೆಯಾಗಿರುವಂತೆ, ಅನೇಕಾನೇಕ ದೃಶ್ಯಗಳಿಂದ ಕೂಡಿದ ಈ ಇಡೀ ಚಿತ್ರವಿಚಿತ್ರ ವಿಶ್ವದಲ್ಲಿ ಇರುವ ಅಂತಸ್ಸತ್ತ್ವ ಒಂದೇ ಒಂದು. (543)

ಬೆಂಕಿಗೆ ತುಪ್ಪ ಸುರಿದಾಗ ಅದು ಆರಿಹೋಗದೆ ನೇರವಾಗಿ ನೆಗೆದೇಳುವಂತೆ, ಆಸೆಯನ್ನು ಪೂರೈಸಿದಾಗ ಅದೂ ಸಂತೋಷಪಟ್ಟು ಬಲಗಳಿಸುತ್ತದೆ. (592)

ಗಣಿಯಿಂದ ಅಗೆದು ತೆಗೆದ ರತ್ನವನ್ನು ಬಲವಾಗಿ ಮಸೆದ ಹೊರತು ಅದು ಬೆಳಗದಂತೆ, ಕಷ್ಟಕ್ಲೇಶಗಳಿಲ್ಲದೆ ತಪಸ್ಸಿನ ಮಹಿಮೆ ಗೊತ್ತಾಗದು. (619)

ಪ್ರೀತಿಯನ್ನು ನೋಡಿ. ಪ್ರೀತಿಯನ್ನು ಕೇಳಿ. ಕೈಚಾಚಿ ಪ್ರೀತಿಯನ್ನು ಮುಟ್ಟಿ. ಮಧುರ

ಪ್ರೀತಿಯನ್ನು ತಿನ್ನಿ. ಪ್ರೀತಿಯನ್ನು ವಾಸನೆ ನೋಡಿ. ಏಕೆಂದರೆ ಪ್ರೀತಿ ಆತ್ಮನ ಸ್ವಾನುಭವ ಮಾತ್ರ ಆಗಿರುತ್ತದೆ. (655)

ಹಂಬಲಿಸುವ ಹೃದಯವೇ, ಒಳಗೆ ಮತ್ತು ಹೊರಗೆ ನೀನು ಸಾಕಾರ ದೇವರನ್ನು ಪ್ರೀತಿಸುತ್ತೀಯ ಮತ್ತು ಪೂಜಿಸುತ್ತೀಯೆ; ಎಲ್ಲೆಡೆಯೂ ಎಲ್ಲ ವಸ್ತುಗಳ ರೂಪದಲ್ಲಿ ಅವನಿರುವುದನ್ನು ಮರೆಯಬೇಡ. (660)

ಪ್ರತಿದಿನವೂ ಅಲ್ಲಾನನ್ನು ಭಜಿಸುವವರು ಕೂಡಲೇ, ಒಟ್ಟಿಗೇ ಸಂತೋಷ ಮತ್ತು ಪ್ರಯೋಜನಗಳನ್ನು ಪಡೆಯುತ್ತಾರೆ, ಏಕೆಂದರೆ ಪಾಪದ ಅಸಹನೆಯ ಧಗಧಗಿಸುವ ಜ್ವಾಲೆಗಳ ನಡುವೆ ಅವರು ಗಂಭೀರ ಪ್ರಶಾಂತಿಯಿಂದ ಇರುತ್ತಾರೆ. (663)

ಬಿಟ್ಟು ಬಿಟ್ಟು ಧ್ಯಾನಮಾಡಬೇಡಿ. ದೃಢವಾದ ಆತ್ಮಾನುಭವದಲ್ಲಿ ಬಿಡುವಿಲ್ಲದಂತೆ ನೆಲಸಿ. ಕಡಿತ ಹತ್ತಿದ ಆಲೋಚನೆಯ ಕೂದಲನ್ನು ಒಂದೊಂದಾಗಿ ಕೀಳುವ ಬದಲು ಪೂರ್ತಿ ತಲೆಯನ್ನು ಶುದ್ಧವಾಗಿ ಬೋಳಿಸುವುದು ಉತ್ತಮ. (675)

ಹಿಮ್ಮಡಿಗೆ ಚುಚ್ಚಿ ನೋವು ಕೊಡುತ್ತಿರುವ ಮುಳ್ಳನ್ನು ತೆಗೆದು ಹಾಕಲು ಇನ್ನೊಂದು ಮುಳ್ಳನ್ನು ತೆಗೆದುಕೊಂಡು ಅದನ್ನು ಬಳಸುತ್ತೇವೆ. ಆಮೇಲೆ ಎರಡನ್ನೂ ಎಸೆದು ಬಿಡುತ್ತೇವೆ. ಬಂಧನದ ಆಲೋಚನೆಯನ್ನು ಹೊರತಳ್ಳಲು ಬಳಸಿದ ಮೇಲೆ ಮೋಕ್ಷದ ಯೋಚನೆಯನ್ನೂ ಹೊರಗೆಸೆಯಿರಿ. (676)

ಇಂದು ವಿಧಿಯಾಗಿ ಪಕ್ವವಾಗಿರುವುದು ನಮ್ಮದೇ ಹಿಂದಿನ ಕರ್ಮವಾದುದರಿಂದ, ಸದ್ಯದ ಇನ್ನೂ ಹೆಚ್ಚಿನ ಪ್ರಯತ್ನದಿಂದ ನಾವು ನಮ್ಮ ವಿಧಿಯನ್ನು ಬದಲಾಯಿಸಬಹುದು.(692)

''ನಾನು ದೇವರು'' ಎಂದು ಘೋಷಿಸಿಕೊಂಡು ತಿರುಗಾಡುವುದರ ಬದಲು ಪರತತ್ತ್ವದಲ್ಲಿ ನೆಲಸಿರಿ. ಏಕೆಂದರೆ ಅಂತೆ ಆತ್ಮದಲ್ಲಿ ಇರುವುದು ದುಃಖವನ್ನು ಕೊನೆಗಾಣಿಸುತ್ತದೆ, ಪುನರಾವರ್ತನೆ ಮಾಡುವ ಭಾರಿ ಶಬ್ಧ ಅದನ್ನು ಮಾಡದು. (709)

ಜೀವ ಮತ್ತು ಜಗತ್ತು ಈ ಎರಡರ ಪವಿತ್ರ ಆವಾಸಸ್ಥಾನ ಭಗವಂತ ಎಂಬ ಸತ್ಯವನ್ನು ಒಳಹೊಕ್ಕು ತಿಳಿಯದಿದ್ದಲ್ಲಿ, ನಾವು ಅವನನ್ನು ಕುಗ್ಗಿಸಿ, ಪೂಜೆಗಾಗಿ ಮಾನವರಚಿತ ದೇಗುಲವೊಂದರಲ್ಲಿ ಕೂಡಿಹಾಕುತ್ತೇವೆ. (711)

ಹೃದಯದಲ್ಲಿರುವ ಸತ್ಯವಸ್ತು ಉದಯಿಸಿ ಜ್ಞಾನಕಿರಣಗಳಾಗಿ ಪಸರಿಸಿದಾಗ, ಅದರ ಹೆಸರುಗಳು ಅಸಂಖ್ಯೇಯ. ಅವುಗಳಲ್ಲಿ ಮೊದಲನೆಯದು ನಾನು ಎಂಬುದು. (712)

ದಿಕ್ಸೂಚಿ ಉತ್ತರಕ್ಕೆ ತಿರುಗಿರುವಂತೆ ಯಾರ ಹೃದಯಗಳು ಭಗವಂತನತ್ತ ತಿರುಗಿವೆಯೋ, ಅವರು ಆಸೆಯ ಪ್ರಕ್ಷುಬ್ಧ ಸಾಗರದ ಮೇಲೆ ಯಾನ ಮಾಡುತ್ತಿದ್ದರೂ ಅವರಿಗೆ ದಿಕ್ಕು ತಪ್ಪುವುದಿಲ್ಲ. (734)

ತನ್ನನ್ನು ಜ್ಞಾನಸ್ವರೂಪನನ್ನಾಗಿ ಯಾವನು ನಿಜವಾಗಿ, ಚೆನ್ನಾಗಿ ಧ್ಯಾನಮಾಡುತ್ತಾನೆಯೋ ಅವನು ಶಿವನಲ್ಲಿ, ಆತ್ಮನಲ್ಲಿ ಲೀನವಾಗುತ್ತಾನೆ. (742)

ನಾವು ಏಕ ಸದಾತ್ಮವಾಗಿರುವುದರಿಂದ, ನಾವು ಇನ್ನೊಬ್ಬರಿಗೆ ಮಾಡುತ್ತೇವೆ ಎಂದು ಕೊಳ್ಳುವ ಎಲ್ಲವೂ ನಮಗೇ ನಾವು ನಿಜವಾಗಿ ಮಾಡಿದ್ದಾಗಿರುತ್ತದೆ. (808)

ಜೀವ ದೇಹವನ್ನು ತೊರೆದಾಗ ಅದನ್ನು ಹಿಂದಕ್ಕೆ ಕರೆ ತರುವುದು ಯಾರಿಗೂ ತಿಳಿಯದು. ಆದ್ದರಿಂದ, ಕಾರಣವೇನೇ ಇರಲಿ, ಯಾವುದೇ ಪ್ರಾಣಿಯಿಂದ ಅದರ ಪ್ರಾಣವನ್ನು ತೆಗೆಯಲು

ಯಾರಿಗೂ ಹಕ್ಕಿಲ್ಲ. (812)
ದೋಣಿ ನೀರಿನಲ್ಲಿ ಸಾಗುತ್ತದೆ, ಆದರೆ ನೀರು ಅದನ್ನು ಹೊಗಕೂಡದು, ನಾವು ಪ್ರಪಂಚದಲ್ಲಿ ಬದುಕಿದ್ದರೂ, ಪ್ರಪಂಚ ನಮ್ಮ ಮನಸ್ಸನ್ನು ಆವರಿಸಿಕೂಡದು. (822)
ಪ್ರವಾಹದಲ್ಲಿ ಖಾಲಿ ಕೊಡ ಮುಳುಗಿಹೊಗುತ್ತದೆ, ಆದರೆ ಗಟ್ಟಿ ಮರದ ದಿಮ್ಮಿ ಹಾಗಾಗುವುದಿಲ್ಲ. ಪ್ರಪಂಚದ ರೀತಿ ನೀತಿಗಳು ಅವಕ್ಕೆ ಅಂಟಿಕೊಂಡವರಿಗೆ ದಿಗ್ಭ್ರಮೆ ಹಿಡಿಸುತ್ತವೆ, ಅವುಗಳಿಂದ ವಿರಕ್ತರಾದವರಿಗಲ್ಲ. (823)
ಅತ್ಯಂತ ಕಠಿಣವಾದ ತ್ಯಾಗವನ್ನು, ಅಂದರೆ ಅಹಂಕಾರದ್ದನ್ನು, ಮಾಡಿದವರಿಗೆ ಮತ್ತೆ ತ್ಯಜಿಸಬೇಕಾದುದು ಯಾವುದೂ ಇಲ್ಲ. (837)
ನನ್ನ ಮನಸ್ಸು ಮತ್ತು ನಿನ್ನ ಮನಸ್ಸು ಎಂದು ಭೇದ ಕಲ್ಪಿಸುವ ಮನಸ್ಸಿನ ಗಾಢ ಅಜ್ಞಾನವೇ ನಮ್ಮನ್ನು ಕಟ್ಟಿಹಾಕಿರುವ ಗಂಟು. ಇರುವುದು ಒಂದೇ ಮನಸ್ಸು. ಏಕಮಾತ್ರ ಪರಜ್ಞಾನದ ವಿಶದತೆ ಮತ್ತು ಶಕ್ತಿ ಅದು. (842)

## ವಿಭಾಗ III

## ಅನುಭವ

ನಿಜವಾದ ಜ್ಞಾನ ಎನ್ನುವುದು ಭೇದ, ದ್ವೈತ, ಪಾಪ, ಪುಣ್ಯ, ವಿಷಯ, ವಿಷಯಿ, ಕಾಲ, ದೇಶ ಕರ್ಮದ ಬೀಜ ಮತ್ತು ಫಲ ಇವು ಯಾವುದನ್ನೂ ನೋಡದ ಅನಂತ ದೃಷ್ಟಿ.(880)
ಕಠಿಣ ತಪಸ್ಸಿನ ತರುವಾಯದಲ್ಲಿ ಅನುಭವಕ್ಕೆ ಬರುವ ಸಮಾಧಿ, ಅಸಮಾನ ಆನಂದ ಸ್ಥಿತಿ, ನಿಜವಾದ ವಸ್ತುವಾಗಿದ್ದಲ್ಲಿ, ಅದು ಈಗಲೂ ಇರುತ್ತದೆ. ತಪಿಸ್ಸಿನ ತರುವಾಯದಲ್ಲಿ ಎಷ್ಟು ಇರುತ್ತದೆಯೋ ಅಷ್ಟೇ ಮಟ್ಟಿಗೆ ಸದ್ಯದಲ್ಲಿಯೂ ಇರುತ್ತದೆ. (886)
ಇಂದು ಅಸ್ತಿತ್ವದಲ್ಲಿರದ ಆ ಸ್ಥಿತಿ ಮುಂದೆ ಅಸ್ತಿತ್ವಕ್ಕೆ ಬರುವುದಾದರೆ, ಅದು ನಮ್ಮ ಸಹಜ ಸ್ಥಿತಿಯಲ್ಲ. ಆದ್ದರಿಂದ ಅದು ಶಾಶ್ವತವಾಗಿರಲಾರದು. ಅದು ಹೊರಟು ಹೋಗುತ್ತದೆ. (887)
ಒಬ್ಬಳೇ ಹೆಂಗಸು ಯಾವ ವ್ಯತ್ಯಾಸವನ್ನೂ ಪಡೆಯದೆ ಹೆಂಡತಿ, ಅತ್ತಿಗೆ, ಸೊಸೆ ಇತ್ಯಾದಿಯಾಗಿ ಇತರರಿಂದ ವಿವಿಧವಾಗಿ ಭಾವಿಸಲ್ಪಡುವಂತೆ, (ಭಿನ್ನ ಭಿನ್ನ ಜನರಿಗೆ ಪ್ರಪಂಚ ಭಿನ್ನ ಭಿನ್ನವಾಗಿ ಕಾಣಿಸುತ್ತದೆ.) (907)
ಚಿನ್ನದ ಗಟ್ಟಿಯಲ್ಲಿರುವ ಬಳೆಯಂತೆ, ಬಿಸಿಲುಗುದುರೆಯಲ್ಲಿರುವ ನೀರಿನಂತೆ, ಅಥವಾ ಕನಸಿನಲ್ಲಿನ ನಗರದ ಕೋಟೆಕೊತ್ತಗಳಂತೆ ನಮ್ಮಿಂದ ಗ್ರಹಿಸಲ್ಪಡುವ ಎಲ್ಲ ವಸ್ತುಗಳೂ ನೋಡುವವನ ಆತ್ಮದಲ್ಲಿ ಮಾತ್ರ ಇವೆ. (923)
ಸತ್ ಚಿತ್ ಮತ್ತು ಆನಂದಗಳನ್ನು ನಾವು ಬೇರೆ ಬೇರೆಯಾಗಿ ಹೇಳಿದರೂ, ಸಾಕ್ಷಾದನುಭವದಲ್ಲಿ ಅವು ಮೂರು ಒಂದೇ. ಅಸಮಾನಪೇಯವಾದ ಶುದ್ಧ ಜಲ ಏಕಕಾಲದಲ್ಲಿ ದ್ರವ, ಸಿಹಿ ಮತ್ತು ತಂಪಾಗಿರುವಂತೆ. (979)
ಅಸತ್ಯ ಮತ್ತು ಸತ್ಯ. ಅಜ್ಞಾನ ಮತ್ತು ಜ್ಞಾನ, ಕುರೂಪ ಮತ್ತು ಸೌಂದರ್ಯ ಎಲ್ಲವೂ

ಬ್ರಹ್ಮವೇ, ಬ್ರಹ್ಮ ಹೊರತು ಮತ್ತಾವುದೂ ಅಲ್ಲ. (987)
ಆನಂದ ಆತ್ಮದ ಸ್ವಸ್ವರೂಪ. ಆತ್ಮ ಆನಂದದ ಅಪರಿಮಿತ ರೂಪ. ಸತ್ ಎಲ್ಲ ಕೇವಲ ಆನಂದ. ಇದನ್ನು ದೃಢವಾಗಿ ಗ್ರಹಿಸಿ, ಎಂದೆಂದಿಗೂ ಆನಂದವನ್ನು ಸವಿಯುತ್ತ ಆತ್ಮದಲ್ಲಿರಿ. (1029)
ಆರು ಇಂದ್ರಿಯಗಳ ಮೂಲಕ ಜಗತ್ತನ್ನು ನೋಡುವ ಮತ್ತು ಧರಿಸುವ ಬಲಿಷ್ಠ ಕ್ರೂರ ರಾಕ್ಷಸನನ್ನು ಕೋಪದಿಂದ ಎದುರಿಸಿ, ಹಿಂದಕ್ಕೆ ಹೃದಯದೊಳಕ್ಕೆ ಅಟ್ಟಿ, ಅಲ್ಲಿ ಅವನನ್ನು ಕೊಲ್ಲುವವನು ಪರಮಾನಂದವನ್ನು ನೀಡುವ ದೇವಪುತ್ರ, ಕುಮಾರ. (1031)
ಆತ್ಮವು ಸದಾ ಶಾಂತವಾಗಿರುವ ಸತ್ಯಚೈತನ್ಯ. ನಿಶ್ಚಲವಾದ ಪರದೆಯಂತಿರುತ್ತದೆ. ನೋಡುವವನು, ನೋಟ ಮತ್ತು ದೃಶ್ಯಗಳಿಂದ ಕೂಡಿದ ಜಗತ್ತು ಆ ಪರದೆ ಮೇಲೆ ಹಾಯಿಸಿದ ಚಲನಚಿತ್ರ. (1047-8)
ಚಲಿಸದೆ ಮಧ್ಯೆ ಇರುವ ಅಚ್ಚು ಆತ್ಮ. ಅವಿರತವಾಗಿ ಸುತ್ತುವ ಗಾಡಿಯ ಗಾಲಿ ಅಹಂಕಾರ. ಮೇಲೇರಿ ಕೆಳಗಿಳಿದು ಸದಾ ತೊಂದರೆಪಡುವುದು ಅದರ ಕೆಲಸ. (1052)
ಪರಮಸತ್ಯವಾದ ಆತ್ಮದ ಯಾಥಾರ್ಥ್ಯದ ಬದಲು ತಬ್ಬಿಬ್ಬಿನಿಂದ ಇತರ ಕೆಲವು ಸತ್ಯಗಳನ್ನು ಅರಸುವುದು ನೆಲದ ಮೇಲೆ ಬಿದ್ದಿರುವ ಕಸವನ್ನು ಕೂಡಲೇ ಗುಡಿಸಿ ಎಸೆಯದೆ ಕ್ಲೇಶಪಟ್ಟು ಅದನ್ನು ಹುಡುಕುವ ಪೆದ್ದು ಕ್ಷೌರಿಕನಂತಿರುತ್ತದೆ. (1076)
ಒಂದೇ ಮಧುರ ಅಮೃತದಿಂದ ಮಾಡಿದ ಆಳಿನ ಬೊಂಬೆ ಮತ್ತು ಒಡೆಯನ ಬೊಂಬೆಗಳ ನಡುವೆ, ಜೀವ ಮತ್ತು ಶಿವರ ನಡುವೆ ಯಾವುದಾದರೂ ಭೇದ ಇರಲು ಸಾಧ್ಯವೇ? (1081)
ದೀರ್ಘವಾದ ಪ್ರೀತಿ ಪುರಸ್ಸರವಾದ ಧ್ಯಾನದಿಂದ ರಚಿತವಾದ ಅಸಂಖ್ಯಾತ ಸುಂದರ ನಾಮರೂಪಗಳು ಕೇವಲ ಕಲ್ಪಿತ ವಿಶೇಷಣಗಳು. ಶಿವನ ನಿಜವಾದ ದೇಹ ನಿರಾಕಾರ ಶುದ್ಧ ಚೈತನ್ಯ. (1099)
ಜ್ಞಾನಿಯ ಮಹತ್ವವನ್ನು ಪವಾಡಗಳ ಆಧಾರದ ಮೇಲೆ ನಿರ್ಣಯಿಸುವುದು ಯಾವುದೋ ಸಣ್ಣ ಕಿಂಡಿಯೊಂದರಿಂದ ನುಸುಳಿ ಬಂದ ಬಿಡಿ ನೀಲಿಕಿರಣವೊಂದು ರಚಿಸಿದ ಆಕಾರ ವಿನ್ಯಾಸಗಳ ಆಧಾರದ ಮೇಲೆ ಸೂರ್ಯನ ಪ್ರಚಂಡ ಶಕ್ತಿಯನ್ನು ಅಳೆದಂತೆ. (1170)
ಹುಟ್ಟೂ ಇಲ್ಲ, ಅಳಿವೂ ಇಲ್ಲ; ಬದ್ಧನೂ ಇಲ್ಲ, ಸಾಧಕನೂ ಇಲ್ಲ; ಮೋಕ್ಷಕ್ಕೆ ಹಾತೊರೆಯುವವನೂ ಇಲ್ಲ, ಮೋಕ್ಷ ಪಡೆದವನೂ ಇಲ್ಲ. ಇದೇ ಪರಮಾರ್ಥ ಸತ್ಯ. (1227)

# ಅಧ್ಯಾಯ 14

# ಹೋಲಿಕೆ: ಮುಕ್ತಾಯ

ಮೂಲ ಮತ್ತು ಫಲ ಎರಡೂ ಸಮಾನವಾಗಿ ಮೋಕ್ಷ ಅಥವಾ ಏಕತೆಯ ಅರಿವಾಗಿರುವ, ಕ್ರಿಯಾತ್ಮಕವಾದ, ಸ್ವಾವಲಂಬಿಯಾದ ಧರ್ಮಕ್ಕಾಗಿ ಭಾರತೀಯ ಜೀವನಯೋಜನೆಯನ್ನು ಶಂಕರ ಮತ್ತು ರಾಮಾನುಜರು ಭಾವಿ ಪೀಳಿಗೆಗಾಗಿ ಕುಲೀನ ಸಮಾಜದ ಗಾಜಿನ ಜಾಡಿಯಲ್ಲಿ ಸುರಕ್ಷಿತವಾಗಿ ಇಟ್ಟರು. ನಮ್ಮ ಕಾಲದಲ್ಲಿ ಗಾಂಧೀಜಿ ಮತ್ತು ರಮಣಮಹರ್ಷಿ ಆ ಜಾಡಿಯನ್ನು ಪುಡಿಪುಡಿ ಮಾಡಿ ಬೀಜಗಳನ್ನು ಹೊರಗೆ ಚೆಲ್ಲಿದ್ದಾರೆ. ಪಂಡಿತ ಹಾಗೂ ಪಾಮರ ಹಿಂದೂಮತದ ನಡುವಣ, ಜ್ಞಾನ ಮತ್ತು ಕರ್ಮದ ನಡುವಣ, ಉಚ್ಚವರ್ಗದವರ ಮತ್ತು ಜನಸಾಮಾನ್ಯರ ನಡುವಣ ಅಡ್ಡಗೋಡೆಯನ್ನು ಅವರು ಒಡೆದು ಕೆಡವಿದ್ದಾರೆ. ಸಹಜ ಸ್ವರಾಜ್ಯ ಎಂದರೆ ಪೂರ್ಣ ವೈದಿಕ ಅರ್ಥದಲ್ಲಿ ಅಂತರಿಕ ಸ್ವರಾಜ್ಯ ಎಂದು ಗಾಂಧೀಜಿ ಪದೇ ಪದೇ ಮತ್ತು ಬಹಳ ಶ್ರಮದಿಂದ ವಿವರಿಸುತ್ತಿದ್ದರು. ಭೌತಿಕ ಮತ್ತು ಸಾಮಾಜಿಕ ಪ್ರಪಂಚಕ್ಕಿಂತ ಜ್ಞಾನದ ಪ್ರಪಂಚ ತಮಗೆ ಹೆಚ್ಚು ಸತ್ಯವಾಗಿತ್ತೆಂಬುದನ್ನು ಶ್ರೀ ಅರವಿಂದರು ಕೂಡ ಅನೇಕ ದಶಕಗಳ ತಮ್ಮ ಸಾಕ್ಷಾತ್ ಜೀವನದಿಂದ ಸಮರ್ಥಿಸಿದರು. ಅಂತೆಯೇ ಶಂಕರರು ತಮ್ಮ ಸತತವಾದ ಉತ್ಸಾಹಪೂರ್ಣ ಚಟುವಟಿಕೆಯ ಮೂಲಕ ಈ ಬಡ ಗ್ರಹ, ನಮ್ಮ ಈ ಪ್ರೀತಿಯ ನಾಡು ತಮಗೆ ಬಹಳ ಮಹತ್ವದ ವಸ್ತುವಾಗಿತ್ತೆಂಬುದನ್ನು ಸ್ಥಾಪಿಸಿದ್ದರು. ಸಾಮಾಜಿಕ ಆಸಕ್ತಿ, ಇತರರನ್ನು ದ್ವೇಷಿಸದೆ ನಮ್ಮ ಜನರನ್ನು ಪ್ರೀತಿಸುವುದು ಮತ್ತು ಸೇವಿಸುವುದು ಎಂಬ ಭಾವಾರ್ಥದಲ್ಲಿ ದೇಶಪ್ರೇಮ, ನಮ್ಮ ಸ್ವಧರ್ಮದ ಅಂಗೀಕಾರ ಹಾಗೂ ಆಚರಣೆ ಇವು ಅನ್ವಯಿಕ ವೇದಾಂತ ಮತ್ತು ನಿಜವಾದ ಸ್ವದೇಶಿ ಹಿಂದೂಧರ್ಮ. ಇದಕ್ಕೂ ಜೆಟ್‌ಯುಗದ ಚಿಲ್ಲರೆಪಲ್ಲರೆ ಯೋಗಿಗಳ ಮತ್ತು ಋಷಿಗಳ ಹುಚ್ಚಾಟಗಳು, ಕೂದಲು ನಿಮಿರಿಸುವ ಪವಾಡಗಳು, ದಿಡೀರ್ ಸಮಾಧಿಯ ಆಶ್ವಾಸನೆ ಮತ್ತು ಹೊಣೆಗಾರಿಕೆ-ಯಿಂದ ಹಾರಿಹೋಗಲು ಅವರು ನೀಡುವ ಇತರ ಹುಸಿ ಆಧ್ಯಾತ್ಮಿಕ ವಿಧಾನಗಳು ಇವುಗಳಿಗೂ ಯಾವುದೇ ಸಂಬಂಧ ಇಲ್ಲ. ಮೋಕ್ಷ ಮತ್ತು ಧರ್ಮಗಳ ನಡುವೆ ಇರುವ ಜೀವಂತ ಸಂಬಂಧವನ್ನು ವಿವೇಕಾನಂದ, ಗಾಂಧೀ ಮತ್ತು ಅರವಿಂದರು ಅರಿತಿದ್ದರು. ತಮ್ಮವರ ಬಗ್ಗೆ ಪ್ರೀತಿ ಮತ್ತು ಆಸಕ್ತಿಗಳನ್ನು ಅವರು ನಿಜವಾದ ಧರ್ಮದ ಕಾರಣವಾಗಿಯೋ ಫಲವಾಗಿಯೋ ಆಗಿದ್ದ ಒಂದು ಅಂಶವಾಗಿ ಹೊಗಳಿದ್ದರು. ಅದು ಸ್ವಧರ್ಮದಿಂದ ತಪ್ಪಿಸಿಕೊಳ್ಳುವುದಾಗಿರಲಿಲ್ಲ. ಆಧ್ಯಾತ್ಮಿಕ ಸಾಧನೆಗಾಗಿ ಮತ್ತು ತನ್ನ ಜನಗಳ ಕ್ಷೇಮಕ್ಕಾಗಿ ಅದರಲ್ಲಿ ಇನ್ನೂ ಆಳವಾಗಿ ತೊಡಗುವುದಾಗಿತ್ತು. ವೈಯುಕ್ತಿಕ ಹಾಗೂ ಕೌಟುಂಬಿಕ ಜೀವನದಷ್ಟೇ ರಾಜಕೀಯ ಜೀವನ ಮತ್ತು ಸಾರ್ವಜನಿಕ ಸೇವೆ ಧರ್ಮದ ಅಂಗಗಳೇ. ಅರ್ಥ-

ಕಾಮಗಳನ್ನು ನಿಯಂತ್ರಿಸುವ ಶಕ್ತಿಯಾದ ಆದರೆ ತಾನೇ ಮೋಕ್ಷವನ್ನು ಆಧರಿಸಿರುವ ಧರ್ಮದ ದ್ವಿರೂಪವನ್ನು ನೆನಪಿನಲ್ಲಿಟ್ಟುಕೊಂಡು, ನಾವು 1917ರ ಆಗಸ್ಟ್ 15ರಂದು ಮಹರ್ಷಿಗಳಿಂದ ಉಕ್ತವಾಗಿ, *ರಮಣಗೀತೆಯ* ಹತ್ತನೆ ಅಧ್ಯಾಯವಾಗಿರುವ ವಿಷಯವು ಸೂಚಿಸುವ ಗಹನವಾದ ಅರ್ಥಗಳನ್ನು ಈ ಸಂದರ್ಭದಲ್ಲಿ ಅಧ್ಯಯನ ಮಾಡಬೇಕು. ಗಾಂಧೀಯಂತೆ, ಮಹರ್ಷಿ ಸಾಮಾಜಿಕ ಸಂಬಂಧಗಳಿಗೆ ಮತ್ತು ಅಂತರರಾಷ್ಟ್ರೀಯ ಭ್ರಾತೃತ್ವಕ್ಕೆ ಬೆಲೆ ಕೊಟ್ಟಿದ್ದರು. ಸಮಾನತೆಯ ಭಾವವನ್ನು ನೈತಿಕ ಉನ್ನತಿಯ ಕುರುಹಾಗಿ ಮತ್ತು ಆಳತೆಯಾಗಿ ಎಣಿಸಿದ್ದರು. ಇದು ರಮಣ ಗೀತೆಯ ಈ ಭಾಗದಿಂದ, ನಲವತ್ತು ಪದ್ಯಗಳ ಅನುಬಂಧದ 26,27 ಶ್ಲೋಕಗಳಿಂದ ಮತ್ತು ಸಂಭಾಷಣೆಗಳ ಅನೇಕ ಅಭಿಪ್ರಾಯಗಳಿಂದ ಸ್ಪಷ್ಟವಾಗುತ್ತದೆ. ಶ್ರೀರಾಮ ಮತ್ತು ಅವನ ನಿಸ್ವಾರ್ಥ ಬದುಕಿನ ಧೀರೋದಾತ್ತ ನಿದರ್ಶನವನ್ನು ಮಹರ್ಷಿ ಎತ್ತಿ ಹಿಡಿದರು. ಜ್ಞಾನವನ್ನು ಕರ್ಮಕ್ಕೆ ಹೊಂದಿಸುವ ಮಹಾತ್ಮ ಗಾಂಧೀಯವರ ಪ್ರಯೋಗಗಳನ್ನು ಅವರು ಸ್ನೇಹಪೂರ್ವಕ ಆಸಕ್ತಿಯಿಂದ ವೀಕ್ಷಿಸಿದರು.

ಜ್ಞಾನ ಎಂದರೆ ಯಾವುದೋ ಒಂದನ್ನು ಗ್ರಹಿಸುವುದಲ್ಲ. ಏಕತ್ವದ ಜ್ಞಾನರೂಪವಾದ ನಮ್ಮ ಸಂಪೂರ್ಣ ಸ್ವರೂಪದ ಅನುಭವ, ಆಸ್ವಾದ ಮತ್ತು ಅಭ್ಯಾಸ ಅದು. ನಾವು ನಮ್ಮ ಕಣ್ಣನ್ನು ನೋಡಲಾಗುವುದಿಲ್ಲ, ಅದನ್ನು ಕೇವಲ ಬಳಸಬಲ್ಲೆವು. ಇರವನ್ನು ಅರಿಯಲಾಗದು, ಕೇವಲ ಇರಬಹುದು ಅಷ್ಟೆ. ಇರುವುದು ಎಂದರೆ ಜ್ಞಾನರೂಪವಾಗಿರುವುದು. ನಾನಿದ್ದೇನೆ. ಅದಕ್ಕಿಂತ ಹೆಚ್ಚಿನದು ಏನೂ ಇಲ್ಲ. ಅಂಥ ಶುದ್ಧ ಇರವು ಶಿವ. ''ಶಿವನ ದರ್ಶನಗಳನ್ನು ಪಡೆಯಲು ನಿರೀಕ್ಷಿಸಬೇಡಿ'' ಎಂದು ನಮಗೆ ಹೇಳಲಾಗಿದೆ. ಅದರ ಬದಲು ನಾವು ಶಿವನಾಗಲು ಸಿದ್ಧರಾಗಬೇಕು. ಶಿವನೂ ಆಗಿ ಅಹಂಕಾರವನ್ನೂ ಉಳಿಸಿಕೊಳ್ಳಲು ಸಾಧ್ಯವಿಲ್ಲ. ಅಹಂಕಾರದ ನಾಶವೆಂದರೆ ಜ್ಞಾನದ ಪ್ರಾಪ್ತಿ. ಆಗುವ ಮೂಲಕ ಅರಿಯುವುದೊಂದೇ ನಿಜವಾದ, ಸಂಪೂರ್ಣವಾದ ಅರಿವು. ಅರಿವಿನ ಇತರ ಪ್ರಕಾರಗಳು ಕೇವಲ ಸಾಪೇಕ್ಷ ಮತ್ತು ಆಂಶಿಕ. ಇಂಥ ನಿಜವಾದ ಅರಿವು ಇತರರೊಡನೆ ಏಕಾನುಭೂತಿಗೆ, ಸತ್ ಮತ್ತು ಚಿತ್‌ನ್ನು ಎಲ್ಲರೊಡನೆ ಹಂಚಿಕೊಳ್ಳುವುದಕ್ಕೆ, ಸಕ್ರಿಯ ಪ್ರೇಮಕ್ಕೆ ಮತ್ತು ನಾನಾ ರೂಪಗಳಲ್ಲಿರುವ ನಾರಾಯಣ ಸೇವೆಗೆ ಒಯ್ಯುತ್ತದೆ.

ಮಹರ್ಷಿಗಳ ಶುದ್ಧ ವೇದಾಂತ ಅಥವಾ ಜ್ಞಾನ ಮತ್ತು ಮಹಾತ್ಮ ಗಾಂಧೀಯವರ ಅನ್ವಯಿಕ ವೇದಾಂತ ಅಥವಾ ಕರ್ಮಯೋಗ ಈ ಎರಡರ ನೆಲೆಯೂ, ಏಕೈಕ ಆಧ್ಯಾತ್ಮಿಕ ಪಾಪವೆಂದರೆ ಪ್ರತ್ಯೇಕವಾದ ಆತ್ಮದಲ್ಲಿ ಅಭಿಮಾನ ಎಂಬ ಪರಿಗಣನೆ. ಗೀತೆಯ ಮೇಲಣ ಉಪನ್ಯಾಸಗಳಲ್ಲಿ (1926), ಗಾಂಧೀಜಿ ಹೀಗೆ ಹೇಳುತ್ತಾರೆ: ''ನಮ್ಮ ಅಹಂಭಾವನೆಗೆ ನಾವು ಇಟ್ಟುಕೊಂಡಿರುವ ಸಂಬಂಧವನ್ನು ಕಳಚುವ ಪ್ರಮಾಣಕ್ಕೆ ತಕ್ಕಂತೆ ಮಾತ್ರ ನಾವು ಸತ್ಯವನ್ನು ಅನುಸರಿಸಬಲ್ಲೆವು. ಈ ಇಡೀ ವಿಶ್ವವು ಭಗವಂತನಲ್ಲಿದೆ ಎಂದು ಒಮ್ಮೆ ನಾವು ಗ್ರಹಿಸಿದಲ್ಲಿ, ಕಳ್ಳರು ಮತ್ತು ಹುಲಿಗಳನ್ನು ಕೂಡಾ ನಾವು ಎಂದೇ ಭಾವಿಸುತ್ತೇವೆ. ಈ ರೀತಿ ಭಾವಿಸುವವರೆಗೆ ನಾವು ಜ್ಞಾನದ ಸ್ಥಿತಿಯನ್ನು ತಲುಪಿಯೇ ಇಲ್ಲವೆಂದು ಖಂಡಿತವಾಗಿ ಇರಬಹುದು....

''ಒಳ್ಳೆಯದನ್ನು ಮಾಡುವುದು ಮನುಷ್ಯನ ಸ್ವಭಾವ, ಏಕೆಂದರೆ ಜೀವರೆಲ್ಲರೂ ಒಂದೇ. ಪ್ರತಿಯೊಂದು ಜೀವವೂ ಪ್ರತ್ಯೇಕವಾಗಿ ತೋರಿಬರುವುದಕ್ಕೆ ಯಾವ ಮಹತ್ವವೂ ಇಲ್ಲ.

ಇದನ್ನು ಅರಿತಾಗ, ಮನುಷ್ಯನ ಅಹಂಕಾರ ಕರಗಿ ಹೋಗುತ್ತದೆ.''

ಮತ್ತೆ 1935 ರ ಒಂದು ಪತ್ರದಲ್ಲಿ ಗಾಂಧೀಜಿ ಹೀಗೆ ಹೇಳುತ್ತಾರೆ:

''ಪುನರ್ಜನ್ಮದಲ್ಲಿ ನಂಬಿಕೆ ಇಡಲು, 'ನಾನು' ಎನ್ನುವುದರ ಅಸ್ತಿತ್ವದಲ್ಲಿ ನಂಬಿಕೆಯಿಡುವುದು ಅಗತ್ಯವಾಗುತ್ತದೆ. ನಾನು ಇರದಿದ್ದರೆ ಮತ್ತು ದೇವರು ಮಾತ್ರವೇ ಇರವುದಾದರೆ, ಆಗ ಪುನರ್ಜನ್ಮ ತಾಳುವವರು ಯಾರು ಮತ್ತು ತಾಳುವುದು ಹೇಗೆ? ಈ ಪರಿಜ್ಞಾನವೇ ಪುನರ್ಜನ್ಮ, ಅಲ್ಲವೇ?... ಜ್ಞಾನ ಹೃದಯದಿಂದ ಬರುತ್ತದೆ. ತಲೆ ತರ್ಕವನ್ನು ಮಾತ್ರ ಒದಗಿಸಬಲ್ಲದು. ಆದರೆ ತರ್ಕಕ್ಕೆ ಏನು ಬೆಲೆ? ಜ್ಞಾನವನ್ನು ಉಂಟು ಮಾಡುವುದು ಕರ್ಮವು ಮಾತ್ರವೆ.''

ಆದರೆ ಮಹರ್ಷಿಗಳಿಗೆ ಜ್ಞಾನಮಾರ್ಗವು ಆತ್ಮವಿಚಾರ ಹಾಗೂ ಕರ್ಮವನ್ನು ಒಳಗೊಂಡಿರುತ್ತದೆ.

ರಮಣಮಹರ್ಷಿಗಳ ಬಗ್ಗೆ ಗಾಂಧೀಜಿಯ ನಿಲುವನ್ನು ಈ ಸಂಗತಿಯಿಂದ ನಿರ್ಣಯಿಸಬಹುದು. ಅವರ ಗುಂಪಿನಲ್ಲಿ ಯಾರಾದರೂ, ಉದಾಹರಣೆಗೆ ಶಂಕರಲಾಲ್ ಬ್ಯಾಂಕರ್, ರಾಜೇಂದ್ರ ಪ್ರಸಾದ್ ಅಥವಾ ಜಮ್ನಾಲಾಲ್ ಬಜಾಜ್, ಖಿನ್ನರಾದಾಗ ಅಥವಾ ಸಂಶಯಕ್ಕೊಳಗಾದಾಗ ಗಾಂಧೀಜಿ ಅವರಿಗೆ, ''ರಮಣಾಶ್ರಮಕ್ಕೆ ಹೋಗಿ ಒಂದು ತಿಂಗಳು ಅಲ್ಲಿದ್ದು ವಾಪಸ್ಸು ಬನ್ನಿ'' ಎಂದು ಹೇಳುತ್ತಿದ್ದರು. ಸಾಮಾನ್ಯವಾಗಿ ಅವರು ಒಂದು ವಾರ ಅಥವಾ ಹದಿನೈದು ದಿನಗಳ ಒಳಗೆ, ಮತ್ತೆ ಚೈತನ್ಯ ಪಡೆದು ತಮ್ಮ ಜವಾಬ್ದಾರಿಗಳನ್ನು ಪುನಃ ನಿರ್ವಹಿಸಲು ಸಿದ್ಧರಾಗಿ, ವಾಪಸು ಬರುತ್ತಿದ್ದರು.

ಧ್ಯಾನ ಮತ್ತು ಕರ್ಮ, ಸ್ತಬ್ಧತೆ ಮತ್ತು ಚಲನೆ ಇವು ಒಂದೇ ಕಾರ್ಯಯಂತ್ರದ ಪರಸ್ಪರ ಪೂರಕ ಭಾಗಗಳು. ಬೀಸುವಕಲ್ಲಿನಲ್ಲಿ ವೇಗವಾಗಿ ಸುತ್ತುತ್ತಿರುವ ಮೇಲಿನ ಕಲ್ಲಿನ ಭದ್ರತೆಗೆ ಮತ್ತು ಹಿಟ್ಟು ಮಾಡುವ ಶಕ್ತಿಗೆ ಆಧಾರ ಕೆಳಕಲ್ಲಿನ ದೃಢವಾದ ನಿಶ್ಚಲತೆ. ಮೇಲಿನ ದವಡೆ ಮತ್ತು ಕೆಳದವಡೆ, ಅಚ್ಚು ಮತ್ತು ಚಕ್ರ, ನಟರಾಜನ ಎರಡು ಪಾದಗಳು ಇವೂ ಅಂತೆಯೇ ಇರುತ್ತವೆ. ನಮ್ಮ ಕಾಲದಲ್ಲಿ ಮಹರ್ಷಿ ಶುದ್ಧ ಚೈತನ್ಯ ಅಥವಾ ಸತ್ ಆದ ಶಾಂತಿಯ ಮೂರ್ತರೂಪವಾಗಿದ್ದರು. ಮಹಾತ್ಮ ಗಾಂಧೀ ಸತ್ಯದಿಂದ ಸತ್ಯದ ಅರಿವಾದ, ಸತ್‌ನ ಒಳಗೆ ಸತ್ಯದಿಂದ ಸತ್ಯಕ್ಕೆ ಚಲನೆಯಾದ, ಶಕ್ತಿಯ ಮೂರ್ತರೂಪವಾಗಿದ್ದರು. ಒಂದೇ ಸತ್ಯದ ಒಂದು ಮುಖ ಜ್ಞಾನರೂಪವಾದ ಶಾಂತಿ ಮತ್ತು ಇನ್ನೊಂದು ಮುಖ ಕ್ರಿಯಾ ಸಾಮರ್ಥ್ಯವಾದ ಶಕ್ತಿ. ಸರೋಜಿನಿ ನಾಯ್ಡು ಪ್ರಕಾರ, ''ಇಬ್ಬರು ಮಹಾನರೂ- ನಮಗೆ ಶಾಂತಿಯನ್ನು ನೀಡಿದ ಮಹರ್ಷಿ ಮತ್ತು ನಾವು ಶಾಂತಿಯಿಂದಿರಲು ಒಂದು ಕ್ಷಣವೂ ನಮ್ಮನ್ನು ಬಿಡದ ಮಹಾತ್ಮ ಭಾರತದ ಆಧ್ಯಾತ್ಮಿಕ ಪುನರುಜ್ಜೀವನಕ್ಕಾಗಿ ದುಡಿ-ಯುತ್ತಿದ್ದರು.'' ಜೀವಂತ ದೇಹವೊಂದರಲ್ಲಿ ಕಣ್ಣು ಮತ್ತು ಕೈಗಳು ತಮತಮಗೆ ತಕ್ಕ ಕೆಲಸಗಳು ಹೊಂದಿರುವಂತೆ, ಆರೋಗ್ಯವಂತ ಸಮಾಜದಲ್ಲಿ ಜ್ಞಾನಿ ಮತ್ತು ಕರ್ಮಯೋಗಿ ತಮತಮಗೆ ತಕ್ಕ ಕರ್ತವ್ಯಗಳನ್ನು ಹೊಂದಿರುತ್ತಾರೆ.

ಜ್ಞಾನದ, ಸ್ವರೂಪ ಮತ್ತು ಕ್ರಿಯೆಯ ಅಖಂಡವಾಗಿರುವ ಚೈತನ್ಯದ, ವಿಷಯವಾಗಿ ಜೆ. ಕೃಷ್ಣಮೂರ್ತಿ ಮತ್ತು ರಮಣಮಹರ್ಷಿಗಳ ದೃಷ್ಟಿಯಲ್ಲಿ ಬಹಳ ಸಾಮ್ಯವಿದೆ. ಇಬ್ಬರೂ ಸಾಧಕನನ್ನು ಮನಸ್ಸಿನ ಎಲ್ಲೆಗಳವರೆಗೆ ಕೊಂಡೊಯ್ಯುತ್ತಾರೆ. ಅಲ್ಲಿ ಅಜ್ಞಾತದೊಳಕ್ಕೆ ಅವನೇ

ಧುಮುಕುವಂತೆ ಅವನನ್ನು ಬಿಡುತ್ತಾರೆ. ಸ್ವತಃ ಪರಾಶಕ್ತಿ ಮತ್ತು ಅತ್ಯಂತ ವಿವೇಕಯುಕ್ತ ಕ್ರಿಯೆ ಆಗಿರುವ ಜ್ಞಾನದ ಶಾಶ್ವತ ಚಿಲುಮೆಯನ್ನು ಬಿಡುಗಡೆ ಮಾಡುವ ಸಾಧನವಾಗಿ ಶೂನ್ಯದ, ವೈಯಕ್ತಿಕತೆಯ ಅಭಾವದ ನೇರ ಅನುಭವವನ್ನು ಇಬ್ಬರೂ ಶಿಫಾರಸು ಮಾಡುತ್ತಾರೆ. ಬೇರೆ ಮಾತುಗಳಲ್ಲಿ ಹೇಳುವುದಾದರೆ, ಇಬ್ಬರೂ ನಮ್ಮನ್ನು ಕಾಲದಿಂದ ಮತ್ತು ದ್ವೈತದ ಲೋಕದಿಂದ ಆಚೆಗೆ ಸತ್-ಚಿತ್‌ನ ಅಖಂಡತ್ವಕ್ಕೆ ಕರೆದೊಯ್ಯುತ್ತಾರೆ.

ಬಾಳನ್ನು ಸಾಗಿಸಲು ಅನುಭವಾತ್ಮಕವಾದ ಜ್ಞಾನವೇ ಸಮಗ್ರವಾದ ಮತ್ತು ವಾಸ್ತವಿಕವಾದ ಜ್ಞಾನ ಎಂದು ಇಬ್ಬರೂ ಒತ್ತಿ ಹೇಳುತ್ತಾರೆ. ಇತರ ಬಗೆಯ ಜ್ಞಾನಗಳು ಕೇವಲ ಆಂಶಿಕ ಮತ್ತು ಸಾಧನದ ಮೌಲ್ಯದವು. ವಾಸ್ತವದ ನೆನಪಲ್ಲದೆ ಮನಃಕಲ್ಪಿತ ನೆನಪನ್ನು ಇಬ್ಬರೂ ಖಂಡಿಸುತ್ತಾರೆ. ಪ್ರತ್ಯಕ್ಷ ಅನುಭವದಲ್ಲಿ ಮಿದುಳು, ಕನ್ನಡಿಯಂತೆ, ಪ್ರಾಚೀನ ವಾಸನೆಗಳಿಂದ ಮುಕ್ತವಾದ ಸಾಧನವಾಗಿ ವರ್ತಿಸಬೇಕೆನ್ನುತ್ತಾರೆ. ಸಾಕ್ಷಾತ್ತಾಗಿ ಇರುವುದನ್ನು ಗ್ರಹಿಸುವುದಕ್ಕೆ ಆಲೋಚನೆಗಳು ಮತ್ತು ಪದಗಳು ಅಡಚಣೆಗಳಾಗುತ್ತವೆ ಎಂದು ಇಬ್ಬರೂ ಅವನ್ನು ನಿಷೇಧಿಸುತ್ತಾರೆ. ಮಾತಿಗಿಂತ ಮೌನವ್ಯವಹಾರವೇ ಹೆಚ್ಚು ಶಕ್ತವಾದುದೆಂದು ಇಬ್ಬರೂ ಭಾವಿಸುತ್ತಾರೆ. ಇಬ್ಬರಿಗೂ ಅನುಭವಿಗಿಂತ ಅನುಭವೇ ಹೆಚ್ಚು ಸತ್ಯವಾದುದು. ಇಬ್ಬರ ಪ್ರಕಾರ ಆಲೋಚಕನು ಆಲೋಚನೆಯಿಂದ ಕಲ್ಪಿತವಾದ ಒಂದು ಮಿಥ್ಯಾವಸ್ತು. ಇಬ್ಬರೂ ಒಂದು ಮಾರ್ಗವನ್ನು, ವಿಚಾರ ವಿಧಾನವನ್ನು ಸೂಚಿಸುತ್ತಾರೆ. ನಿಷ್ಕೃಷ್ಟವಾದ ಸಿದ್ಧಾಂತವೊಂದನ್ನು ಇಬ್ಬರಲ್ಲಿ ಒಬ್ಬರೂ ಉಪದೇಶಿಸುವುದಿಲ್ಲ. ಇರುವುದರ ಸತ್ಯದ ಬಗ್ಗೆ ಕೂಡಲೇ ಪ್ರಾಯೋಗಿಕ ಅನ್ವೇಷಣೆ ಕೈಗೊಳ್ಳುವಂತೆ ಇಬ್ಬರೂ ಒತ್ತಾಯಪಡಿಸುತ್ತಾರೆ. ಮುಂದಿನ ಜನ್ಮಗಳು ಅಥವಾ ಇತರ ಲೋಕಗಳಲ್ಲಿನ ಆಸಕ್ತಿಯನ್ನು ನಿಷೇಧಿಸುತ್ತಾರೆ. ಪಂಥೀಯತೆ, ಮಾಟಮಂತ್ರ ಮತ್ತು ಪವಾಡಗಳನ್ನು ಮಾನವ ಜ್ಞಾನದ ವಿಕಾರಗಳು ಮತ್ತು ಮಾನವ ಐಕ್ಯತೆಯ ಭಂಗ ಎಂದು ಇಬ್ಬರೂ ಖಂಡಿಸುತ್ತಾರೆ. ಇಲ್ಲಿಯೇ ಇಂದೇ ಚೈತನ್ಯದ ಪರಿವರ್ತನೆಯನ್ನು ಇಬ್ಬರೂ ಒತ್ತಿ ಹೇಳುತ್ತಾರೆ. ಆದರಿಂದಾಗಿ ಪ್ರತಿಯೊಬ್ಬ ವ್ಯಕ್ತಿಯ ಪೂರ್ಣತೆಯನ್ನು ಮತ್ತು ಪರಿಚಿತವಾದುದರಲ್ಲಿ ಪವಿತ್ರವಾದುದನ್ನು ಕಾಣುವ ಮೂಲಕ ನಾವು ಒಬ್ಬ ವ್ಯಕ್ತಿಯಾಗಿ ಮತ್ತು ಸಮಾಜದ ಒಬ್ಬ ಸದಸ್ಯರಾಗಿ ಬೆಳೆಯುತ್ತೇವೆ. ಭ್ರಷ್ಟವಾಗಿ ಭಗ್ನವಾಗಿರುವ ಪ್ರಪಂಚವನ್ನು ಪುನರುದ್ಧರಿಸಬಲ್ಲ ಸೃಷ್ಟಿಶಕ್ತಿಯಾಗಿರುವ ನಿರೂಪ ಶಕ್ತಿಯಲ್ಲಿ, ಅಂದರೆ ಸರ್ವವ್ಯಾಪ್ತಿಯಾದ ಮಾತೃಸದೃಶ ಪ್ರೇಮದಲ್ಲಿ, ಇಬ್ಬರಿಗೂ ನಂಬಿಕೆಯಿದೆ.

ಆದರೆ ಕೃಷ್ಣಮೂರ್ತಿ 'ನಾಮರಹಿತ ಅನುಭವ'ವನ್ನು ಮೌನದ ಮೂಲಕವೇ ಸಾಂಪ್ರದಾಯಿಕ ಮತಕ್ಕೆ ಸ್ವಲ್ಪವೂ ಸಂಬಂಧವಿಲ್ಲದ ಪದಗಳ ಮೂಲಕವೇ ತಿಳಿಸುತ್ತಾರೆ. ಐಕ್ಯಾನುಭವದ ಸ್ಥಿತಿ ಒಮ್ಮೆ ಸಾಧಿತವಾದರೆ ತನ್ನ ಅಭಿವ್ಯಕ್ತಿಗೆ ಉಚಿತವಾದ ರೂಪಗಳನ್ನು ಅದು ತಾನೇ ಕಲ್ಪಿಸಿಕೊಳ್ಳುತ್ತದೆ ಎಂದು ಅವರ ಭಾವನೆ, ಆದರೆ ವಿಶ್ವಮತಗಳು ಪರಿಚಯಗೊಳಿಸಿರುವ ಕತೆಗಳು ಮತ್ತು ಸಂಕೇತಗಳು, ವಾದಗಳು ಮತ್ತು ಪ್ರತಿಮೆಗಳನ್ನು ಮಹರ್ಷಿ ಅಂಗೀಕರಿಸುತ್ತಾರೆ ಮತ್ತು ಬಳಸುತ್ತಾರೆ. ಜನ ತಾವು ಅಭ್ಯಾಸದಲ್ಲಿಟ್ಟುಕೊಂಡಿದ್ದ ಸಾಧನೆಗಳನ್ನು ಮುಂದುವರೆಸುವುದನ್ನು ಅವರು ನಿಷೇಧಿಸಲಿಲ್ಲ. ಆದರೆ ಅವುಗಳಿಗೆ ಪೂರಕವಾಗಿ ಅಥವಾ ಪರ್ಯಾಯವಾಗಿ ಆತ್ಮವಿಚಾರವನ್ನು ಸೇರಿಸಲು ಸರಿಯಾದ

ಜಾಗ್ರತೆಯನ್ನೂ ಅವರು ವಹಿಸಿದರು.

ಕಾರ್ಲೈಲ್ ತನ್ನ *ಸಾರ್ಟರ್ ರಿಸಾರ್ಟಸ್* ಗ್ರಂಥದಲ್ಲಿ ಒಂದು ಹೊಸ ಪುರಾಣ ಸಂಗ್ರಹದ, ಧರ್ಮದ ದಿವ್ಯಭಾವಕ್ಕೆ ತೊಡಿಸಲು ಒಂದು ಹೊಸ ಉಡುಪಿನ, ಅದನ್ನು ಅಭಿವ್ಯಕ್ತಿಗೊಳಿಸಲು ಒಂದು ಹೊಸ ಸಾಧನದ ಅಪೇಕ್ಷೆಯನ್ನು ವ್ಯಕ್ತಪಡಿಸಿದ. ದುರ-ದೃಷ್ಟವೆಂದರೆ, ಅದು ನಾಜಿಸಂ ಎಂಬ ಉನ್ಮಾದದ ನಾಂದಿಯಾಯಿತು. ಪುರಾಣಕಥೆಗಳು ಜನಗಳಿಗೆ ಸಂಭವಿಸುತ್ತವೆ. ವಾಲ್ಮೀಕಿ ಮತ್ತು ವ್ಯಾಸರಂಥ ಮಹರ್ಷಿಗಳನ್ನು ಬೆಳೆಸುವ ಸಮಾಜವೊಂದರಲ್ಲಿ ಅವು ಬೆಳೆಯುತ್ತವೆ. ಪುರಾಣಕಥೆಗಳನ್ನು ಮತ್ತು ಮಹರ್ಷಿಗಳನ್ನು ತಯಾರಿಸಲಾಗುವುದಿಲ್ಲ. ಆದರೆ ಮಹರ್ಷಿಗಳನ್ನು ಉಪೇಕ್ಷೆ ಮಾಡಬಹುದು, ಮಹಾತ್ಮರನ್ನು ಕೊಂದುಹಾಕಬಹುದು ಮತ್ತು ಪುರಾಣಕಥೆಗಳನ್ನು ದುರುಪಯೋಗ ಮಾಡಬಹುದು ಅಥವಾ ಅವು ಕ್ಷಯಿಸಿ ನಾಶವಾಗಿ ಹೋಗುವಂತೆ ಬಿಡಬಹುದು. ಇಂದಿಗೂ ಜೀವಂತವಾಗಿ ಪ್ರಯೋಜನಕರವಾಗಿರುವ ನಮ್ಮ ಪುರಾಣಕಥೆಗಳ ಅಂತರಾರ್ಥಗಳು ಮತ್ತು ಸತ್ಪರಿಣಾಮಗಳನ್ನು ರಮಣಮಹರ್ಷಿ ಮತ್ತು ಗಾಂಧೀ ಅರಿತಿದ್ದರು. ಭಗವಾನ್ ದಾಸ್, ಕುಮಾರಸ್ವಾಮಿ, ಜಿಮ್ಮರ್, ಡಾನಿಲೂ, ಚಿದ್ಭವಾನಂದ ಮತ್ತು ಇತರರು ಅವನ್ನು ಇತಿಹಾಸ, ತತ್ತ್ವಶಾಸ್ತ್ರ, ನೀತಿಶಾಸ್ತ್ರ ಮತ್ತು ಮನಃಶಾಸ್ತ್ರ ಇವುಗಳ ಪರಿಭಾಷೆಯಲ್ಲಿ ವಿವರಿಸಿದ್ದಾರೆ. ನಮ್ಮ ದೇವತೆಗಳು ಹೇಗೆ ಹುಟ್ಟಿಕೊಂಡರು, ಅವರು ಏನನ್ನು ಪ್ರತಿನಿಧಿಸುತ್ತಾರೆ, ತಾಯಿ, ತಂದೆ ಮತ್ತು ಮಗು, ಯಜಮಾನ ಮತ್ತು ಸೇವಕ ಇವರನ್ನೊಳಗೊಂಡ ಪ್ರಾಚೀನ ಕಥೆಗಳು ಹೇಗೆ ವರ್ತಮಾನ ಮಾನಸ ಸಾಮಾಜಿಕ ವಾಸ್ತವಿಕತೆಗಳಿಗೆ ಸಂಬಂಧಿಸಿವೆ ಮತ್ತು ಈ ಕಥೆಗಳು ಹೇಗೆ ಆಧುನಿಕ ಮಾನವನ ಭಾವಿ ಹಾಗೂ ನೈತಿಕ ಪ್ರೇರಣೆಗಳನ್ನು ಉದ್ದೀಪನಗೊಳಿಸುತ್ತವೆ ಮತ್ತು ತೃಪ್ತಿಪಡಿಸುತ್ತದೆ ಎಂದು ನಮಗೆ ಸ್ಪಷ್ಟವಾಗಿ ತಿಳಿಸಲಾಗಿದೆ. ದೇವರುಗಳ ಬಗ್ಗೆ ಭಕ್ತಿಯನ್ನು ನೈತಿಕ ಮತ್ತು ಸಾಮಾಜಿಕ ಹೊಣೆಗಳಿಂದ ತಪ್ಪಿಸಿಕೊಳ್ಳುವ ಸುಲಭವಾದ ಮಾರ್ಗವಾಗಿ ಬಳಸಿಕೊಳ್ಳುವ ವಿರುದ್ಧ ಮಹರ್ಷಿ ಮತ್ತು ಮಹಾತ್ಮ ಇಬ್ಬರೂ ನಮಗೆ ಎಚ್ಚರಿಕೆ ನೀಡಿದ್ದಾರೆ. ಶಂಕರ ಮತ್ತು ರಾಮಾನುಜರ ನಿಜವಾದ ವೇದಾಂತದ ಉಪದೇಶವನ್ನು ಅವರು ಇಂದು ಸಮಕಾಲೀನ ಪರಿಭಾಷೆಯಲ್ಲಿ ಪುನಃ ಪ್ರತಿಪಾದಿಸಿದ್ದಾರೆ.

ಪ್ರತಿಯೊಬ್ಬರೂ ಆತ್ಮವನ್ನು ಕಾಣುವ ಮತ್ತು ಆತ್ಮವಾಗುವ ಹಾದಿಯನ್ನು ಮಹರ್ಷಿ ಸಾಮಾನ್ಯ ವಿವೇಕಕ್ಕೆ, ಯುಕ್ತಿಗೆ ಅಥವಾ ತರ್ಕಕ್ಕೆ ವಿರೋಧವಾಗದ ರೀತಿಯಲ್ಲಿ ಸೂಚಿಸಿದ್ದಾರೆ. ಈ ಜೀವಂತ ವಿಶ್ವದ ಆರೋಗ್ಯವಾದ ಅಂಗವೊಂದರಲ್ಲಿ ವರ್ತಿಸುವುದರಲ್ಲಿ ತೃಪ್ತಿ ಕಂಡು, ಶುದ್ಧ ಜ್ಞಾನದ ಪರಮಾನಂದವನ್ನು ಆಗಾಗ ಸವಿಯುತ್ತ, ತನಗೆ ಸಹಜವಾಗಿರುವ ಸ್ವಧರ್ಮವನ್ನು ಸದಾಕಾಲ ಪಾಲಿಸುತ್ತ, ಬದುಕಿನ ಎಲ್ಲ ಕಾರ್ಯ ಕಲಾಪಗಳಲ್ಲಿ ಮತ್ತು ಏರುಪೇರುಗಳಲ್ಲಿ ಸಾಧಾರಣ ಮಾನವನ ಸಮಗ್ರತೆಯನ್ನು ಉಳಿಸಿಕೊಳ್ಳುವುದು ಆ ಹಾದಿಯ ಲಕ್ಷಣ. ನಮ್ರವಾದ ಪ್ರಾಮಾಣಿಕ ಆತ್ಮವಿಚಾರದ ಮೂಲಕ ಯಾರೇ ಆಗಲಿ ಪಾರಮಾರ್ಥಿಕ ಸತ್ಯವನ್ನು ತಮ್ಮ ಸ್ವಾಮ್ಯವನ್ನಾಗಿ ಮತ್ತು ಅನುಭೋಗವನ್ನು ಮಾಡಿಕೊಳ್ಳಬಹುದು. ಬಾಹ್ಯಾಕಾಶದಲ್ಲಿರುವ ಸೂರ್ಯನು ನಮಗಾಗಿ ತನ್ನ ಬದುಕು ಮತ್ತು ಶಾಖವನ್ನು ಹರಡುತ್ತಿರುವಂತೆ ಪ್ರತಿ ಮಾನವ ಹೃದಯದಲ್ಲಿಯೂ ಪ್ರಕಾಶಮಾನವಾಗಿ ಏಕಪ್ರಕಾರವಾಗಿ ಬೆಳಗುತ್ತಿರುವ ಜ್ಞಾನವನ್ನು ಈ ರೀತಿ ಆರೋಗ್ಯಕ್ಕೆ ಮತ್ತು ಬೆಳವಣಿಗೆಗೆ

ಬಳಸಬಹುದು. ಆತ್ಮಕ್ಕಾಗಿ ಅನ್ವೇಷಣೆ ಪ್ರಾರಂಭವಾಗುತ್ತಲೇ, ಅಹಂಕಾರದ ಕತ್ತಲೆ ನಿಧಾನವಾಗಿ ಕರಗುತ್ತದೆ ಮತ್ತು ಸದ್ವಸ್ತುವಿನ ಸರ್ವಸಾಮಾನ್ಯ ಬೆಳಕಿನಲ್ಲಿ ಲೀನವಾಗುತ್ತದೆ.

ಕಲ್ಲಿನಂತೆ ಮೂಕ ಮತ್ತು ಅವಿಚಲಿತರೆಂಬ ಅಪಖ್ಯಾತಿಗೆ ಒಳಗಾಗಿದ್ದ ಮಹರ್ಷಿ ದಿವ್ಯ ಮಾನವ ಚೇತನ ಮೂರ್ತರೂಪಗಳಾದ ರಾಮಕೃಷ್ಣ, ವಿವೇಕಾನಂದ, ಗಾಂಧೀ, ಅರವಿಂದರು ಮತ್ತು ಇತರರ ವಿರುದ್ಧ ಯಾವುದೇ ಪಿಸುಮಾತು ಕೇಳಿಬಂದರೂ ಎಚ್ಚೆತ್ತು ಗಮನಿಸುತ್ತಿದ್ದರು. ಅವರ ಅಭಿಮಾನಿ ಭಕ್ತರಲ್ಲಿ ಕೆಲವರು ಈ ಮೇಲಿನವರ ನಡುವೆ ಸಲ್ಲದ ಭೇದವನ್ನು ತೋರಿಸುವ ಹೋಲಿಕೆಗಳನ್ನು ಮಾಡುತ್ತಿದ್ದರು. ಕೋಪಕ್ಕಿಂತಲೂ ಹೆಚ್ಚಾಗಿ ದುಃಖದಿಂದ ಅವರು ಆ ಟೀಕಿಗನ ಪಾಪಕ್ಕೆ ಪ್ರಾಯಶ್ಚಿತ ಮಾಡಿಕೊಳ್ಳುತ್ತ, ''ಆ ಮಾತಾಡುತ್ತಿರುವುದು ನಮ್ಮ ಅಹಂಕಾರ'' ಎನ್ನುತ್ತಿದ್ದರು. ಮಹರ್ಷಿಯನ್ನು ಒಬ್ಬ ಮಾನವನನ್ನಾಗಿ, ವಿಶ್ವೋತ್ತೀರ್ಣ ಮಾನವನನ್ನಾಗಿ, ಮಾನವತೆಯ ನಿಜ ಪ್ರತಿಮೆ ಮತ್ತು ಸಾರವನ್ನಾಗಿ, ನಮ್ಮ ಯುಗದ ಪುರುಷೋತ್ತಮನನ್ನಾಗಿ ಭಾವಿಸದೆ ತತ್ತ್ವಶಾಸ್ತ್ರ ನಡುವೆ ಒಬ್ಬ ತತ್ತ್ವಶಾಸ್ತ್ರಜ್ಞರನ್ನಾಗಿ ಅವರನ್ನು ಎಣಿಸಿ, ಅವರ ಬೋಧನೆಗಳನ್ನು ವಿಶ್ಲೇಷಿಸಿ ಪಟ್ಟಿಮಾಡಿದಲ್ಲಿ ನಾವು ಮಹರ್ಷಿಗೆ ಅನ್ಯಾಯ ಮಾಡುತ್ತೇವೆ ಮತ್ತು ನಾವೂ ಬಡವಾ-ಗುತ್ತೇವೆ. ಪಕ್ಷಿಗಳು, ಪ್ರಾಣಿಗಳು, ಮಕ್ಕಳು ಮತ್ತು ಅನಕ್ಷರಸ್ಥ ಜನ ರಮಣಮಹರ್ಷಿಗಳ ಪೂರ್ಣ ಸಾನ್ನಿಧ್ಯವನ್ನು ಅನುಭವಿಸಿದ ರೀತಿಯನ್ನು ವಿದ್ವಾಂಸರು ಅರ್ಥಮಾಡಿ-ಕೊಳ್ಳುವಂತಾಗಲಿ ವಿವರಿಸುವಂತಾಗಲಿ ಇರಲಿಲ್ಲ. ಆದ್ದರಿಂದ ನಾವು ಮಹರ್ಷಿಗಳನ್ನು ನಮ್ಮ ಸಾಮಾನ್ಯ ಜನತೆಯಿಂದ ಬೇರ್ಪಡಿಸಬಹುದಾದ ಒಬ್ಬ ಅಸಾಧಾರಣ ವ್ಯಕ್ತಿ ಎಂದು ಹೇಳಬಾರದು. ಅವರ ಪರಿಣಾಮಕಾರಿ ಅವ್ಯೆಯುಕ್ತಿಕತೆಯಲ್ಲಿ ಅವರು ಭಾರತದ ಜನತೆಯ ನಿಜವಾದ ಒಬ್ಬ ಪ್ರತಿನಿಧಿ. ಎಲ್ಲ ಮಾನವರಲ್ಲೂ ಇರುವ ಮಾದರಿ ಮಾನವ, ದೈವೀ ವಿಧಿಯನ್ನು ಪಾಲಿಸುತ್ತ, ಪ್ರಗತಿಪಥದಲ್ಲಿ ಸಾಗಿರುವ ಇಪ್ಪತ್ತನೆಯ ಶತಮಾನದ ಮಾನವನತೆಯ ಬೆಳೆಯುತ್ತಿರುವ ತುದಿ ಅವರು.

ಕಾರ್ಲ್ ಯಾಂಗ್ ಹೇಳುವಂತೆ-

''ಶ್ರೀರಮಣರು ಭಾರತದ ನೆಲದ ನಿಜವಾದ ಪುತ್ರ. ಅವರು ನೈಜವಾದವರು ಮತ್ತು ಅದರ ಜೊತೆಗೆ ಅಷ್ಟೇ ಅದ್ಭುತವಾದವರು. ಭಾರತದಲ್ಲಿ ಅವರು ಬಿಳಿಯ ಆಕಾಶದಲ್ಲಿನ ಒಂದು ಬಿಳಿ ಚುಕ್ಕೆ.''

''ಶ್ರೀರಮಣರ ಬದುಕು ಮತ್ತು ಉಪದೇಶಗಳಲ್ಲಿ ನಾವು ಕಾಣುವುದು ಭಾರತದಲ್ಲಿ ಅತ್ಯಂತ ವಿರುದ್ಧವಾದುದನ್ನು; ಪ್ರಪಂಚದಿಂದ ವಿಮುಕ್ತವಾದ ಮತ್ತು ವಿಮೋಚನೆಗೊಳಿಸುವ ಮಾನವಕುಲದ ಉಸಿರಿನಿಂದ ಕೂಡಿದ ಅದು ಧರ್ಮಯುಗಗಳ ಒಂದು ಹಾಡು. ಈ ರಾಗ ಒಂದೇ ಒಂದು ದೊಡ್ಡ ಮೂಲಭಾವದ ಮೇಲೆ ರಚಿತವಾಗಿದೆ. ಭಾರತೀಯ ಚೈತನ್ಯದೊಳಗೆ ಅದು ಬಣ್ಣ ಬಣ್ಣದ ಸಾವಿರಾರು ರೀತಿಗಳಲ್ಲಿ ಪ್ರತಿಫಲಿಸಿ ನವಚೈತನ್ಯ ಪಡೆಯುತ್ತದೆ. ಅದರ ಇತ್ತೀಚಿನ ಆವಿರ್ಭಾವವೇ ಶ್ರೀರಮಣಮಹರ್ಷಿ...''

''ಶ್ರೀರಮಣರ ಬದುಕು ಮತ್ತು ಉಪದೇಶಗಳು ಭಾರತೀಯರಿಗೆ ಮಾತ್ರವೇ ಅಲ್ಲದೆ ಪಾಶ್ಚಾತ್ಯರಿಗೂ ಮಹತ್ವವಾದವು. ಅವು ಬಹಳ ಮಾನವೀಯ ಆಸಕ್ತಿಯಿಂದ ಕೂಡಿದ ದಾಖಲೆಯಷ್ಟೇ ಆಗಿರದೆ, ತನ್ನ ಅಪ್ರಜ್ಞೆ ಮತ್ತು ಸಂಯಮರಾಹಿತ್ಯಗಳ ಗೊಂದಲಕ್ಕೆ ಸಿಲುಕಿ

ನಾಶವಾಗುವ ಅಪಾಯದಲ್ಲಿರುವ ಮಾನವಕುಲಕ್ಕೆ ಒಂದು ಎಚ್ಚರಿಕೆಯ ಸಂದೇಶವೂ ಆಗಿವೆ.''

*ಕ್ರೈಸ್ತ ಮತ ಮತ್ತು ವಿಶ್ವಧರ್ಮಗಳ ಸಮಾಗಮ*- ಎಂಬ ಗ್ರಂಥಗಳಲ್ಲಿ ಟಿಲ್ಲಿಚ್ ಹೀಗೆ ಹೇಳುತ್ತಾರೆ:

''ಭಕ್ತಿ. ಚಿಂತನೆ ಮತ್ತು ಕ್ರಿಯೆಗಳಿಂದ ಕೂಡಿದ ನಾವು ನಮ್ಮ ಮತದ ಆಳದೊಳಕ್ಕೆ ಇಳಿಯುತ್ತಿದ್ದಂತೆ ಮತವೇ ತನ್ನ ಪ್ರಾಮುಖ್ಯವನ್ನು ಕಳೆದುಕೊಳ್ಳುತ್ತದೆ. ಅದು ಯಾವುದರ ಕಡೆ ಕೈ ತೋರಿಸುತ್ತಿದೆಯೋ ಆ ಮತದ ವ್ಯಕ್ತಿ ವೈಶಿಷ್ಟ್ಯವನ್ನು ಭೇದಿಸಿಕೊಂಡು ಹೊರಬರುತ್ತದೆ ಮತ್ತು ಅದನ್ನು ಆಧ್ಯಾತ್ಮಿಕ ಸ್ವಾತಂತ್ರ್ಯದ ಸ್ಥಾನಕ್ಕೆ ಏರಿಸುತ್ತದೆ. ಅದರ ಜೊತೆಯಲ್ಲಿ ಮಾನವ ಜೀವನದ ಪರಮಾರ್ಥದ ಇತರ ಅಭಿವ್ಯಕ್ತಿಗಳಲ್ಲಿ ಇರುವ ಆಧ್ಯಾತ್ಮಿಕದ ದರ್ಶನದ ಮಟ್ಟಕ್ಕೂ ಅದನ್ನು ಏರಿಸುತ್ತದೆ.''

ಜೀವನ್ಮುಕ್ತರಾಗಿ ಮಹರ್ಷಿ ಮೂರ್ತೀಕರಿಸುವುದು ಮತ್ತು ಉಪದೇಶಿಸುವುದು ಈ ಆಧ್ಯಾತ್ಮಿಕ ಸ್ವಾತಂತ್ರ್ಯವನ್ನೇ, ಎಲ್ಲೆಲ್ಲಿಯೂ ಇರುವ ಆಧ್ಯಾತ್ಮಿಕದ ಈ ದರ್ಶನವನ್ನೇ. ಪ್ರತಿಯೊಂದು ಧರ್ಮದ (ಮೌಲ್ಯವ್ಯವಸ್ಥೆಯ) ಮತ್ತು ಪ್ರತಿಯೊಂದು ಸಂಘದ (ಸಮಾಜದ) ಗುರಿಯೂ ಅವನ್ನು ಮೀರಿದುದೂ ಆದ ಮೋಕ್ಷವು ಯಾವುದೋ ದೂರದ ನೆಲೆಯಲ್ಲ, ಚೈತನ್ಯದೊಡನೆ ಪ್ರತಿಯೊಬ್ಬ ವ್ಯಕ್ತಿಯ ಸದಾವರ್ತಮಾನ ಐಕ್ಯ ಅದು. ನಮ್ಮ ಎಲ್ಲ ಐಕ್ಯಗಳ ಐಕ್ಯವಾದ ಈ ಐಕ್ಯವನ್ನು ಗ್ರಹಿಸುವುದು ವಿವೇಕದಿಂದ ಸತ್ಯವನ್ನು ಅಂಗೀಕರಿಸುವುದಾಗಿರುತ್ತದೆ. ಅದು ನಮಗೆ ತೃಪ್ತಿಯನ್ನು ಮತ್ತು ನಾವು ನಮ್ಮ ಸಂಘದ ಹಾಗೂ ಇಡೀ ಮಾನವಕುಲದ ಜೀವಂತ ಕೇಂದ್ರವಾಗುವ ಧೈರ್ಯವನ್ನು ತಂದುಕೊಡುತ್ತದೆ.

Mahadevan, T. M. P. : *Ramana Maharshi and His Philosophy of Existence,* Sri Ramanasramam

Mehta Rohit : *Mountain Path,* Quarterly (1964 January onwards) Sri Ramanasramam

— *The Nameless Experience,* Bharatiya Vidya Bhavan

Muruganar : *Ramana Sannidhi Murai* (Tamil) Sri Ramanasramam

— *Akshara Mana Malai, Commentary* (Tamil) Sri Ramanasramam

— *Guru Vachaka Kovai* (Tamil), Sri Ramanasramam

Nagamma, Suri : *Letter from Sri Ramanasramam,* Sri Ramanasramam

Narasimhaswami, B. V. : *Self Realization : Life and Teachings of Ramana Maharshi,* Sri Ramanasramam

— *Commentary on "Upadesa Sara",* Sri Ramanasramam

Natanananda, Swami : *Ramana Darsan* (Tamil) Sri Ramanasramam

Osborne, Arthur : *Ramana Arunachala,* Sri Ramanasramam

— *Ramana Maharshi and the Path of Self Knowledge,* Rider

— *Teachings of Ramana Maharshi,* Sri Ramanasramam

Ramachandran, T. P. : *The Concept of Vyavahara in Advaita Vedanta,* Madras University

Ramana Maharshi : *Collected Works,* Sri Ramanasramam

— *Talks,* Sri Ramanasramam

Sadhu Om : *Path of Sri Ramana,* City Book House, Kanpur

Sarma, D. S. : *Hinduism Through the Ages,* Bharatiya Vidya Bhavan

— *Renascent Hinduism,* Bharatiya Vidya Bhavan

Sartre, Jean Paul : *Being and Nothingness,* Washington Square Press, New York

Tillich, Paul : *Dynamics of Faith,* Harper

— *The Courage to Be,* Collins—Fontana Library, London

Wei Wu Wei : *Fingers Pointing to the Moon,* Routledge

— *Ask the Awakened,* Routledge

— *Why Lazarus Laughed,* Routledge

— *All Else is Bondage,* Oxford University Press

— *The Open Secret,* Oxford University Press

— *The Tenth Man,* Oxford University Press

— *Posthumous Papers,* Oxford University Press

"Who" : *Mahayoga*, Sri Ramanasramam
— *Commentary on Forty Verses*, (Tamil) Sri Ramanasramam

Zimmer, Heinrich : *Philosophies of India*, Pantheon Books
— *Myths and Symbols in Indian Art and Civilization*, Pantheon Books

Lasertypeset at Crystal Hues, New Delhi and
printed at Shivam Offset, New Delhi